# ಪ್ರಸ್ತಾವನೆ

ಸ್ತೋತ್ರಗಳ ಮೂಲಕ ಭಗವಂತನನ್ನು ಆರಾಧಿಸುವುದಕ್ಕೆ ಹಲವು ಭಾವಪುಷ್ಪಗಳನ್ನು ಅಣಿಮಾಡಿ ಇಟ್ಟಿದೆ ಈ ಸ್ತವಕುಸುಮಾಂಜಲಿಯಲ್ಲಿ. ಇಲ್ಲಿರುವ ಪುಷ್ಪಗಳೆಲ್ಲ ಪ್ರಖ್ಯಾತ ಭಕ್ತರು, ಜ್ಞಾನಿಗಳು, ವೈರಾಗಿಗಳು ಆದ ಆಚಾರ್ಯಶ್ರೇಷ್ಠರ ಕೃತಿಗಳೆಂಬ ಹೂದೋಟದಿಂದ ಬಿಡಿಸಿ ತಂದವು. ಆ ಪರಮಭಕ್ತರು ಈ ಹೂದೋಟಕ್ಕೆ ತಮ್ಮ ಸಾಧನೆಯ ಜಲವನ್ನು ಧಾರೆ ಎರೆದು ಪೋಷಿಸಿದರು. ಈ ಪುಷ್ಪಗಳನ್ನು ಅವರೇ ಹೃತ್ಪೂರ್ವಕವಾಗಿ ಭಗವಂತನ ಅಡಿದಾವರೆಗಳಿಗೆ ಅರ್ಪಿಸಿದರು. ಅವರ ಹೃದಯದಲ್ಲಿದ್ದ ಭಕ್ತಿ, ಶ್ರದ್ಧೆ, ಪ್ರೀತಿ, ಜ್ಞಾನ ಮುಂತಾದ ದಿವ್ಯಭಾವಗಳ ಪರಿಮಳದಿಂದ ತುಂಬಿವೆ ಈ ಸ್ತವಪುಷ್ಪಗಳು. ಅವರ ತಪಸ್ಸಿನಿಂದ, ಸಾಕ್ಷಾತ್ಕಾರದಿಂದ, ಅವರಿಗೆ ಬಂದ ಆಧ್ಯಾತ್ಮಿಕ ಅನುಭವಗಳಿಂದ ತುಂಬಿತುಳುಕಾಡುತ್ತಿವೆ ಇಲ್ಲಿರುವ ಪ್ರಾರ್ಥನೆಗಳು. ಇವುಗಳೆಲ್ಲ ಅತಿ ಉಚ್ಚವರ್ಗಕ್ಕೆ ಸೇರಿದವು. ಮತ, ಕೋಮು, ಜಾತಿ, ಪಂಥಗಳೆಂಬ ಅಲ್ಪದೃಷ್ಟಿಗೆ ಎಡೆ ಇಲ್ಲಿ ಇಲ್ಲ. ಎಲ್ಲಾ ಸಾಧಕರಿಗೂ ಅವರು ಯಾವ ಪಥವನ್ನಾದರೂ ಅನುಸರಿಸುತ್ತಿರಲಿ ಅವರಿಗೆ ಆಧ್ಯಾತ್ಮ ಜೀವನದಲ್ಲಿ ಪೋಷಕವಾಗುವಂತಹವು ಇಲ್ಲಿರುವುದು.

ಆಧ್ಯಾತ್ಮಿಕ ಜೀವನದಲ್ಲಿ ಹಲವು ಮೆಟ್ಟಲುಗಳಿವೆ. ನಮ್ಮ ಮನಸ್ಸು ಒಂದೊಂದು ವೇಳೆ ಒಂದೊಂದು ಮೆಟ್ಟಲಿನಲ್ಲಿರುವುದು. ಬಾಹ್ಯಪೂಜೆ ಒಂದು ವೇಳೆ ನಮಗೆ ಹಿಡಿಸುವುದು, ಗೀತಾಪಾರಾಯಣ, ಸ್ತೋತ್ರಪಠನ ಒಂದು ವೇಳೆ ರುಚಿಸುವುದು; ದೇವರ ಯಾವುದೋ ಒಂದು ಹೆಸರನ್ನು ಹಿಡಿದುಕೊಂಡು ಜಪಮಾಡುವುದಕ್ಕೆ ಕೆಲವು ವೇಳೆ ಮನಸ್ಸಿಗೆ ಆಸೆಯಾಗುವುದು. ಕೆಲವು ವೇಳೆ ನಮ್ಮ ಮನಸ್ಸು ಭಗವತ್ಸಾಗರಕ್ಕೆ ಹರಿದುಹೋಗುವಂತೆ ಧ್ಯಾನಮಾಡಬೇಕೆಂದು ಬಯಸುವುದು. ಮತ್ತೆ ಕೆಲವು ವೇಳೆ– ಅದು ಬಹಳ ಅಪರೂಪವಿರಬಹುದು ಸಾಧಕರ ಜೀವನದಲ್ಲಿ–ಮನಸ್ಸು ಸಂಪೂರ್ಣವಾಗಿ ಭಗವಂತನಲ್ಲಿ ತನ್ಮಯವಾಗುವುದು.

ಸ್ತೋತ್ರಗಳು ಸಾಧಕರಿಗೆ ಬಹಳ ಸಹಕಾರಿ. ಇವನ್ನು ಓದಿದಾಗ ಭಕ್ತಿಭಾವಗಳು ನಮ್ಮಲ್ಲಿ ಉದ್ದೀಪನವಾಗುವುವು. ಜಪ ಧ್ಯಾನಮಾಡು

ವುದಕ್ಕೆ ಮುಂಚೆ ಇವನ್ನು ಓದಿದರೆ ನಮ್ಮ ಮನಸ್ಸು ತಾನಾಗಿ ಮೇಲಿನ ಮಟ್ಟಕ್ಕೆ ಹೋಗಿ ನಮ್ಮ ಜಪ ಮತ್ತು ಧ್ಯಾನ ಹೆಚ್ಚು ಫಲಕಾರಿಯಾಗುವಂತೆ ಮಾಡುವುವು. ಜಪಧ್ಯಾನಾದಿಗಳ ನಂತರ ಇವನ್ನು ಓದಿದರೆ ಭಗವಂತನ ಭಾವಗಳು ನಮ್ಮ ಮನಸ್ಸಿನಲ್ಲಿ ಹೆಚ್ಚುಕಾಲ ಸಂಚರಿಸುತ್ತಿರುವುದಕ್ಕೆ ಸಹ ಕಾರಿಯಾಗುವುದು. ಕಠಿಣವಾದ ಸಾಧನದ ಹಾದಿಯಲ್ಲಿ ಪಯಣಮಾಡು ತ್ತಿರುವವನ ಕೈಯಲ್ಲಿ ಇರುವ ಒಂದು ಊರುಗೋಲಿನಂತೆ ಇದೆ ಸ್ತೋತ್ರ ಗಳೆಂಬುದು.

ಹೇಗೆ ಹಿಮಾಲಯದಿಂದ ಸಿಂಧು, ಗಂಗಾ, ಬ್ರಹ್ಮಪುತ್ರ ಎಂಬ ಮಹಾ ನದಿಗಳು ಹರಿದು ಬಂದು ಬಯಲನ್ನೆಲ್ಲಾ ಫಲವತ್ತಾಗಿ ಮಾಡಿ ಸಾಗರವನ್ನು ಸೇರುವುವೋ ಹಾಗೆಯೇ ನಮ್ಮ ಧರ್ಮ ಮತ್ತು ದರ್ಶನದ ಹಿಮಾಲಯ ದಿಂದ ಭಗವಂತನ ಆವಿರ್ಭಾವಗಳಾದ ಶಿವ, ವಿಷ್ಣು, ದೇವಿ ಎಂಬ ಮೂರು ಮಹಾನದಿಗಳು ಹರಿದುಬಂದು ಕೋಟ್ಯಂತರ ಜೀವಿಗಳನ್ನು ಉದ್ಧರಿಸಿ ಸಾಗರವನ್ನು ಸೇರುತ್ತಿವೆ. ಎಲ್ಲಾ ಹಿಂದೂಗಳೂ ಅವರು ಯಾವ ಮತಕ್ಕೆ ಸೇರಿರಲಿ, ಯಾವ ತತ್ತ್ವಕ್ಕೆ ಸೇರಿರಲಿ, ಅವರು ಉಪಾಸನಾಕ್ಷೇತ್ರದಲ್ಲಿ ಇರುವ ವರೆಗೆ ಈ ಮೂರು ಭಾವನೆಗಳಲ್ಲಿ ಯಾವುದಾದರೂ ಒಂದಕ್ಕೆ ಶರಣರಾಗಿ ಮುಂದುವರಿಯುತ್ತಿರುವರು. ಈ ದೃಷ್ಟಿಯಿಂದ ಇಲ್ಲಿ ಬರುವ ಶ್ಲೋಕಗಳಲ್ಲಿ ಕೆಲವು ಶಿವನಿಗೆ, ಕೆಲವು ವಿಷ್ಣು ಮತ್ತು ಆತನ ಅಂಶಗಳಾದ ಇತರ ಅವತಾರ ಗಳಿಗೆ, ಕೆಲವು ಶಿವಶಕ್ತಿರೂಪಳಾದ ಅಥವಾ ವಿಷ್ಣುಶಕ್ತಿರೂಪಳಾದ ದೇವಿಗೆ ಸಂಬಂಧಪಟ್ಟಿವೆ. ಕೊನೆಗೆ ಬರುವುದೇ ಅಖಂಡ ಬ್ರಹ್ಮಾನುಭವದ ಅದ್ವೈತ ಸ್ತೋತ್ರಗಳು. ಆತ್ಮ ಆಗ ಕಾಲದೇಶನಿಮಿತ್ತಾತೀತವಾಗಿ ಹೋಗುವುದು. ನದಿ ಸಾಗರದಲ್ಲಿ ಐಕ್ಯವಾದಾಗ ಹೇಗೆ ಅದರ ವೈಶಿಷ್ಟ್ಯತೆ ಮಾಯವಾಗು ವುದೋ, ಹೇಗೆ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳುವುದೋ, ಹಾಗೆ ಪರಬ್ರಹ್ಮ ನಲ್ಲಿ ಐಕ್ಯನಾದವನು ಎಲ್ಲವೂ ಬ್ರಹ್ಮಮಯ ಎಂಬ ದೃಷ್ಟಿಯಿಂದ ನೋಡು ವನು. ಇದರಲ್ಲಿ ಯಾವುದರ ಮೇಲೆ ಸಾಧಕರಿಗೆ ಅಭಿರುಚಿ ಇರುವುದೋ ಅದನ್ನು ಆರಿಸಿಕೊಂಡು ಅದರಲ್ಲಿರುವ ಭಾವಗಳನ್ನು ಮತ್ತೆ ಮತ್ತೆ ಮನನ ಮಾಡಬಹುದು ಅಥವಾ ತನ್ನ ಇಷ್ಟದೈವವೇ ಎಲ್ಲಾ ದೇವದೇವಿಯರ ರೂಪ ಗಳಲ್ಲಿ ಇರುವುದು ಎಂದು ಒಂದಾದಮೇಲೊಂದು ಸ್ತೋತ್ರಗಳನ್ನು ಬೇಕಾದರೆ ಪಠಿಸಬಹುದು.

ಭಕ್ತ ಭಗವಂತನೆಡೆಗೆ ಹೋಗುವಾಗ ಹಲವು ಭಾವಗಳು ಅವನ ಮನದಲ್ಲಿ ಮೂಡಿಹೋಗುತ್ತವೆ. ಕೆಲವು ವೇಳೆ ತಾನು ಮಾಡಿದ ಪಾಪದ ಹೊರೆಯು ಅರಿವಾಗಿ ಅದನ್ನು ಹಗುರಮಾಡೆಂದು ಬೇಡುವನು. ಕೆಲವು ವೇಳೆ ಸಂಶಯದ ಕಾನನದಲ್ಲಿ ಅಲೆದಾಡಿ ದಾರಿಕಾಣದಾಗ ತನ್ನನ್ನು ಪಾರು ಮಾಡೆಂದು ಬೇಡುವನು. ಭಗವಂತನನ್ನು ಎಂದು ನೋಡುವೆನೋ ಎಂದು ಕಾತರಿಸುವ ಸ್ವಭಾವ ಒಮ್ಮೆ, ಮಿಂಚಿ ಮಾಯವಾದ ಭಗವಂತನಿಗೆ ಪಡುವ ವಿರಹವ್ಯಥೆಯೊಮ್ಮೆ, ಆತನ ದರ್ಶನಾನಂದದಲ್ಲಿ ಮೈಮರೆತಾಗ ಜಿನುಗುವ ಆನಂದಲಹರಿಯೊಮ್ಮೆ, ಒಂದಾದಮೇಲೆ ಒಂದು ಬಂದುಹೋಗುತ್ತಿರುತ್ತವೆ. ಒಮ್ಮೆ ದೇವರ ಮೇಲೆ ಕೋಪಮಾಡಿಕೊಳ್ಳುವನು, ಒಮ್ಮೆ ದೇವರನ್ನು ಪ್ರೀತಿಸುವನು, ಒಮ್ಮೆ ಅವನೊಂದಿಗೆ ಜಗಳ ಕಾಯುವನು, ಮತ್ತೊಮ್ಮೆ ಅವನೊಂದಿಗೆ ರಾಜಿಮಾಡಿಕೊಳ್ಳುವನು. ಇಂತಹ ಹಲವು ಭಾವಗಳ ಗೊಂಚಲು ಸ್ತವಕುಸುಮಾಂಜಲಿಯಲ್ಲಿ ಮೊದಲಿನಿಂದ ಕೊನೆವರೆಗೆ ವಿರಾಜಿಸುತ್ತಿದೆ. "ನೀನು ನನ್ನನ್ನು ಉದ್ಧಾರಮಾಡದೇ ಇದ್ದರೆ ದುಃಖಪಡುವೆ; ಅದೇನೂ ನನಗೆ ಹೊಸದಲ್ಲ. ಆದರೆ ನಿನ್ನಲ್ಲಿ ಶರಣಾಗತನಾದವನೊಬ್ಬನು ನೋತ ಎಂದರೆ ನಿನಗೇ ಅಪಖ್ಯಾತಿ" ಎಂದು ಯಾಮುನಾಚಾರ್ಯರು ದೇವರನ್ನು ಕಾಡುವರು. "ದೇವರು ನನ್ನನ್ನು ಆಲಂಗಿನಲಿ, ಆಚೆಗೆ ದಬ್ಬಲಿ, ಹಿಡಿದುಕೊಂಡು ಹೊಡೆಯಲಿ, ಬಡಿಯಲಿ ಅವನೇ ನನ್ನ ಪ್ರಾಣನಾಥ, ನನಗೆ ಇನ್ನು ಯಾರೂ ಗತಿಯಿಲ್ಲ" ಎಂದು ಆ ಭಕ್ತಾಗ್ರಣಿ ಚೈತನ್ಯರು ಪ್ರಾರ್ಥಿಸುವರು. ತಾಯಿ ಕೋಪದಿಂದ ಮಗುವನ್ನು ಹೊಡೆದು ಆಚೆಗೆ ಅಟ್ಟಿದರೆ ಅದು ಹೋಗುವುದೆಲ್ಲಿಗೆ? ಅದಕ್ಕೆ ಗತಿ ಯಾರು? ಹೊಡೆದವಳೇ ಅದನ್ನು ಎತ್ತಿಕೊಳ್ಳಬೇಕಾಗುವುದು. ಭಕ್ತರು ಮಾನವಸಹಜವಾದ ಭಾಷೆಯಲ್ಲಿ ಈ ರೀತಿ ಭಗವಂತನೊಂದಿಗೆ ವ್ಯವಹರಿಸುವರು. ಶಂಕರಾಚಾರ್ಯರು, ರಾಮಾನುಜಾಚಾರ್ಯರು, ಮಧ್ವಾಚಾರ್ಯರು, ಚೈತನ್ಯಾದಿಗಳು ಪರತತ್ತ್ವದ ವಿಷಯವಾಗಿ ಬರೆದ ಗ್ರಂಥಗಳು ಮಾನವಕೋಟಿಯಲ್ಲಿ ಎಲ್ಲೋ ಅಲ್ಪಮಂದಿಗೆ ಹಿಡಿಸಬಹುದು. ಅವರ ಯುಕ್ತಿ, ಪಾಂಡಿತ್ಯವನ್ನು ನಾವು ನೋಡಿ ಬೆರಗಾಗಬಹುದು. ಆದರೆ ಅವು ಎಲ್ಲರಿಗೂ ರುಚಿಸಲಾರವು. ಎಲ್ಲರ ಹೃದಯವನ್ನೂ ಮಿಡಿಯಲಾರವು. ಇಲ್ಲಿ ಬರುವ ಸ್ತೋತ್ರಗಳಾದರೋ ಪಂಡಿತನಿಂದ ಪಾಮರನ ವರೆಗೆ, ಯತಿಯಿಂದ ಗೃಹಸ್ಥನ ವರೆಗೆ, ಧರ್ಮಾತ್ಮ

ನಿಂದ ಪಾಪಿಯ ವರೆಗೆ–ಅವರಲ್ಲಿ ಸ್ವಲ್ಪ ಆಸ್ತಿಕತೆ ಇದ್ದರೆ ಸಾಕು–ಆಬಾಲ ವೃದ್ಧರ ಹೃದಯಗಳನ್ನು ಹಿಂಡಿ ಭಕ್ತಿ ಹನಿತೊಟ್ಟಿಕ್ಕುವಂತೆ ಮಾಡಬಲ್ಲವು. ಆಚಾರ್ಯರ ಭಾಷ್ಯಗಳಲ್ಲಿ, ಟೀಕೆಗಳಲ್ಲಿ, ಅವರ ಜ್ಞಾನ, ಪಾಂಡಿತ್ಯ, ಪ್ರತಿಭೆ, ಇವು ಕಂಡುಬರುತ್ತವೆ. ಇಲ್ಲಿ, ಈ ಸ್ತೋತ್ರಗಳಲ್ಲಿ, ಅವರ ಹೃದಯದಲ್ಲಿ ಸುಪ್ತವಾಗಿರುವ ಭಕ್ತಿ ಪ್ರಪತ್ತಿಗಳು ಹಲವು ಆಕಾರಗಳನ್ನು ತಾಳಿ ಮೇಲೇಳುವ ನೀರಿನ ಬುಗ್ಗೆಗಳಂತಿವೆ. ಭಗವಂತನಿಗೆ ಸಂಬಂಧಪಟ್ಟ ಹಲವು ಭಾವಗಳಿಲ್ಲಿವೆ, ಹಲವು ರಸಗಳಿಲ್ಲಿವೆ, ತತ್ತ್ವದ ಹಲವು ದೃಷ್ಟಿಗಳು ಇಲ್ಲಿ ಸಂಗಮವಾಗಿವೆ.

ಇಲ್ಲಿ ಬರುವ ಸ್ತೋತ್ರಗಳೆಲ್ಲ ಪರಾಭಕ್ತಿಯ ದೃಷ್ಟಿಯಿಂದ ಆಯ್ದವುಗಳು. ಪ್ರಪಂಚದ ಐಶ್ವರ್ಯ, ಕೀರ್ತಿ, ಲಾಭ, ಯಶಸ್ಸು, ಸತಿಸುತರು ಮುಂತಾದ ಯಾವುದನ್ನೂ ಭಕ್ತರು ಯಾಚಿಸುವುದಿಲ್ಲ. ಭಕ್ತಿದಾರಿದ್ರ್ಯವನ್ನು ಹೋಗಲಾಡಿಸು ಎನ್ನುವರು, ಭವರೋಗವ್ಯಾಧಿಯನ್ನು ಪರಿಹರಿಸು ಎನ್ನುವರು, ಜನನಮರಣಗಳ ಕೋಟಲೆಯಿಂದ ಪಾರುಮಾಡು ಎನ್ನುವರು, ನೀನು ಕುಂಭೀಪಾಕವೆಂಬ ನರಕಕ್ಕೆ ತಳ್ಳಿದರೂ ಚಿಂತೆಯಿಲ್ಲ, ನಿನ್ನ ಸ್ಮರಣೆಯೊಂದಿದ್ದರೆ ಸಾಕು ಎಂದು ಬೇಡುವರು. ಕುಲಶೇಖರ ಆಳ್ವಾರರು ಮುಕುಂದಮಾಲೆಯಲ್ಲಿ ಪರಾಭಕ್ತಿಯ ನಿದರ್ಶನವಾಗಿರುವ ಆ ಶ್ಲೋಕವನ್ನು ಎಷ್ಟು ಮನೋಹರವಾಗಿ ಹೇಳಿರುವರು: "ಹೇ ಭಗವಂತನೇ, ನನಗೆ ಧರ್ಮದಲ್ಲಾಗಲಿ, ವಿಷಯಸಂಚಯದಲ್ಲಾಗಲಿ, ಭೋಗದಲ್ಲಾಗಲಿ ಆಸಕ್ತಿಯಿಲ್ಲ. ಪೂರ್ವಕರ್ಮಾನುಸಾರ ಯಾವುದು ಹೇಗೆ ನಡೆಯಬೇಕೋ ಹಾಗೆ ನಡೆದುಹೋಗಲಿ; ಆದರೆ ನಾನು ಅತಿ ಮುಖ್ಯ ಎಂದು ಭಾವಿಸುವ ಪ್ರಾರ್ಥನೆ ಇದು: ಈ ಜನ್ಮದಲ್ಲಿ ಮತ್ತು ಮುಂದೆ ಬರಬಹುದಾದ ಇತರ ಜನ್ಮಗಳಲ್ಲಿ ಕೂಡ ನಿನ್ನ ಅಡಿದಾವರೆಗಳಲ್ಲಿ ಭಕ್ತಿ ನಿಶ್ಚಲವಾಗಿರಲಿ."

ಸ್ತವಕುಸುಮಾಂಜಲಿ ಸಾಧಕರ ಕೈದೀವಿಗೆಯಂತೆ ಇದೆ. ಈ ದೀವಿಗೆಗೆ ಭಕ್ತಶ್ರೇಷ್ಠರೂ, ಜ್ಞಾನಿಪುಂಗವರೂ ತಮ್ಮ ತಪಸ್ಸಿನ ತೈಲವನ್ನು ಧಾರೆ ಎರೆದಿರುವರು. ದುಃಖ, ನಿರಾಶೆ, ಸಂಶಯ ಮತ್ತು ಹಲವು ಪ್ರಲೋಭನೆಗಳಿಂದ ತಾಡಿತವಾಗುತ್ತಿರುವ ಮನಸ್ಸಿಗೆ ಅವುಗಳನ್ನು ಎದುರಿಸುವ ಶಕ್ತಿ ಇಲ್ಲಿದೆ. ಕನ್ನಡನಾಡಿನಲ್ಲಿ ಇಂತಹ ಒಂದು ಗ್ರಂಥ ಅಪರೂಪವೆಂದು ಹೇಳಬಹುದು. ಈ ಬಗೆಯ ಸಾಹಿತ್ಯಕ್ಕೆ ನಮ್ಮ ಅಲ್ಪಕಾಣಿಕೆಯನ್ನು ಈ ಸ್ತವಕುಸುಮಾಂಜಲಿಯ ಮೂಲಕ ಸಮರ್ಪಿಸಿರುವೆವು.

# ವಿಷಯಾನುಕ್ರಮಣಿಕೆ

# ಪ್ರಾರ್ಥನೆ

**ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾನ್ತಿನಃ**
**ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ।**
**ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ**
**ಸೋಽಯಂ ವೋ ವಿದಧಾತು ವಾಂಛಿತಫಲಂ ತ್ರೈಲೋಕ್ಯ-**
**ನಾಥೋ ಹರಿಃ ॥**

ಶೈವರು ಶಿವನೆಂದೂ, ವೇದಾಂತಿಗಳು ಬ್ರಹ್ಮನೆಂದೂ, ಬೌದ್ಧರು ಬುದ್ಧನೆಂದೂ, ವಿಚಾರಪಟುಗಳಾದ ನೈಯಾಯಿಕರು ಕರ್ತನೆಂದೂ, ಜೈನ ಶಾಸನವನ್ನು ಅನುಸರಿಸುವವರು ಅರ್ಹತ್ ಎಂದೂ, ಮೀಮಾಂಸಕರು ಕರ್ಮವೆಂದೂ ಯಾರನ್ನು ಉಪಾಸಿಸುವರೋ, ಅಂತಹ ತ್ರೈಲೋಕ್ಯ ನಾಥನಾದ ಹರಿಯು ನಮ್ಮ ಇಷ್ಟಫಲಗಳನ್ನು ಕೊಡಲಿ.

# ಶಾಂತಿ ಪಾಠಗಳು

ಓಂ ಅಸತೋ ಮಾ ಸದ್ಗಮಯ ।
ತಮಸೋ ಮಾ ಜ್ಯೋತಿರ್ಗಮಯ ।
ಮೃತ್ಯೋರ್ಮಾಽಮೃತಂ ಗಮಯ ॥

ಓಂ ಶಾಂತಿಃ ಶಾಂತಿಃ ಶಾಂತಿಃ । ॥ ೧ ॥

ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥

ಓಂ ಶಾಂತಿಃ ಶಾಂತಿಃ ಶಾಂತಿಃ । ॥ ೨ ॥

ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ
ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ।
ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿಃ
ವ್ಯಶೇಮ ದೇವಹಿತಂ ಯದಾಯುಃ ॥

ಓಂ ಶಾಂತಿಃ ಶಾಂತಿಃ ಶಾಂತಿಃ । ॥ ೩ ॥

ಓಂ ಆಪ್ಯಾಯಂತು ಮಮಾಂಗಾನಿ ವಾಕ್ ಪ್ರಾಣಶ್ಚಕ್ಷುಃ ಶ್ರೋತ್ರಮಥೋ ಬಲಮಿಂದ್ರಿಯಾಣಿ ಚ ಸರ್ವಾಣಿ । ಸರ್ವಂ ಬ್ರಹ್ಮೋಪನಿಷದಂ ಮಾಽಹಂ ಬ್ರಹ್ಮ ನಿರಾಕುರ್ಯಾಮ್ । ಮಾ ಮಾ ಬ್ರಹ್ಮ ನಿರಾಕರೋತ್ । ಅನಿರಾಕರಣಮಸ್ತ್ವನಿರಾಕರಣಂ ಮೇಽಸ್ತು । ತದಾತ್ಮನಿ ನಿರತೇ ಯ ಉಪನಿಷತ್ಸು ಧರ್ಮಾಸ್ತೇ ಮಯಿ ಸಂತು ತೇ ಮಯಿ ಸಂತು ॥

ಓಂ ಶಾಂತಿಃ ಶಾಂತಿಃ ಶಾಂತಿಃ । ॥ ೪ ॥

# ಶಾಂತಿಪಾಠಗಳು

೧. ಓಂ. ಅಸತ್ತಿನಿಂದ ಸತ್ತಿಗೆ ನನ್ನನ್ನು ನಡೆಸು; ಅಂಧಕಾರದಿಂದ ಜ್ಯೋತಿಗೆ ನನ್ನನ್ನು ನಡೆಸು; ಮೃತ್ಯುವಿನಿಂದ ಅಮೃತತ್ವಕ್ಕೆ ನನ್ನನ್ನು ನಡೆಸು.

ಓಂ ಶಾಂತಿಃ ಶಾಂತಿಃ ಶಾಂತಿಃ

೨. ಓಂ. ಅದು (ಬ್ರಹ್ಮ) ಪೂರ್ಣ, ಇದು (ಜಗತ್ತು) ಕೂಡ ಪೂರ್ಣ. ಪೂರ್ಣಬ್ರಹ್ಮನಿಂದ ಪೂರ್ಣವಾದ ಜಗತ್ತು ಹೊರಹೊಮ್ಮಿದೆ; ಹೀಗೆ ಜಗತ್ತೆಲ್ಲವೂ ಬ್ರಹ್ಮನಿಂದ ಹೊರಬಂದುದಾದರೂ ಬ್ರಹ್ಮನು ಪರಿಪೂರ್ಣನೇ.

ಓಂ ಶಾಂತಿಃ ಶಾಂತಿಃ ಶಾಂತಿಃ

೩. ಓಂ. ಹೇ ಜ್ಯೋತಿಸ್ವರೂಪಿಗಳಾದ ದೇವತೆಗಳೇ, ಮಂಗಳಕರವಾದುದನ್ನು ನಮ್ಮ ಕಿವಿಗಳು ಕೇಳಲಿ; ಹೇ ಪೂಜಾರ್ಹರೇ, ಪವಿತ್ರವಾದುದನ್ನು ನಮ್ಮ ಕಣ್ಣುಗಳು ನೋಡಲಿ; ನಿಮ್ಮನ್ನು ನಾವು ಸ್ತುತಿಸುತ್ತಾ ದೇವರು ನಮಗೆ ಕೊಟ್ಟಿರುವ ಆಯುಸ್ಸನ್ನು ಆರೋಗ್ಯ ದೃಢಕಾಯರಾಗಿ ಕಳೆಯುವಂತಾಗಲಿ.

ಓಂ ಶಾಂತಿಃ ಶಾಂತಿಃ ಶಾಂತಿಃ

೪. ಓಂ. ನನ್ನ ಬಾಹ್ಯ ಅಂಗಗಳೂ, ವಾಕ್‌ಶಕ್ತಿ, ಪ್ರಾಣ, ಕಣ್ಣು, ಕಿವಿ ಮುಂತಾದ ಎಲ್ಲಾ ಇಂದ್ರಿಯಗಳೂ, ಬಲವೂ ಪ್ರವರ್ಧಿಸಲಿ. ಎಲ್ಲವೂ ಉಪನಿಷತ್ತುಗಳಲ್ಲಿ ಉಕ್ತನಾಗಿರುವ ಬ್ರಹ್ಮನೇ. ಆ ಪರಬ್ರಹ್ಮವಸ್ತುವನ್ನು ನಾನು ಎಂದೆಂದಿಗೂ ನಿರಾಕರಿಸದಂತಿರಲಿ. ನನ್ನನ್ನು ಬ್ರಹ್ಮನು ನಿರಾಕರಿಸದಿರಲಿ. ನಿರಾಕರಣವೆಂಬುದೇ ಇರದಿರಲಿ. ಕೊನೆಗೆ ನನ್ನಿಂದಾದರೂ ನಿರಾಕರಣೆಯಿಲ್ಲದಿರಲಿ. ಉಪನಿಷತ್ತುಗಳಲ್ಲಿ ಉಕ್ತವಾಗಿರುವ ಧರ್ಮಸಮಸ್ತವೂ ಆತ್ಮನಿರತನಾದ ನನ್ನಲ್ಲಿ ಕಾಣಿಸಿಕೊಳ್ಳಲಿ.

ಓಂ ಶಾಂತಿಃ ಶಾಂತಿಃ ಶಾಂತಿಃ

ಓಂ ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ॥
ಓಂ ಶಾಂತಿಃ ಶಾಂತಿಃ ಶಾಂತಿಃ । ॥ ೫ ॥

ಓಂ ದ್ಯೌಃ ಶಾಂತಿರಂತರಿಕ್ಷಂ ಶಾಂತಿಃ । ಪೃಥಿವೀ ಶಾಂತಿ-ರಾಪಃ ಶಾಂತಿರೋಷಧಯಃ ಶಾಂತಿಃ । ವನಸ್ಪತಯಃ ಶಾಂತಿರ್ವಿ-ಶ್ವೇ ದೇವಾಃ ಶಾಂತಿರ್ಬ್ರಹ್ಮ ಶಾಂತಿಃ ಸರ್ವಂ ಶಾಂತಿಃ ಶಾಂತಿ-ರೇವ ಶಾಂತಿಃ ॥ ॥ ೬ ॥

ಓಂ ಶಂ ನೋ ಮಿತ್ರಃ ಶಂ ವರುಣಃ ।
ಶಂ ನೋ ಭವತ್ವರ್ಯಮಾ ।
ಶಂ ನ ಇಂದ್ರೋ ಬೃಹಸ್ಪತಿಃ ।
ಶಂನೋ ವಿಷ್ಣುರುರುಕ್ರಮಃ ।
ನಮೋ ಬ್ರಹ್ಮಣೇ ।
ನಮಸ್ತೇ ವಾಯೋ ।
ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ ।
ತ್ವಾಮೇವ ಪ್ರತ್ಯಕ್ಷಂ ಬ್ರಹ್ಮವದಿಷ್ಯಾಮಿ ।
ಋತಂ ವದಿಷ್ಯಾಮಿ ।
ಸತ್ಯಂ ವದಿಷ್ಯಾಮಿ ।
ತನ್ಮಾಮವತು ।
ತದ್ವಕ್ತಾರಮವತು ।
ಅವತು ಮಾಂ ।
ಅವತು ವಕ್ತಾರಂ ॥
ಓಂ ಶಾಂತಿಃ ಶಾಂತಿಃ ಶಾಂತಿಃ । ॥ ೭ ॥

ಬ್ರಹ್ಮ ಮೇಧಯಾ । ಮಧು ಮೇಧಯಾ । ಬ್ರಹ್ಮಮೇವ ಮಧುಮೇಧಯಾ ॥ ೮ ॥

ತೈತ್ತಿರೀಯ ಆರಣ್ಯಕ ೧೦–೪೯

೫. ಓಂ. ಪರಬ್ರಹ್ಮನು ಗುರುಶಿಷ್ಯರಾದ ನಮ್ಮಿಬ್ಬರನ್ನೂ ರಕ್ಷಿಸಲಿ, ನಮ್ಮಿಬ್ಬರನ್ನೂ ಪೋಷಿಸಲಿ, ಜೊತೆ ಜೊತೆಯಲ್ಲಿಯೇ ನಾವಿಬ್ಬರೂ ವೀರ್ಯವತ್ತಾದ ಕಾರ್ಯವನ್ನು ಮಾಡೋಣ.

ಓಂ ಶಾಂತಿಃ ಶಾಂತಿಃ ಶಾಂತಿಃ

೬. ಓಂ. ಊರ್ಧ್ವಲೋಕದಲ್ಲಿ ಶಾಂತಿ ನೆಲಸಲಿ; ಅಂತರಿಕ್ಷದಲ್ಲಿ ಶಾಂತಿ ನೆಲಸಲಿ; ಭೂಲೋಕದಲ್ಲಿ ಶಾಂತಿ ನೆಲಸಲಿ; ನೀರಿನಲ್ಲಿ ಶಾಂತಿ ನೆಲಸಲಿ; ಗಿಡಮರಬಳ್ಳಿಗಳಲ್ಲಿ ಶಾಂತಿ ನೆಲಸಲಿ; ದೇವತೆಗಳಲ್ಲಿ ಶಾಂತಿ ನೆಲಸಲಿ; ಬ್ರಹ್ಮನಲ್ಲಿ ಶಾಂತಿ ನೆಲಸಲಿ; ಎಲ್ಲೆಲ್ಲಿಯೂ ಶಾಂತಿ ನೆಲಸಲಿ; ಅಂತಹ ಪ್ರಶಾಂತವಾದ ಶಾಂತಿಯು ನನ್ನದಾಗಲಿ.

ಓಂ ಶಾಂತಿಃ ಶಾಂತಿಃ ಶಾಂತಿಃ

೭. ಓಂ. ಸೂರ್ಯ, ವರುಣ, ಅರ್ಯಮನ್, ಇಂದ್ರ, ಬೃಹಸ್ಪತಿ, ಸರ್ವ ವ್ಯಾಪಿಯಾದ ವಿಷ್ಣು — ಈ ಎಲ್ಲಾ ದೇವತೆಗಳೂ ನಮಗೆ ಶುಭದಾಯಕ ರಾಗಲಿ; ಬ್ರಹ್ಮನಿಗೆ ನಮಸ್ಕಾರ; ವಾಯುದೇವನಿಗೆ ನಮಸ್ಕಾರ; ನೀನೇ ಪ್ರತ್ಯಕ್ಷ ಪರಬ್ರಹ್ಮಸ್ವರೂಪಿ; ನೀನೇ ಪ್ರತ್ಯಕ್ಷ ಪರಬ್ರಹ್ಮನೆಂದು ಸಾರಿ ಹೇಳುತ್ತೇನೆ. ಧರ್ಮವಾದುದನ್ನೇ ನುಡಿಯುತ್ತೇನೆ. ಸತ್ಯವಾದುದನ್ನೇ ನುಡಿಯುತ್ತೇನೆ. ನನ್ನನ್ನು ಪರಬ್ರಹ್ಮನು ರಕ್ಷಿಸಲಿ, ಉಪಾಧ್ಯಾಯನನ್ನು ಪರಬ್ರಹ್ಮನು ರಕ್ಷಿಸಲಿ.

ಓಂ ಶಾಂತಿಃ ಶಾಂತಿಃ ಶಾಂತಿಃ

೮. ನಾವು ನಮ್ಮ ಪರಿಶುದ್ಧವಾದ ಬುದ್ಧಿಯಿಂದ ಬ್ರಹ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳೋಣ. ನಾವು ಪರಮಾನಂದವನ್ನು ಪರಿಶುದ್ಧವಾದ ಬುದ್ಧಿಯಿಂದ ಸಾಕ್ಷಾತ್ಕಾರ ಮಾಡಿಕೊಳ್ಳೋಣ. ಪರಮಾನಂದವಾದ ಬ್ರಹ್ಮನನ್ನು ನಮ್ಮ ಪರಿಶುದ್ಧ ಬುದ್ಧಿಯಿಂದ ಸಾಕ್ಷಾತ್ಕಾರ ಮಾಡಿಕೊಳ್ಳೋಣ.

ಓಂ ಶಾಂತಿಃ ಶಾಂತಿಃ ಶಾಂತಿಃ

ಮಧು ವಾತಾ ಋತಾಯತೇ । ಮಧು ಕ್ಷರನ್ತಿ ಸಿಂಧವಃ ।
ಮಾಧ್ವೀರ್ನಃ ಸನ್ತ್ವೋಷಧೀಃ । ಮಧು ನಕ್ತಮುತೋಷಸೀ ।
ಮಧುಮತ್ ಪಾರ್ಥಿವಂ ರಜಃ । ಮಧು ದ್ಯೌರಸ್ತು ನಃ ಪಿತಾ ।
ಮಧುಮಾನ್ನೋ ವನಸ್ಪತಿಃ । ಮಧುಮಾನಸ್ತು ಸೂರ್ಯಃ ।
ಮಾಧ್ವೀರ್ಗಾವೋ ಭವನ್ತು ನಃ ॥ ॥ ೯ ॥

ತೈತ್ತಿರೀಯ ಆರಣ್ಯಕ ೧೦–೩೯

ಆತ್ಮಾ ಮೇ ಶುದ್ಧ್ಯನ್ತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಮ್ । ಅಂತರಾತ್ಮಾ ಮೇ ಶುದ್ಧ್ಯನ್ತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಮ್ । ಪರಮಾತ್ಮಾ ಮೇ ಶುದ್ಧ್ಯನ್ತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಮ್ ॥ ॥ ೧೦ ॥

ತೈತ್ತಿರೀಯ ಆರಣ್ಯಕ ೧೦–೬೬

ನಮೋ ಬ್ರಹ್ಮಣೇ ನಮೋ ಅಸ್ತ್ವಗ್ನಯೇ
ನಮಃ ಪೃಥಿವ್ಯೈ ನಮಃ ಓಷಧೀಭ್ಯಃ ।
ನಮೋ ವಾಚೇ ನಮೋ ವಾಚಸ್ಪತಯೇ
ನಮೋ ವಿಷ್ಣವೇ ಬೃಹತೇ ಕರೋಮಿ ॥ ೧೧ ॥

ತೈತ್ತಿರೀಯ ಆರಣ್ಯಕ ೧–೩೦

೯. ಗಾಳಿ ಶುಭವಾದುದನ್ನು ತರಲಿ. ನದಿಗಳು ಶುಭವಾದುದನ್ನು ತರಲಿ. ಔಷಧಿಗಳು ಶುಭವಾದುದನ್ನು ತರಲಿ. ದಿವಾರಾತ್ರಿಗಳು ಶುಭವನ್ನು ಕೊಡಲಿ. ಪೃಥ್ವಿಯ ಕಣ ಶುಭವನ್ನು ಕೊಡಲಿ. ಅಂತರಿಕ್ಷ ಶುಭವನ್ನು ಕೊಡಲಿ. ಗಿಡಮರಗಳು ಶುಭವನ್ನು ಕೊಡಲಿ. ಸೂರ್ಯ ಶುಭವನ್ನು ನೀಡಲಿ. ಗೋವುಗಳು ಶುಭವಾದುದನ್ನು ಕೊಡಲಿ.

ಓಂ ಶಾಂತಿಃ ಶಾಂತಿಃ ಶಾಂತಿಃ

೧೦. ನಾನು ರಜಸ್ಸಿಲ್ಲದ, ಪಾಪವಿಲ್ಲದ ಜ್ಯೋತಿಯಾಗಲು ನನ್ನ ದೇಹ ಶುದ್ಧವಾಗಲಿ; ನಾನು ರಜಸ್ಸಿಲ್ಲದ, ಪಾಪವಿಲ್ಲದ ಜ್ಯೋತಿಯಾಗಲು ನನ್ನ ಮನಸ್ಸು ಶುದ್ಧವಾಗಲಿ; ನಾನು ರಜಸ್ಸಿಲ್ಲದ ಪಾಪವಿಲ್ಲದ ಜ್ಯೋತಿಯಾಗಲು ನನ್ನ ಆತ್ಮವು ಶುದ್ಧವಾಗಲಿ.

ಓಂ ಶಾಂತಿಃ ಶಾಂತಿಃ ಶಾಂತಿಃ

೧೧. ಬ್ರಹ್ಮನಿಗೆ ನಮಸ್ಕಾರ, ಅಗ್ನಿಯಲ್ಲಿರುವ ದೇವರಿಗೆ ನಮಸ್ಕಾರ, ಪೃಥ್ವಿಯಲ್ಲಿರುವ ದೇವರಿಗೆ ನಮಸ್ಕಾರ. ಔಷಧದಲ್ಲಿರುವ ದೇವರಿಗೆ ನಮಸ್ಕಾರ. ಮಾತಿನಲ್ಲಿರುವ ದೇವರಿಗೆ ನಮಸ್ಕಾರ. ಮಾತಿನ ಅಧಿ ದೇವತೆಗೆ ನಮಸ್ಕಾರ. ಸರ್ವವ್ಯಾಪಿಯಾದ ಪರಬ್ರಹ್ಮನಿಗೆ ನಮಸ್ಕಾರ.

ಓಂ ಶಾಂತಿಃ ಶಾಂತಿಃ ಶಾಂತಿಃ

# ಗಣೇಶಸ್ತವಃ

ಅಜಂ ನಿರ್ವಿಕಲ್ಪಂ ನಿರಾಕಾರಮೇಕಂ
ನಿರಾನಂದಮಾನಂದಮದ್ವೈತಪೂರ್ಣಮ್ ।
ಪರಂ ನಿರ್ಗುಣಂ ನಿರ್ವಿಶೇಷಂ ನಿರೀಹಂ
ಪರಬ್ರಹ್ಮರೂಪಂ ಗಣೇಶಂ ಭಜೇಮ ॥ ೧ ॥

ಗುಣಾತೀತಮಾನಂ ಚಿದಾನಂದರೂಪಂ
ಚಿದಾಭಾಸಕಂ ಸರ್ವಗಂ ಜ್ಞಾನಗಮ್ಯಂ ।
ಮುನಿಧ್ಯೇಯಮಾಕಾಶರೂಪಂ ಪರೇಶಂ
ಪರಬ್ರಹ್ಮರೂಪಂ ಗಣೇಶಂ ಭಜೇಮ ॥ ೨ ॥

ಜಗತ್ಕಾರಣಂ ಕಾರಣಜ್ಞಾನರೂಪಂ
ಸುರಾದಿಂ ಸುಖಾದಿಂ ಗುಣೇಶಂ ಗಣೇಶಮ್ ।
ಜಗದ್ವ್ಯಾಪಿನಂ ವಿಶ್ವವಂದ್ಯಂ ಸುರೇಶಂ
ಪರಬ್ರಹ್ಮರೂಪಂ ಗಣೇಶಂ ಭಜೇಮ ॥ ೩ ॥

## ಗಣೇಶಸ್ತವ

೧. ಹೇ ಸ್ವಾಮಿ, ನೀನು ಜನ್ಮರಹಿತನು, ನಿರ್ವಿಕಲ್ಪನು, ನಿರಾಕಾರನು, ಅಖಂಡನು; ನಿರಾನಂದನೂ, ಆನಂದಸ್ವರೂಪನೂ ಆಗಿರುವೆ; ಅದ್ವೈತನೂ, ಪರಿಪೂರ್ಣನೂ, ನೀನೇ ಆಗಿರುವೆ; ಪರಾತ್ಪರನೂ, ನಿರ್ಗುಣನೂ, ನಿರ್ವಿಶೇಷನೂ, ನಿರೀಹನೂ ಆಗಿರುವೆ; ಪರಬ್ರಹ್ಮ ಸ್ವರೂಪನೇ ನೀನಾಗಿರುವೆ; ಅಂತಹ ಗಣೇಶನಾದ ನಿನ್ನನ್ನು ನಾವು ಭಜಿಸುತ್ತೇವೆ.

೨. ನೀನು ಗುಣಾತೀತ, ಜ್ಞಾನ ಮತ್ತು ಆನಂದಗಳ ಮೂರ್ತಿ, ಜ್ಞಾನ ಜ್ಯೋತಿ, ಸರ್ವವ್ಯಾಪಕ, ಜ್ಞಾನಗಮ್ಯ; ಆಕಾಶದಂತೆ ಅನಂತನಾಗಿ ಮುನಿಗಳ ಧ್ಯಾನಕ್ಕೆ ವಿಷಯನೂ, ಪರೇಶನೂ ನೀನಾಗಿರುವೆ; ಪರಬ್ರಹ್ಮ ಸ್ವರೂಪನೇ ನೀನಾಗಿರುವೆ. ಅಂತಹ ಗಣೇಶನಾದ ನಿನ್ನನ್ನು ನಾವು ಭಜಿಸುತ್ತೇವೆ.

೩. ನೀನು ಜಗತ್ತಿಗೆ ಕಾರಣನಾದವನು, ಕಾರಣಜ್ಞಾನದ ಸ್ವರೂಪನಾದವನು; ದೇವತೆಗಳಿಗೆ ಆದಿಯಾದವನು; ಸುಖಕ್ಕೆ ಮೂಲನಾದವನು. ಗುಣಗಳಿಗೆ ಸ್ವಾಮಿಯಾದವನು; ಗಣಗಳಿಗೆ ಒಡೆಯನಾದವನು. ನೀನು ಜಗದ್ವ್ಯಾಪಿ, ಜಗದ್ವಂದ್ಯ; ದೇವತೆಗಳ ಸ್ವಾಮಿ. ಪರಬ್ರಹ್ಮ ಸ್ವರೂಪನೇ ನೀನಾಗಿರುವೆ; ಅಂತಹ ಗಣೇಶನಾದ ನಿನ್ನನ್ನು ನಾವು ಭಜಿಸುತ್ತೇವೆ.

# ಗುರುಸ್ತೋತ್ರಮ್

ಗುರುರ್ಬ್ರಹ್ಮಾ ಗುರುರ್ವಿಷ್ಣುರ್ಗುರುರ್ದೇವೋ ಮಹೇಶ್ವರಃ ।
ಗುರುರೇವ ಪರಂ ಬ್ರಹ್ಮ ತಸ್ಮೈ ಶ್ರೀಗುರವೇ ನಮಃ ॥ ೧ ॥

ಅಖಂಡಮಂಡಲಾಕಾರಂ ವ್ಯಾಪ್ತಂ ಯೇನ ಚರಾಚರಮ್ ।
ತತ್ಪದಂ ದರ್ಶಿತಂ ಯೇನ ತಸ್ಮೈ ಶ್ರೀಗುರವೇ ನಮಃ ॥ ೨ ॥

ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ ।
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀಗುರವೇ ನಮಃ ॥ ೩ ॥

ಸ್ಥಾವರಂ ಜಂಗಮಂ ವ್ಯಾಪ್ತಂ ಯೇನ ಕೃತ್ಸ್ನಂ ಚರಾಚರಮ್ ।
ತತ್ಪದಂ ದರ್ಶಿತಂ ಯೇನ ತಸ್ಮೈ ಶ್ರೀಗುರವೇ ನಮಃ ॥ ೪ ॥

ಚಿದ್ರೂಪೇಣ ಪರಿವ್ಯಾಪ್ತಂ ತ್ರೈಲೋಕ್ಯಂ ಸಚರಾಚರಮ್ ।
ತತ್ಪದಂ ದರ್ಶಿತಂ ಯೇನ ತಸ್ಮೈ ಶ್ರೀಗುರವೇ ನಮಃ ॥ ೫ ॥

ಸರ್ವಶ್ರುತಿ–ಶಿರೋರತ್ನ–ಸಮುದ್ಭಾಸಿತ–ಮೂರ್ತಯೇ ।
ವೇದಾಂತಾಂಬುಜ–ಸೂರ್ಯಾಯ ತಸ್ಮೈ ಶ್ರೀಗುರವೇ ನಮಃ ॥ ೬ ॥

ಚೈತನ್ಯಃ ಶಾಶ್ವತಃ ಶಾಂತೋ ವ್ಯೋಮಾತೀತೋ ನಿರಂಜನಃ ।
ಬಿಂದುನಾದ–ಕಲಾತೀತಸ್ತಸ್ಮೈ ಶ್ರೀಗುರವೇ ನಮಃ ॥ ೭ ॥

# ಗುರುಸ್ತೋತ್ರ

೧. ಗುರುವೇ ಬ್ರಹ್ಮ, ಗುರುವೇ ವಿಷ್ಣು, ಗುರುವೇ ದೇವನಾದ ಮಹೇಶ್ವರ; ಗುರುವೇ ಸಾಕ್ಷಾತ್ ಪರಬ್ರಹ್ಮ; ಅಂತಹ ಶ್ರೀಗುರುವಿಗೆ ನಮಸ್ಕಾರ.

೨. ಅಖಂಡಮಂಡಲಾಕಾರವಾದ ಚರಾಚರ ಜಗತ್ತನ್ನು ವ್ಯಾಪಿಸಿರುವ ತತ್ತ್ವವು ಯಾರಿಂದ ತೋರಿಸಲ್ಪಟ್ಟಿತೋ ಅಂತಹ ಶ್ರೀಗುರುವಿಗೆ ನಮಸ್ಕಾರ.

೩. ಅಜ್ಞಾನವೆಂಬ ತಿಮಿರದಿಂದ ಅಂಧನಾದವನ ಕಣ್ಣನ್ನು ಜ್ಞಾನವೆಂಬ ಅಂಜನಶಲಾಕೆಯಿಂದ ಬಿಡಿಸಿದ ಶ್ರೀಗುರುವಿಗೆ ನಮಸ್ಕಾರ.

೪. ಸ್ಥಾವರಜಂಗಮರೂಪವಾದ ಚರಾಚರಾತ್ಮಕವಾದ ಇಡೀ ಜಗತ್ತನ್ನು ವ್ಯಾಪಿಸಿರುವ ತತ್ತ್ವವು ಯಾರಿಂದ ತೋರಿಸಲ್ಪಟ್ಟಿತೋ ಅಂತಹ ಶ್ರೀಗುರುವಿಗೆ ನಮಸ್ಕಾರ.

೫. ಚರಾಚರಾತ್ಮಕವಾದ ಮೂರು ಲೋಕಗಳನ್ನು ಚಿದ್ರೂಪದಿಂದ ವ್ಯಾಪಿಸಿರುವ ತತ್ತ್ವವು ಯಾರಿಂದ ತೋರಿಸಲ್ಪಟ್ಟಿತೋ ಅಂತಹ ಶ್ರೀಗುರುವಿಗೆ ನಮಸ್ಕಾರ.

೬. ಸಮಸ್ತವೇದಗಳ ಶಿರೋರತ್ನದಿಂದ ಬೆಳಗುವ ಮೂರ್ತಿಯೂ, ವೇದಾಂತವೆಂಬ ಕಮಲವನ್ನು ಅರಳಿಸುವ ಸೂರ್ಯನೂ ಆದ ಶ್ರೀ ಗುರುವಿಗೆ ನಮಸ್ಕಾರ.

೭. ಚೈತನ್ಯನೂ, ಶಾಶ್ವತನೂ, ಶಾಂತನೂ, ವ್ಯೋಮಾತೀತನೂ, ನಿರಂಜನನೂ, ಬಿಂದು, ನಾದ, ಕಲೆಗಳಿಗೆ ಅತೀತನೂ ಆದ ಶ್ರೀಗುರುವಿಗೆ ನಮಸ್ಕಾರ.

ಜ್ಞಾನಶಕ್ತಿ–ಸಮಾರೂಢಸ್ತತ್ತ್ವಮಾಲಾವಿಭೂಷಿತಃ ।
ಭುಕ್ತಿ–ಮುಕ್ತಿ–ಪ್ರದಾತಾ ಚ ತಸ್ಮೈ ಶ್ರೀಗುರವೇ ನಮಃ ॥ ೮ ॥

ಅನೇಕಜನ್ಮ–ಸಂಪ್ರಾಪ್ತ–ಕರ್ಮೇಂಧನ–ವಿದಾಹಿನೇ ।
ಆತ್ಮಜ್ಞಾನಾಗ್ನಿ–ದಾನೇನ ತಸ್ಮೈ ಶ್ರೀಗುರವೇ ನಮಃ ॥ ೯ ॥

ಶೋಷಣಂ ಭವಸಿಂಧೋಶ್ಚ ಪ್ರಾಪಣಂ ಸಾರಸಂಪದಃ ।
ಯಸ್ಯ ಪಾದೋದಕಂ ಸಮ್ಯಕ್ ತಸ್ಮೈ ಶ್ರೀಗುರವೇ ನಮಃ ॥ ೧೦ ॥

ನ ಗುರೋರಧಿಕಂ ತತ್ತ್ವಂ ನ ಗುರೋರಧಿಕಂ ತಪಃ ।
ತತ್ತ್ವಜ್ಞಾನಾತ್ ಪರಂ ನಾಸ್ತಿ ತಸ್ಮೈ ಶ್ರೀಗುರವೇ ನಮಃ ॥ ೧೧ ॥

ಮನ್ನಾಥಃ ಶ್ರೀ ಜಗನ್ನಾಥೋ ಮದ್ಗುರುಃ ಶ್ರೀಜಗದ್ಗುರುಃ ।
ಮದಾತ್ಮಾ ಸರ್ವಭೂತಾತ್ಮಾ ತಸ್ಮೈ ಶ್ರೀಗುರವೇ ನಮಃ ॥ ೧೨ ॥

ಗುರುರಾದಿರನಾದಿಶ್ಚ ಗುರುಃ ಪರಮದೈವತಮ್ ।
ಗುರೋಃ ಪರತರಂ ನಾಸ್ತಿ ತಸ್ಮೈ ಶ್ರೀಗುರವೇ ನಮಃ ॥ ೧೩ ॥

ಬ್ರಹ್ಮಾನಂದಂ ಪರಮಸುಖದಂ ಕೇವಲಂ ಜ್ಞಾನಮೂರ್ತಿಂ
ದ್ವಂದ್ವಾತೀತಂ ಗಗನಸದೃಶಂ ತತ್ತ್ವಮಸ್ಯಾದಿಲಕ್ಷ್ಯಮ್ ।
ಏಕಂ ನಿತ್ಯಂ ವಿಮಲಮಚಲಂ ಸರ್ವಧೀಸಾಕ್ಷಿಭೂತಂ
ಭಾವಾತೀತಂ ತ್ರಿಗುಣರಹಿತಂ ಸದ್ಗುರುಂ ತಂ ನಮಾಮಿ ॥ ೧೪ ॥

೮. ಜ್ಞಾನಶಕ್ತಿಯ ಪೀಠದ ಮೇಲೆ ಕುಳಿತು ತತ್ತ್ವಮಾಲೆಯಿಂದ ಅಲಂಕೃತ ನಾಗಿ ಇಹಸುಖವನ್ನೂ ಮುಕ್ತಿಯನ್ನೂ ದಯಪಾಲಿಸುವವನಾದ ಶ್ರೀಗುರುವಿಗೆ ನಮಸ್ಕಾರ.

೯. ಜನ್ಮಜನ್ಮಾಂತರಗಳಿಂದ ಬಂದ ಕರ್ಮವೆಂಬ ಕಾಷ್ಠವನ್ನು ಆತ್ಮಜ್ಞಾನ ವೆಂಬ ಅಗ್ನಿಯಿಂದ ಸುಟ್ಟು ಭಸ್ಮಮಾಡಬಲ್ಲ ಶ್ರೀಗುರುವಿಗೆ ನಮಸ್ಕಾರ.

೧೦. ಯಾರ ಪಾದೋದಕವು ಭವಸಿಂಧುವಿನ ಶೋಷಣಕ್ಕೂ ಮತ್ತು ಸಾರ ವತ್ತಾದ ಸಂಪತ್ತಿನ ಪ್ರಾಪ್ತಿಗೂ ಸಾಧನವೋ ಅಂತಹ ಶ್ರೀಗುರುವಿಗೆ ನಮಸ್ಕಾರ.

೧೧. ಗುರುವಿಗಿಂತಲೂ ಅಧಿಕವಾದ ತತ್ತ್ವವಿಲ್ಲ; ಗುರುವಿಗಿಂತಲೂ ಅಧಿಕ ವಾದ ತಪಸ್ಸಿಲ್ಲ; ತತ್ತ್ವಜ್ಞಾನಕ್ಕಿಂತಲೂ ಶ್ರೇಷ್ಠವಾದುದು ಯಾವುದೂ ಇಲ್ಲ. ಆದುದರಿಂದ ಶ್ರೀಗುರುವಿಗೆ ನಮಸ್ಕಾರ.

೧೨. ಶ್ರೀಜಗನ್ನಾಥನು ನನ್ನ ಸ್ವಾಮಿ; ಶ್ರೀಜಗದ್ಗುರುವು ನನ್ನ ಗುರು; ಸರ್ವಭೂತಗಳ ಆತ್ಮವೇ ನನ್ನ ಆತ್ಮ; ಅಂತಹ ಶ್ರೀಗುರುವಿಗೆ ನನ್ನ ನಮಸ್ಕಾರ.

೧೩. ಗುರುವೇ ಜಗತ್ತಿಗೆ ಆದಿ; ಆತನು ಅನಾದಿಯಾದವನು; ಗುರುವೇ ಪರಮದೇವತೆ. ಗುರುವಿಗಿಂತಲೂ ಶ್ರೇಷ್ಠವಾದುದು ಯಾವುದೂ ಇಲ್ಲ; ಅಂತಹ ಶ್ರೀಗುರುವಿಗೆ ನಮಸ್ಕಾರ.

೧೪. ಬ್ರಹ್ಮಾನಂದನೂ, ಪರಮಸುಖದಾಯಕನೂ, ಕೇವಲನೂ, ಜ್ಞಾನ ಮೂರ್ತಿಯೂ, ದ್ವಂದ್ವಾತೀತನೂ, ಆಕಾಶಸದೃಶನೂ, "ತತ್ತ್ವಮಸಿ" ಮೊದಲಾದ ವಾಕ್ಯಗಳಿಗೆ ಲಕ್ಷ್ಯನೂ, ಅದ್ವಿತೀಯನೂ, ನಿತ್ಯನೂ, ವಿಮ ಲನೂ, ಅಚಲನೂ, ಬುದ್ಧಿಯ ಸಮಸ್ತಕಾರ್ಯಗಳಿಗೆ ಸಾಕ್ಷಿಯೂ, ಭಾವಾತೀತನೂ, ತ್ರಿಗುಣರಹಿತನೂ ಆದ ಸದ್ಗುರುವಿಗೆ ನಮಸ್ಕಾರ.

# ದಾರಿದ್ರ್ಯದಹನಸ್ತೋತ್ರಮ್

ವಿಶ್ವೇಶ್ವರಾಯ ನರಕಾರ್ಣವತಾರಣಾಯ
ಕರ್ಣಾಮೃತಾಯ ಶಶಿಶೇಖರಭೂಷಣಾಯ ।
ಕರ್ಪೂರಕುನ್ದಧವಳಾಯ ಜಟಾಧರಾಯ
ದಾರಿದ್ರ್ಯದುಃಖದಹನಾಯ ನಮಃ ಶಿವಾಯ ॥ ೧ ॥

ಗೌರೀಪ್ರಿಯಾಯ ರಜನೀಶ–ಕಲಾಧರಾಯ
ಕಾಲಾನ್ತಕಾಯ ಭುಜಗಾಧಿಪಕಂಕಣಾಯ ।
ಗಂಗಾಧರಾಯ ಗಜರಾಜವಿಮರ್ದನಾಯ
ದಾರಿದ್ರ್ಯದುಃಖದಹನಾಯ ನಮಃ ಶಿವಾಯ ॥ ೨ ॥

ಭಕ್ತಿಪ್ರಿಯಾಯ ಭವರೋಗಭಯಾಪಹಾಯ
ಉಗ್ರಾಯ ದುರ್ಗಭವಸಾಗರತಾರಣಾಯ ।
ಜ್ಯೋತಿರ್ಮಯಾಯ ಪುನರುದ್ಭವವಾರಣಾಯ
ದಾರಿದ್ರ್ಯದುಃಖದಹನಾಯ ನಮಃ ಶಿವಾಯ ॥ ೩ ॥

ಚರ್ಮಾಂಬರಾಯ ಶವಭಸ್ಮವಿಲೇಪನಾಯ
ಬಾಲೇಕ್ಷಣಾಯ ಫಣಿಕುಂಡಲಮಂಡಿತಾಯ ।
ಮಂಜೀರಪಾದಯುಗಳಾಯ ಜಟಾಧರಾಯ
ದಾರಿದ್ರ್ಯದುಃಖದಹನಾಯ ನಮಃ ಶಿವಾಯ ॥ ೪ ॥

ಪಂಚಾನನಾಯ ಫಣಿರಾಜವಿಭೂಷಣಾಯ
ಹೇಮಾಂಶುಕಾಯ ಭುವನತ್ರಯಮಂಡನಾಯ ।
ಆನಂದಭೂಮಿವರದಾಯ ತಮೋಹರಾಯ
ದಾರಿದ್ರ್ಯದುಃಖದಹನಾಯ ನಮಃ ಶಿವಾಯ ॥ ೫ ॥

# ದಾರಿದ್ರ್ಯದಹನಸ್ತೋತ್ರ

೧. ವಿಶ್ವೇಶ್ವರನೂ, ನರಕವೆಂಬ ಸಾಗರದಿಂದ ಪಾರುಮಾಡುವವನೂ, ಕರ್ಣಕ್ಕೆ ಅಮೃತಸ್ವರೂಪನೂ, ಚಂದ್ರಶೇಖರಭೂಷಣನೂ, ಕರ್ಪೂರ ಮತ್ತು ಕುಂದಪುಷ್ಪದಂತೆ ಶುಭ್ರವಾಗಿರುವವನೂ, ಜಟಾಧಾರಿಯೂ, ದಾರಿದ್ರ್ಯದುಃಖವನ್ನು ದಹನಮಾಡುವವನೂ ಆದ ಶಿವನಿಗೆ ನಮಸ್ಕಾರ.

೨. ಗೌರೀಪ್ರಿಯನೂ, ಚಂದ್ರಕಲಾಧರನೂ, ಕಾಲಾಂತಕನೂ, ಸರ್ಪರಾಜನನ್ನು ಕಂಕಣದಂತೆ ಧರಿಸಿದವನೂ, ಗಂಗಾಧರನೂ, ಗಜರಾಜನನ್ನು ಮರ್ದಿಸಿದವನೂ, ದಾರಿದ್ರ್ಯದುಃಖವನ್ನು ದಹನಮಾಡುವವನೂ ಆದ ಶಿವನಿಗೆ ನಮಸ್ಕಾರ.

೩. ಭಕ್ತಿಪ್ರಿಯನೂ, ಭವರೋಗದ ಭಯವನ್ನು ನಾಶಮಾಡುವವನೂ, ಉಗ್ರಸ್ವರೂಪನೂ, ದುರ್ಗಮವಾದ ಭವಸಾಗರದಿಂದ ಪಾರುಮಾಡುವವನೂ, ಜ್ಯೋತಿರ್ಮಯನೂ, ಪುನರ್ಜನ್ಮವನ್ನು ನಿವಾರಿಸುವವನೂ, ದಾರಿದ್ರ್ಯದುಃಖವನ್ನು ದಹನಮಾಡುವವನೂ ಆದ ಶಿವನಿಗೆ ನಮಸ್ಕಾರ.

೪. ಚರ್ಮಾಂಬರವನ್ನು ಧರಿಸಿದವನೂ, ಶವಭಸ್ಮವನ್ನು ಲೇಪಿಸಿಕೊಂಡಿರುವವನೂ, ಕಿವಿಯಲ್ಲಿ ಸರ್ಪಕುಂಡಲದಿಂದ ಭೂಷಿತನಾದವನೂ, ಪಾದಯುಗಳದಲ್ಲಿ ನೂಪುರವಿರುವವನೂ, ಜಟಾಧಾರಿಯೂ, ದಾರಿದ್ರ್ಯದುಃಖವನ್ನು ನಾಶಮಾಡುವವನೂ ಆದ ಶಿವನಿಗೆ ನಮಸ್ಕಾರ.

೫. ಪಂಚಾನನನೂ, ಸರ್ಪರಾಜವಿಭೂಷಿತನೂ, ಸ್ವರ್ಣಮಯವಾದ ಉತ್ತರೀಯವನ್ನು ಧರಿಸಿದವನೂ, ಭುವನತ್ರಯವನ್ನು ಶೋಭಿಸುವವನೂ, ಆನಂದಾಶ್ರಯನೂ, ವರದನೂ, ತಮೋನಾಶಕನೂ, ದಾರಿದ್ರ್ಯದುಃಖವನ್ನು ನಾಶಮಾಡುವವನೂ ಆದ ಶಿವನಿಗೆ ನಮಸ್ಕಾರ.

ಭಾನುಪ್ರಿಯಾಯ ದುರಿತಾರ್ಣವತಾರಣಾಯ
ಕಾಲಾಂತಕಾಯ ಕಮಲಾಸನಪೂಜಿತಾಯ ।
ನೇತ್ರತ್ರಯಾಯ ಶುಭಲಕ್ಷಣಲಕ್ಷಿತಾಯ
ದಾರಿದ್ರ್ಯದುಃಖದಹನಾಯ ನಮಃ ಶಿವಾಯ ॥ ೬ ॥

ರಾಮಪ್ರಿಯಾಯ ರಘುನಾಥವರಪ್ರದಾಯ
ನಾಗಪ್ರಿಯಾಯ ನಾಗರಾಜನಿಕೇತನಾಯ ।
ಪುಣ್ಯಾಯ ಪುಣ್ಯಚರಿತಾಯ ಸುರಾರ್ಚಿತಾಯ
ದಾರಿದ್ರ್ಯದುಃಖದಹನಾಯ ನಮಃ ಶಿವಾಯ ॥ ೭ ॥

ಮುಕ್ತೀಶ್ವರಾಯ ಫಲದಾಯ ಗಣೇಶ್ವರಾಯ
ಗೀತಪ್ರಿಯಾಯ ವೃಷಭೇಶ್ವರವಾಹನಾಯ ।
ಮಾತಂಗಚರ್ಮವಸನಾಯ ಮಹೇಶ್ವರಾಯ
ದಾರಿದ್ರ್ಯದುಃಖದಹನಾಯ ನಮಃ ಶಿವಾಯ ॥ ೮ ॥

ಗೌರೀವಿಲಾಸಭುವನಾಯ ಮಹೋದಯಾಯ
ಪಂಚಾನನಾಯ ಶರಣಾಗತರಕ್ಷಕಾಯ ।
ಶರ್ವಾಯ ಸರ್ವಜಗತಾಮಧಿಪಾಯ ತಸ್ಮೈ
ದಾರಿದ್ರ್ಯದುಃಖದಹನಾಯ ನಮಃ ಶಿವಾಯ ॥ ೯ ॥

# ದಾರಿದ್ರ್ಯದಹನಸ್ತೋತ್ರ

೬. ಭಾನುಪ್ರಿಯನೂ, ಪಾಪಸಮುದ್ರದಿಂದ ದಾಟಿಸುವವನೂ, ಕಾಲಾಂತಕನೂ, ಬ್ರಹ್ಮನಿಗೆ ಪೂಜ್ಯನೂ, ಮುಕ್ಕಣ್ಣನೂ, ಶುಭಲಕ್ಷಣಲಕ್ಷಿತನೂ, ದಾರಿದ್ರ್ಯದುಃಖವನ್ನು ದಹನಮಾಡುವವನೂ ಆದ ಶಿವನಿಗೆ ನಮಸ್ಕಾರ.

೭. ರಾಮಪ್ರಿಯನೂ, ರಾಮನಿಗೆ ವರವನ್ನು ಕೊಟ್ಟವನೂ, ನಾಗಪ್ರಿಯನೂ, ಕೈಲಾಸವಾಸಿಯೂ, ಪುಣ್ಯಸ್ವರೂಪನೂ, ಪುಣ್ಯಚರಿತ್ರನೂ, ದೇವತೆಗಳಿಂದ ಅರ್ಚಿತನಾದವನೂ, ದಾರಿದ್ರ್ಯದುಃಖವನ್ನು ದಹನಮಾಡುವವನೂ ಆದ ಶಿವನಿಗೆ ನಮಸ್ಕಾರ.

೮. ಮುಕ್ತೀಶ್ವರನೂ, ಫಲದಾತನೂ, ಗಣೇಶ್ವರನೂ, ಗೀತಪ್ರಿಯನೂ, ವೃಷಭರಾಜವಾಹನನೂ, ಆನೆಯ ಚರ್ಮವನ್ನೇ ಬಟ್ಟೆಯನ್ನಾಗಿ ಧರಿಸಿದವನೂ, ಮಹೇಶ್ವರನೂ, ದಾರಿದ್ರ್ಯದುಃಖವನ್ನು ದಹನಮಾಡುವವನೂ ಆದ ಶಿವನಿಗೆ ನಮಸ್ಕಾರ.

೯. ಗೌರಿಯ ವಿಲಾಸಭೂಮಿಯೂ, ಮುಕ್ತಿದಾತನೂ, ಐಮೊಗನೂ, ಶರಣಾಗತರಕ್ಷಕನೂ, ಪ್ರಳಯಕರ್ತೃವೂ, ಸಮಸ್ತ ಜಗತ್ತಿಗೆ ಒಡೆಯನೂ, ದಾರಿದ್ರ್ಯದುಃಖವನ್ನು ದಹನಮಾಡುವವನೂ ಆದ ಶಿವನಿಗೆ ನಮಸ್ಕಾರ.

# ಶಿವಾಪರಾಧಕ್ಷಮಾಪಣಸ್ತೋತ್ರಮ್

ಆದೌ ಕರ್ಮಪ್ರಸಂಗಾತ್ ಕಲಯತಿ ಕಲುಷಂ ಮಾತೃಕುಕ್ಷೌ ಸ್ಥಿತಂ ಮಾಂ
ವಿಣ್ಮೂತ್ರಾಮೇಧ್ಯಮಧ್ಯೇ ಕ್ವಥಯತಿ ನಿತರಾಂ ಜಾಠರೋ ಜಾತವೇದಾಃ ।
ಯದ್ಯದ್ವೈ ತತ್ರ ದುಃಖಂ ವ್ಯಥಯತಿ ನಿತರಾಂ ಶಕ್ಯತೇ ತೇನ ವಕ್ತುಂ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ
ಶ್ರೀಮಹಾದೇವ ಶಂಭೋ ॥ ೧ ॥

ಬಾಲ್ಯೇ ದುಃಖಾತಿರೇಕೋ ಮಲಲುಲಿತವಪುಃ ಸ್ತನ್ಯಪಾನೇ ಪಿಪಾಸಾ
ನೋ ಶಕ್ತಶ್ಚೇಂದ್ರಿಯೇಭ್ಯೋ ಭವಗುಣಜನಿತಾಃ ಜಂತವೋ ಮಾ ತುದಂತಿ।
ನಾನಾರೋಗಾತಿದುಃಖಾದ್ರುದನಪರವಶಃ ಶಂಕರಂ ನ ಸ್ಮರಾಮಿ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ
ಶ್ರೀಮಹಾದೇವ ಶಂಭೋ ॥ ೨ ॥

ಪ್ರೌಢೋಽಹಂ ಯೌವನಸ್ಥೋ ವಿಷಯವಿಷಧರೈಃ ಪಂಚಭಿರ್ಮರ್ಮಸಂಧೌ
ದಷ್ಟೋ ನಷ್ಟೋ ವಿವೇಕಃ ಸುತಧನಯುವತಿಸ್ವಾದಸೌಖ್ಯೇ ನಿಷಣ್ಣಃ
ಶೈವೀಚಿಂತಾವಿಹೀನಂ ಮಮ ಹೃದಯಮಹೋ ಮಾನಗರ್ವಾಧಿರೂಢಮ್
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ
ಶ್ರೀಮಹಾದೇವ ಶಂಭೋ ॥ ೩ ॥

# ಶಿವಾಪರಾಧಕ್ಷಮಾಪಣಸ್ತೋತ್ರ

೧. ಮೊದಲು ಪಾಪಕರ್ಮದ ಫಲವಾಗಿ ನಾನು ತಾಯಿಯ ಗರ್ಭದಲ್ಲಿರುವಾಗಲೇ ಪಾಪ ನನ್ನನ್ನು ಬಹುವಾಗಿ ಪೀಡಿಸಿತು. ಅಲ್ಲಿನ ಮಲಮೂತ್ರಗಳ ಮಧ್ಯದಲ್ಲಿದ್ದ ನನ್ನನ್ನು ಜಠರಾಗ್ನಿ ಬೇಯಿಸಿತು. ಅಲ್ಲಿ ಏನೇನು ದುಃಖಗಳು ಕಾಡಿಸಿದುವು ಎಂಬುದನ್ನು ವರ್ಣನೆಮಾಡಿ ಹೇಳುವುದು ಯಾರಿಂದ ತಾನೆ ಸಾಧ್ಯ? ಹೇ ಶಿವ, ಹೇ ಮಹಾದೇವ, ಹೇ ಶಂಭು, ನನ್ನ ಅಪರಾಧಗಳನ್ನು ಕ್ಷಮಿಸು.

೨. ಬಾಲ್ಯದಲ್ಲಿ ನನ್ನ ದುಃಖಗಳು ಅತಿರೇಕವಾಗಿದ್ದವು; ಮಲಮೆತ್ತಿದ ದೇಹ, ಸದಾ ಸ್ತನ್ಯಪಾನದ ಆಸಕ್ತಿ, ನನ್ನ ಇಂದ್ರಿಯಗಳನ್ನು ನಾನೇ ಬಳಸಲಾಗದ ದೌರ್ಬಲ್ಯ, ತಾವು ಮಾಡಿದ ಪಾಪಫಲದಿಂದ (ಸೊಳ್ಳೆ ನೊಣ ಮೊದಲಾದುವುಗಳಾಗಿ) ಹುಟ್ಟಿದ್ದ ಜಂತುಗಳು ಬೇರೆ ನನ್ನನ್ನು ಪೀಡಿಸುತ್ತಿವೆ. ನಾನಾ ರೋಗಗಳಿಗೆ ಒಳಗಾಗಿ ದುಃಖದಿಂದ ರೋದನಮಾಡುತ್ತ ಕೇವಲ ಅಸ್ವತಂತ್ರನಾಗಿ ಪರವಶನಾಗಿದ್ದೆ; ಆದ್ದರಿಂದ ಶಂಕರನನ್ನು ಸ್ಮರಣೆ ಮಾಡಲಿಲ್ಲ. ಹೇ ಶಿವ, ಹೇ ಮಹಾದೇವ, ಹೇ ಶಂಭು, ನನ್ನ ಅಪರಾಧಗಳನ್ನು ಕ್ಷಮಿಸು.

೩. ನಾನು ಬೆಳೆದು ಯೌವನಸ್ಥನಾದಾಗ ಐದು ವಿಷಯಗಳೆಂಬ ವಿಷಸರ್ಪಗಳು (ಶಬ್ದ, ಸ್ಪರ್ಶ, ರೂಪ, ರಸ, ಗಂಧ) ನನ್ನ ಮರ್ಮಸ್ಥಾನವನ್ನು ಕಚ್ಚಿಬಿಟ್ಟವು; ಇದರಿಂದ ನನ್ನ ವಿವೇಕಜ್ಞಾನ ನಷ್ಟವಾಯಿತು. ಕೇವಲ ಸುತ, ಧನ, ಯುವತಿ– ಇವುಗಳ ಸುಖಾಸ್ವಾದನದಲ್ಲಿ ಮಗ್ನನಾಗಿಬಿಟ್ಟೆ. ಶೈವಚಿಂತಾವಿಹೀನವಾದ ನನ್ನ ಹೃದಯವು ಅಯ್ಯೋ! ಅಭಿಮಾನ ಅಹಂಕಾರಗಳಿಂದ ತುಂಬಿಕೊಂಡಿತು: ಹೇ ಶಿವ, ಹೇ ಮಹಾದೇವ, ಹೇ ಶಂಭು, ನನ್ನ ಅಪರಾಧಗಳನ್ನು ಕ್ಷಮಿಸು.

ವಾರ್ಧಕ್ಯೇ ಚೇಂದ್ರಿಯಾಣಾಂ ವಿಕಲಗತಿಮತಿಶ್ಚಾಧಿದೈವಾದಿತಾಪೈಃ
ಪ್ರಾಪ್ತೈ ರೋಗೈರ್ವಿಯೋಗೈರ್ವ್ಯಸನಕೃಶತನೋರ್ಜ್ಞಪ್ತಿಹೀನಂ ಚ
ದೀನಮ್ ।
ಮಿಥ್ಯಾಮೋಹಾಭಿಲಾಷೈರ್ಭ್ರಮತಿ ಮಮ ಮನೋ ಧೂರ್ಜಟೇರ್ಧ್ಯಾನ
ಶೂನ್ಯಂ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ
ಶ್ರೀಮಹಾದೇವ ಶಂಭೋ ॥ ೪ ॥

ಸ್ನಾತ್ವಾ ಪ್ರತ್ಯೂಷಕಾಲೇ ಸ್ನಪನವಿಧಿವಿಧೌ ನಾಹೃತಂ ಗಾಂಗತೋಯಂ
ಪೂಜಾರ್ಥಂ ವಾ ಕದಾಚಿದ್ಬಹುತರಗಹನಾತ್ ಖಂಡಬಿಲ್ವೀದಲಂ ವಾ ।
ನಾನೀತಾ ಪದ್ಮಮಾಲಾ ಸರಸಿ ವಿಕಸಿತಾ ಗಂಧಧೂಪೈಸ್ತ್ವದರ್ಥಂ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ
ಶ್ರೀಮಹಾದೇವ ಶಂಭೋ ॥ ೫ ॥

ದುಗ್ಧೈರ್ಮಧ್ವಾಜ್ಯಯುಕ್ತೈರ್ದಧಿಗುಡಸಹಿತೈಃ ಸ್ನಾಪಿತಂ ನೈವ ಲಿಂಗಂ
ನೋ ಲಿಪ್ತಂ ಚಂದನಾದ್ಯೈಃ ಕನಕವಿರಚಿತೈಃ ಪೂಜಿತಂ ನ ಪ್ರಸೂನೈಃ ।
ಧೂಪೈಃ ಕರ್ಪೂರದೀಪೈರ್ವಿವಿಧರಸಯುತೈರ್ನೈವ ಭಕ್ಷ್ಯೋಪಹಾರೈಃ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ
ಶ್ರೀಮಹಾದೇವ ಶಂಭೋ ॥ ೬ ॥

೪. ಮುಪ್ಪಿನಲ್ಲಿ ಇಂದ್ರಿಯಗಳ ಗತಿ ಮತ್ತು ಮತಿಶಕ್ತಿಗಳು ಕುಂಠಿತವಾಗಿ ಹೋಗಿವೆ. ಅಧಿದೈವಾದಿತಾಪಗಳಿಂದ ಪ್ರಾಪ್ತವಾದ ರೋಗವಿಯೋಗಾದಿ ವ್ಯಸನಗಳಿಂದ ದೇಹವು ಗಳಿತವಾಗಿ ಜ್ಞಾನಶಕ್ತಿಯನ್ನು ಕಳೆದುಕೊಂಡು ದೀನವಾಗಿಬಿಟ್ಟಿದೆ. ಆದರೂ ಮನಸ್ಸು ಧೂರ್ಜಟಿಯನ್ನು ಧ್ಯಾನಿಸದೆ ಮಿಥ್ಯಾ ಮೋಹ ಅಭಿಲಾಷೆಗಳ ಬೆನ್ನು ಹತ್ತಿ ಭ್ರಮಿಸುತ್ತಿದೆ. ಹೇ ಶಿವ, ಹೇ ಮಹಾದೇವ, ಹೇ ಶಂಭು, ನನ್ನ ಅಪರಾಧಗಳನ್ನು ಕ್ಷಮಿಸು.

೫. ಉಷಃಕಾಲಕ್ಕೆ ಸ್ನಾನಮಾಡಿ, ವಿಧ್ಯುಕ್ತವಾದ ನಿನ್ನ ಅಭಿಷೇಕಕ್ಕಾಗಿ ಗಂಗಾಜಲವನ್ನು ನಾನು ಎಂದೂ ತಂದವನಲ್ಲ; ಅಥವಾ ದಟ್ಟವಾದ ಅಡವಿಗೆ ಹೋಗಿ ಬಿಲ್ವದಳಗಳನ್ನು ನಿನ್ನ ಪೂಜಾರ್ಥವಾಗಿ ಅಕಸ್ಮಾತ್ತಾಗಿ ಕೂಡ ಎಂದೂ ಕುಯ್ದು ತಂದವನಲ್ಲ. ಸರೋವರದಲ್ಲಿ ಅರಳಿರುವ ಪದ್ಮಪುಷ್ಪಗಳನ್ನು ತಂದು ಗಂಧಧೂಪಗಳೊಂದಿಗೆ ಅರ್ಪಿಸುವ ಕಾರ್ಯವನ್ನು ಎಂದೂ ಮಾಡಲಿಲ್ಲ. ಹೇ ಶಿವ, ಹೇ ಮಹಾದೇವ, ಹೇ ಶಂಭು, ನನ್ನ ಅಪರಾಧಗಳನ್ನು ಕ್ಷಮಿಸು.

೬. ಹಾಲು, ತುಪ್ಪ, ಜೇನುತುಪ್ಪ, ಸಕ್ಕರೆ— ಇವುಗಳಿಂದ ನಾನು ಎಂದೂ ಶಿವಲಿಂಗಕ್ಕೆ ಪಂಚಾಮೃತಾಭಿಷೇಕವನ್ನು ಮಾಡಲಿಲ್ಲ; ಶ್ರೀಗಂಧಾದಿ ಸುಗಂಧದ್ರವ್ಯಗಳನ್ನು ಎಂದೂ ಲೇಪಿಸಲಿಲ್ಲ; ಸುವರ್ಣಪುಷ್ಪಗಳಿಂದ ಎಂದೂ ಪೂಜಿಸಲಿಲ್ಲ; ಧೂಪವನ್ನಾಗಲಿ, ಕರ್ಪೂರದ ದೀಪವನ್ನಾಗಲಿ ಹಚ್ಚಲಿಲ್ಲ; ರಸಯುತವಾದ ಭಕ್ಷ್ಯಭೋಜ್ಯಗಳನ್ನು ನಿವೇದಿಸಲಿಲ್ಲ. ನನ್ನ ಅಪರಾಧವನ್ನು ಮನ್ನಿಸು. ಹೇ ಶಿವ, ಹೇ ಮಹಾದೇವ, ಹೇ ಶಂಭು, ನನ್ನ ಅಪರಾಧಗಳನ್ನು ಕ್ಷಮಿಸು.

ನೋ ಶಕ್ಯಂ ಸ್ಮಾರ್ತಕರ್ಮ ಪ್ರತಿಪದಗಹನೇ ಪ್ರತ್ಯವಾಯಾಕುಲಾಢ್ಯೇ
ಶ್ರೌತೇ ವಾರ್ತಾ ಕಥಂ ಮೇ ದ್ವಿಜಕುಲವಿಹಿತೇ ಬ್ರಹ್ಮಮಾರ್ಗಾನುಸಾರೇ ।
ತತ್ತ್ವೇಽಜ್ಞಾತೇ ವಿಚಾರೈಃ ಶ್ರವಣಮನನಯೋಃ ಕಿಂ ನಿದಿಧ್ಯಾಸಿತವ್ಯಂ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ
ಶ್ರೀಮಹಾದೇವ ಶಂಭೋ ॥ ೭ ॥

ಧ್ಯಾತ್ವಾ ಚಿತ್ತೇ ಶಿವಾಖ್ಯಂ ಪ್ರಚುರತರಧನಂ ನೈವ ದತ್ತಂ ದ್ವಿಜೇಭ್ಯೋ
ಹವ್ಯಂ ತೇ ಲಕ್ಷಸಂಖ್ಯೈರ್ಹುತವಹವದನೇ ನಾರ್ಪಿತಂ ಬೀಜಮಂತ್ರೈಃ ।
ನೋ ತಪ್ತಂ ಗಾಂಗತೀರೇ ವ್ರತಜಪನಿಯಮೈ ರುದ್ರಜಾಪ್ಯಂ ನ ಜಪ್ತಂ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ
ಶ್ರೀಮಹಾದೇವ ಶಂಭೋ ॥ ೮ ॥

ನಗ್ನೋ ನಿಸ್ಸಂಗಶುದ್ಧಸ್ತ್ರಿಗುಣವಿರಹಿತೋ ಧ್ವಸ್ತಮೋಹಾಂಧಕಾರೋ
ನಾಸಾಗ್ರೇ ನ್ಯಸ್ತದೃಷ್ಟಿರ್ವಿದಿತಭವಗುಣೋ ನೈವ ದೃಷ್ಟಃ ಕದಾಚಿತ್ ।
ಉನ್ಮನ್ಯಾವಸ್ಥಯಾ ತ್ವಾಂ ವಿಗತಕಲಿಮಲಂ ಶಂಕರಂ ನ ಸ್ಮರಾಮಿ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ
ಶ್ರೀಮಹಾದೇವ ಶಂಭೋ ॥ ೯ ॥

೭. ಹೆಜ್ಜೆಹೆಜ್ಜೆಗೂ ಗಹನವೂ ಪ್ರತ್ಯವಾಯಸಂಕುಲವೂ ಆದ ಸ್ಮಾರ್ತಕರ್ಮಗಳ ಅನುಷ್ಠಾನವೇ ನನ್ನ ಶಕ್ತಿಗೆ ಮೀರಿರುವಾಗ, ಇನ್ನು ವೇದಗಳಲ್ಲಿ ಬ್ರಾಹ್ಮಣನಿಗೆ ವಿಧಿಸಿರುವ ಬ್ರಹ್ಮಮಾರ್ಗಾನುಷ್ಠಾನ ನನ್ನ ಕೈಯಲ್ಲಿ ಹೇಗೆ ತಾನೆ ಸಾಧ್ಯ? ವಿಚಾರದ ಮೂಲಕ ಶ್ರವಣ ಮನನಗಳ ಸ್ವರೂಪವನ್ನು ಇನ್ನೂ ಅರಿತುಕೊಳ್ಳದಿರುವಾಗ ನಿದಿಧ್ಯಾಸನ ನನಗೆ ಹೇಗೆ ತಾನೆ ಸಾಧ್ಯ? ಹೇ ಶಿವ, ಹೇ ಮಹಾದೇವ, ಹೇ ಶಂಭು, ನನ್ನ ಅಪರಾಧಗಳನ್ನು ಕ್ಷಮಿಸು.

೮. ಶಿವನನ್ನು ಚಿತ್ತದಲ್ಲಿ ಧ್ಯಾನಮಾಡುತ್ತಾ ಬ್ರಾಹ್ಮಣರಿಗೆ ಯಥೇಷ್ಟವಾಗಿ ದಾನಮಾಡುವ ಕಾರ್ಯವನ್ನು ನಾನೆಂದೂ ಕೈಗೊಳ್ಳಲಿಲ್ಲ; ನಿನ್ನ ಬೀಜಮಂತ್ರವನ್ನು ಜಪಿಸುತ್ತಾ ನಿನ್ನ ಪ್ರೀತ್ಯರ್ಥವಾಗಿ ಲಕ್ಷಸಂಖ್ಯೆಯ ಹವ್ಯವನ್ನು ಯಜ್ಞಕುಂಡದಲ್ಲಿ ಅರ್ಪಿಸುವ ಕಾರ್ಯವನ್ನು ನಾನೆಂದಿಗೂ ಮಾಡಲಿಲ್ಲ; ಗಂಗಾತೀರದಲ್ಲಿ ಕುಳಿತು ವ್ರತಜಪನಿಯಮಾದಿಗಳಿಂದಲೂ ರುದ್ರಜಪದಿಂದಲೂ ತಪಸ್ಸುಮಾಡಲಿಲ್ಲ. ಹೇ ಶಿವ, ಹೇ ಮಹಾದೇವ, ಹೇ ಶಂಭು, ನನ್ನ ಅಪರಾಧಗಳನ್ನು ಕ್ಷಮಿಸು.

೯. ದಿಗಂಬರನಾದ, ಸಂಗರಹಿತನಾದ, ಶುದ್ಧನಾದ, ತ್ರಿಗುಣರಹಿತನಾದ, ಮೋಹಾಂಧಕಾರದಿಂದ ವಿಮುಕ್ತನಾದ, ನಾಸಾಗ್ರದಲ್ಲೇ ನಟ್ಟದೃಷ್ಟಿಯುಳ್ಳವನಾದ, ಸಂಸಾರಸ್ವರೂಪವನ್ನು ಅರಿತಿರುವವನಾದ ನಿನ್ನನ್ನು ನಾನು ಎಂದೂ ದರ್ಶನಮಾಡಲಿಲ್ಲ; ತನ್ಮಯಚಿತ್ತನಾಗಿ ಕಲಿಮಲದೂರನಾದ, ಮಂಗಲಮೂರ್ತಿಯಾದ ನಿನ್ನನ್ನು ನಾನು ಎಂದೂ ಸ್ಮರಿಸಲಿಲ್ಲ. ಹೇ ಶಿವ, ಹೇ ಮಹಾದೇವ, ಹೇ ಶಂಭು, ನನ್ನ ಅಪರಾಧಗಳನ್ನು ಕ್ಷಮಿಸು.

ಸ್ಥಿತ್ವಾ ಸ್ಥಾನೇ ಸರೋಜೇ ಪ್ರಣವಮಯಮರುತ್ಕುಂಭಿತೇ ಸೂಕ್ಷ್ಮಮಾರ್ಗೇ
ಶಾಂತೇ ಸ್ವಾಂತೇ ಪ್ರಲೀನೇ ಪ್ರಕಟಿತವಿಭವೇ ದಿವ್ಯರೂಪೇ ಶಿವಾಖ್ಯೇ ।
ಲಿಂಗಜ್ಞೇ ಬ್ರಹ್ಮವಾಕ್ಯೇ ಸಕಲತನುಗತಂ ಶಂಕರಂ ನ ಸ್ಮರಾಮಿ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ
ಶ್ರೀಮಹಾದೇವ ಶಂಭೋ ॥ ೧೦ ॥

ಹೃದ್ಯಂ ವೇದಾಂತವೇದ್ಯಂ ಹೃದಯಸರಸಿಜೇ ದೀಪ್ತಮುದ್ಯತ್ಪ್ರಕಾಶಂ
ಸತ್ಯಂ ಶಾಂತಸ್ವರೂಪಂ ಸಕಲಮುನಿಮನಃಪದ್ಮಷಂಡೈಕವೇದ್ಯಮ್ ।
ಜಾಗ್ರತ್ಸ್ವಪ್ನೇ ಸುಷುಪ್ತೌ ತ್ರಿಗುಣವಿರಹಿತಂ ಶಂಕರಂ ನ ಸ್ಮರಾಮಿ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ
ಶ್ರೀಮಹಾದೇವ ಶಂಭೋ ॥ ೧೧ ॥

ಚಂದ್ರೋದ್ಭಾಸಿತಶೇಖರೇ ಸ್ಮರಹರೇ ಗಂಗಾಧರೇ ಶಂಕರೇ
ಸರ್ಪೈರ್ಭೂಷಿತಕಂಠಕರ್ಣವಿವರೇ ನೇತ್ರೋತ್ಥವೈಶ್ವಾನರೇ ।
ದಂತಿತ್ವಕ್ಕೃತಸುಂದರಾಂಬರಧರೇ ತ್ರೈಲೋಕ್ಯಸಾರೇ ಹರೇ
ಮೋಕ್ಷಾರ್ಥಂ ಕುರು ಚಿತ್ತವೃತ್ತಿಮಚಲಾಮನ್ಯೈಸ್ತು ಕಿಂ ಕರ್ಮಭಿಃ ॥ ೧೨ ॥

೧೦. ಪದ್ಮಾಸನದಲ್ಲಿ ಕುಳಿತು ಪ್ರಣವೋಚ್ಚಾರಣೆ ಮಾಡುತ್ತಾ ಪ್ರಾಣವಾಯುವನ್ನು ಸುಷುಮ್ನಾಮಾರ್ಗದಲ್ಲಿ ನಿರೋಧಿಸಿ, ಅಂತಃಕರಣವನ್ನು ಪ್ರಶಾಂತವಾದುದನ್ನಾಗಿ ಮಾಡಿ, ನಿನ್ನ ಮಹಿಮೆಯನ್ನು ವ್ಯಕ್ತಗೊಳಿಸುವ ಪ್ರಣವವನ್ನು ಜ್ಯೋತಿರ್ಮಯನಾದ ಪರಬ್ರಹ್ಮಸ್ವರೂಪಿಯಾದ ಸಾಕ್ಷೀಚೈತನ್ಯದಲ್ಲಿ ವಿಲೀನಗೊಳಿಸಿ, ಎಲ್ಲಾ ಶರೀರಗಳಲ್ಲೂ ಅಂತರ್ಯಾಮಿರೂಪದಲ್ಲಿರುವ ಶಂಕರನಾದ ನಿನ್ನನ್ನು ನಾನು ಎಂದೂ ಸಮಾಧಿಸ್ಥನಾಗಿ ಧ್ಯಾನಮಾಡಲಿಲ್ಲ. ಹೇ ಶಿವ, ಹೇ ಮಹಾದೇವ, ಹೇ ಶಂಭು, ನನ್ನ ಅಪರಾಧಗಳನ್ನು ಕ್ಷಮಿಸು.

೧೧. ಹೃದ್ಯನೂ, ವೇದಾಂತವೇದ್ಯನೂ, ಹೃದಯಕಮಲದಲ್ಲಿ ಹೊಳೆಯುವವನೂ, ಜ್ಯೋತಿಸ್ಸ್ವರೂಪನೂ, ಸತ್ಯನೂ, ಶಾಂತಸ್ವರೂಪನೂ, ಋಷಿಗಳ ಹೃದಯಕಮಲಕ್ಕೆ ಮಾತ್ರ ವೇದ್ಯನಾಗಿರುವವನೂ, ಜಾಗ್ರತ್–ಸ್ವಪ್ನ–ಸುಷುಪ್ತಿಗಳೆಂಬ ಮೂರು ಅವಸ್ಥೆಗಳಲ್ಲಿಯೂ ತ್ರಿಗುಣವಿರಹಿತನಾಗಿರುವವನೂ ಆದ ಮಂಗಳರೂಪಿಯಾದ ನಿನ್ನನ್ನು ನಾನು ಸ್ಮರಿಸಲಿಲ್ಲ. ಹೇ ಶಿವ, ಹೇ ಮಹಾದೇವ, ಹೇ ಶಂಭು ನನ್ನ ಅಪರಾಧಗಳನ್ನು ಕ್ಷಮಿಸು.

೧೨. ಚಂದ್ರಸಿಂದ ಉಜ್ವಲವಾಗಿ ಬೆಳಗುತ್ತಿರುವ ಲಲಾಟವುಳ್ಳವನೂ, ಮನ್ಮಥನನ್ನು ಸಂಹರಿಸಿದವನೂ, ಗಂಗಾಧರನೂ, ಶಂಕರನೂ, ಕಂಠ ಮತ್ತು ಕಿವಿಗಳನ್ನು ಸರ್ಪಗಳಿಂದ ಅಲಂಕರಿಸಿಕೊಂಡಿರುವವನೂ, ನೇತ್ರದಲ್ಲಿ ಅಗ್ನಿಯನ್ನು ಉದ್ಭವಮಾಡಿರುವವನೂ, ಗಜಚರ್ಮವನ್ನೇ ಸುಂದರವಾದ ಅಂಬರವನ್ನಾಗಿ ಧರಿಸಿರುವವನೂ, ಮೂರು ಲೋಕಗಳ ಸಾರಸ್ವರೂಪನೂ ಆದ ಹರನಲ್ಲಿ ಚಿತ್ತವೃತ್ತಿಯನ್ನು ಮೋಕ್ಷಾರ್ಥವಾಗಿ ಸ್ಥಿರಗೊಳಿಸುವವನಾಗು. ಉಳಿದ ಕರ್ಮಗಳಿಂದ ಏನು ಪ್ರಯೋಜನ?

# ವಿಶ್ವನಾಥಾಷ್ಟಕಮ್

ಗಂಗಾತರಂಗರಮಣೀಯಜಟಾಕಲಾಪಂ
ಗೌರೀನಿರಂತರವಿಭೂಷಿತವಾಮಭಾಗಮ್ ।
ನಾರಾಯಣಪ್ರಿಯಮನಂಗಮದಾಪಹಾರಂ
ವಾರಾಣಸೀಪುರಪತಿಂ ಭಜ ವಿಶ್ವನಾಥಮ್ ॥ ೧ ॥

ವಾಚಾಮಗೋಚರಮನೇಕಗುಣಸ್ವರೂಪಂ
ವಾಗೀಶವಿಷ್ಣುಸುರಸೇವಿತಪಾದಪೀಠಮ್ ।
ವಾಮೇನ ವಿಗ್ರಹವರೇಣ ಕಲತ್ರವಂತಂ
ವಾರಾಣಸೀಪುರಪತಿಂ ಭಜ ವಿಶ್ವನಾಥಮ್ ॥ ೨ ॥

ಭೂತಾಧಿಪಂ ಭುಜಗಭೂಷಣಭೂಷಿತಾಂಗಂ
ವ್ಯಾಘ್ರಾಜಿನಾಂಬರಧರಂ ಜಟಿಲಂ ತ್ರಿನೇತ್ರಮ್ ।
ಪಾಶಾಂಕುಶಾಭಯವರಪ್ರದಶೂಲಪಾಣಿಂ
ವಾರಾಣಸೀಪುರಪತಿಂ ಭಜ ವಿಶ್ವನಾಥಮ್ ॥ ೩ ॥

ಶೀತಾಂಶುಶೋಭಿತಕಿರೀಟವಿರಾಜಮಾನಂ
ಬಾಲೇಕ್ಷಣಾನಲವಿಶೋಷಿತಪಂಚಬಾಣಮ್ ।
ನಾಗಾಧಿಪಾರಚಿತಭಾಸುರಕರ್ಣಪೂರಂ
ವಾರಾಣಸೀಪುರಪತಿಂ ಭಜ ವಿಶ್ವನಾಥಮ್ ॥ ೪ ॥

# ವಿಶ್ವನಾಥಾಷ್ಟಕ

೧. ಯಾರ ಕೇಶರಾಶಿ ಗಂಗಾತರಂಗದಿಂದ ಶೋಭಿಸುತ್ತಿರುವುದೋ, ಯಾರ ವಾಮಭಾಗದಲ್ಲಿ ಗೌರೀ ಸದಾ ನೆಲೆಸಿರುವಳೋ, ಯಾರು ನಾರಾಯಣ ನಿಗೆ ಪ್ರಿಯನೋ, ಯಾರು ಮನ್ಮಥನನ್ನು ಮಥಿಸಿದವನೋ ಅಂತಹ ವಾರಾಣಸೀ ಪುರಪತಿಯಾದ ವಿಶ್ವನಾಥನನ್ನು ಭಜಿಸು.

೨. ಯಾರು ವಾಗಾತೀತನೋ, ಅನೇಕ ಗುಣಸ್ವರೂಪನೋ, ಯಾರ ಪಾದ ವನ್ನು ಬ್ರಹ್ಮ ವಿಷ್ಣು ಮತ್ತು ಇತರರು ಅರ್ಚಿಸುತ್ತಿರುವರೋ, ಯಾರ ವಾಮಭಾಗದಲ್ಲಿ ಗೌರೀ ನೆಲೆಸಿರುವಳೋ ಅಂತಹ ವಾರಾಣಸೀ ಪುರಪತಿ ಯಾದ ವಿಶ್ವನಾಥನನ್ನು ಭಜಿಸು.

೩. ಯಾರು ಭೂತಗಳಿಗೆ ಅಧಿಪತಿಯೋ, ಯಾರ ದೇಹ ಸರ್ಪದಿಂದ ಭೂಷಿತವಾಗಿದೆಯೋ, ಯಾರು ವ್ಯಾಘ್ರಚರ್ಮವನ್ನು ಧರಿಸಿರುವನೋ, ಯಾರ ಕೇಶ ಸುರುಳಿಸುರುಳಿಯಾಗಿದೆಯೋ, ಯಾರು ತ್ರಿನಯನನೋ, ಯಾರು ಪಾಶ, ಅಂಕುಶ, ಶೂಲಗಳನ್ನು ಧರಿಸಿ ಅಭಯವರಗಳನ್ನು ನೀಡುತ್ತಿರುವನೋ, ಅಂತಹ ವಾರಾಣಸೀ ಪುರಪತಿಯಾದ ವಿಶ್ವನಾಥ ನನ್ನು ಭಜಿಸು.

೪. ಯಾರು ಚಂದ್ರಕಲಾಮಂಡಿತವಾದ ಕಿರೀಟದಿಂದ ಶೋಭಿಸುತ್ತಿರು ವನೋ, ಯಾರು ತನ್ನ ಮೂರನೆ ಕಣ್ಣಿನ ಅಗ್ನಿಯಿಂದ ಕಾಮನನ್ನು ದಹಿಸಿದನೋ, ಯಾರ ಉಜ್ವಲವಾದ ಕರ್ಣಕುಂಡಲ ನಾಗರಾಜನಿಂದ ರಚಿತವಾಗಿರುವದೋ, ಅಂತಹ ವಾರಾಣಸೀ ಪುರಪತಿಯಾದ ವಿಶ್ವ ನಾಥನನ್ನು ಭಜಿಸು.

ಪಂಚಾನನಂ ದುರಿತಮತ್ತಮತಂಗಜಾನಾಂ
ನಾಗಾನ್ತಕಂ ದನುಜಪುಂಗವಪನ್ನಗಾನಾಮ್ ।
ದಾವಾನಲಂ ಮರಣಶೋಕಜರಾಟವೀನಾಂ
ವಾರಾಣಸೀಪುರಪತಿಂ ಭಜ ವಿಶ್ವನಾಥಮ್ ॥ ೫ ॥

ತೇಜೋಮಯಂ ಸಗುಣನಿರ್ಗುಣಮದ್ವಿತೀಯ-
ಮಾನಂದಕಂದಮಪರಾಜಿತಮಪ್ರಮೇಯಮ್ ।
ನಾದಾತ್ಮಕಂ ಸಕಲನಿಷ್ಕಲಮಾತ್ಮರೂಪಂ
ವಾರಾಣಸೀಪುರಪತಿಂ ಭಜ ವಿಶ್ವನಾಥಮ್ ॥ ೬ ॥

ಆಶಾಂ ವಿಹಾಯ ಪರಿಹೃತ್ಯ ಪರಸ್ಯ ನಿಂದಾಂ
ಪಾಪೇ ರತಿಂ ಚ ಸುನಿವಾರ್ಯ ಮನಃ ಸಮಾಧೌ ।
ಆದಾಯ ಹೃತ್ಕಮಲಮಧ್ಯಗತಂ ಪರೇಶಂ
ವಾರಾಣಸೀಪುರಪತಿಂ ಭಜ ವಿಶ್ವನಾಥಮ್ ॥ ೭ ॥

ರಾಗಾದಿದೋಷರಹಿತಂ ಸ್ವಜನಾನುರಾಗಂ
ವೈರಾಗ್ಯಶಾಂತಿನಿಲಯಂ ಗಿರಿಜಾಸಹಾಯಮ್ ।
ಮಾಧುರ್ಯಧೈರ್ಯಸುಭಗಂ ಗರಲಾಭಿರಾಮಂ
ವಾರಾಣಸೀಪುರಪತಿಂ ಭಜ ವಿಶ್ವನಾಥಮ್ ॥ ೮ ॥

# ವಿಶ್ವನಾಥಾಷ್ಟಕ

೫. ಯಾರು ಪಂಚಾನನನೋ, ಪಾಪವೆಂಬ ಮದಗಜವನ್ನು ನಾಶಮಾಡುವ ಕೇಸರಿಯೋ, ಯಾರು ರಾಕ್ಷಸರೆಂಬ ಸರ್ಪಕುಲಕ್ಕೆ ಗರುಡಪ್ರಾಯನಾಗಿರುವನೋ, ಜನನಮರಣವಾರ್ಧಿಕ್ಯವೆಂಬ ಕಾನನಕ್ಕೆ ದಾವಾನಲನಂತೆ ಇರುವನೋ, ಅಂತಹ ವಾರಾಣಸೀ ಪುರಪತಿಯಾದ ವಿಶ್ವನಾಥನನ್ನು ಭಜಿಸು.

೬. ಯಾರು ತೇಜೋಮಯನಾಗಿರುವನೋ, ಯಾರಲ್ಲಿ ಸಗುಣನಿರ್ಗುಣಗಳೆರಡೂ ಇವೆಯೋ, ಯಾರು ಅದ್ವಿತೀಯನೋ, ಆನಂದಘನನೋ, ಅಪರಾಜಿತನೋ, ಅಪ್ರಮೇಯನೋ, ನಾದಾತ್ಮಕನೋ, ಯಾರಲ್ಲಿ ಕಲಿ ಮತ್ತು ನಿಷ್ಕಲಿಗಳೆರಡೂ ಇವೆಯೋ, ಯಾರು (ಜೀವಗಳ) ಆತ್ಮಸ್ವರೂಪನೋ, ಅಂತಹ ವಾರಾಣಸೀ ಪುರಪತಿಯಾದ ವಿಶ್ವನಾಥನನ್ನು ಭಜಿಸು.

೭. ಆಶೆಯನ್ನು ತೊರೆದು, ಪರನಿಂದೆಯನ್ನು ಬಿಟ್ಟು, ಪಾಪದಲ್ಲಿ ಆಸಕ್ತಿಯನ್ನು ತ್ಯಜಿಸಿ, ಮನವನ್ನು ಸಮಾಧಿಯ ಕಡೆ ತಿರುಗಿಸಿ, ಹೃದಯಕಮಲಮಧ್ಯದಲ್ಲಿ ನೆಲೆಸಿರುವ ಪರೇಶನನ್ನು ಚಿಂತಿಸುತ್ತಾ ವಾರಾಣಸೀ ಪುರಪತಿಯಾದ ವಿಶ್ವನಾಥನನ್ನು ಭಜಿಸು.

೮. ಯಾರು ರಾಗಾದಿದೋಷರಹಿತನೋ, ಯಾರಿಗೆ ಭಕ್ತರ ಮೇಲೆ ಅನುರಾಗವಿರುವುದೋ, ಯಾರು ವೈರಾಗ್ಯ ಮತ್ತು ಶಾಂತಿಗಳಿಗೆ ನಿಲಯನೋ, ಪಾರ್ವತಿಯ ಸಹಚರನೋ, ಮಾಧುರ್ಯ ಧೈರ್ಯ ಮುಂತಾದ ಸುಗುಣಗಳಿಂದ ರಾರಾಜಿಸುತ್ತಿರುವನೋ, ಯಾರು ಕೊರಳಿನಲ್ಲಿ ನಂಜಿನಿಂದ ಅಲಂಕೃತನಾಗಿರುವನೋ, ಅಂತಹ ವಾರಾಣಸೀ ಪುರಪತಿಯಾದ ವಿಶ್ವನಾಥನನ್ನು ಭಜಿಸು.

# ವೇದಸಾರಶಿವಸ್ತೋತ್ರಮ್

ಪಶೂನಾಂ ಪತಿಂ ಪಾಪನಾಶಂ ಪರೇಶಂ
ಗಜೇಂದ್ರಸ್ಯ ಕೃತ್ತಿಂ ವಸಾನಂ ವರೇಣ್ಯಮ್ ।
ಜಟಾಜೂಟಮಧ್ಯೇ ಸ್ಫುರದ್ಗಾಂಗವಾರಿಂ
ಮಹಾದೇವಮೇಕಂ ಸ್ಮರಾಮಿ ಸ್ಮರಾರಿಂ ॥ ೧ ॥

ಮಹೇಶಂ ಸುರೇಶಂ ಸುರಾರಾತಿನಾಶಂ
ವಿಭುಂ ವಿಶ್ವನಾಥಂ ವಿಭೂತ್ಯಂಗಭೂಷಮ್ ।
ವಿರೂಪಾಕ್ಷಮಿಂದ್ವರ್ಕವಹ್ನಿತ್ರಿನೇತ್ರಂ
ಸದಾನಂದಮೀಡೇ ಪ್ರಭುಂ ಪಂಚವಕ್ತ್ರಮ್ ॥ ೨ ॥

ಗಿರೀಶಂ ಗಣೇಶಂ ಗಲೇ ನೀಲವರ್ಣಂ
ಗವೇಂದ್ರಾಧಿರೂಢಂ ಗುಣಾತೀತರೂಪಮ್ ।
ಭವಂ ಭಾಸ್ವರಂ ಭಸ್ಮನಾ ಭೂಷಿತಾಂಗಂ
ಭವಾನೀಕಲತ್ರಂ ಭಜೇ ಪಂಚವಕ್ತ್ರಮ್ ॥ ೩ ॥

ಶಿವಾಕಾಂತ ಶಂಭೋ ಶಶಾಂಕಾರ್ಧಮೌಲೇ
ಮಹೇಶಾನ ಶೂಲಿನ್ ಜಟಾಜೂಟಧಾರಿನ್ ।
ತ್ವಮೇಕೋ ಜಗದ್ವ್ಯಾಪಕೋ ವಿಶ್ವರೂಪಃ
ಪ್ರಸೀದ ಪ್ರಸೀದ ಪ್ರಭೋ ಪೂರ್ಣರೂಪ ॥ ೪ ॥

# ವೇದಸಾರಶಿವಸ್ತೋತ್ರ

೧. ಪಶುಪತಿಯೂ, ಪಾಪನಾಶಕನೂ, ಪರೇಶನೂ, ಗಜಚರ್ಮಾಂಬರ ಧಾರಿಯೂ, ಶ್ರೇಷ್ಠನೂ, ಹರಿಯುತ್ತಿರುವ ಗಂಗೆಯನ್ನು ಜಟಾಸಮೂಹದ ಮಧ್ಯದಲ್ಲಿ ಧರಿಸಿದವನೂ, ಅದ್ವಿತೀಯನೂ, ಮದನಾಂತಕನೂ ಆದ ಮಹಾದೇವನನ್ನು ಸ್ಮರಿಸುತ್ತೇನೆ.

೨. ಮಹೇಶನೂ, ಸುರೇಶನೂ, ದೇವತೆಗಳ ಶತ್ರುಗಳನ್ನು ನಾಶಮಾಡಿದವನೂ, ವಿಭುಸ್ವರೂಪನೂ, ವಿಶ್ವನಾಥನೂ, ವಿಭೂತಿಭೂಷಿತಾಂಗನೂ, ವಿರೂಪಾಕ್ಷನೂ, ಅಗ್ನಿ ಸೂರ್ಯ ಚಂದ್ರರೆಂಬ ಮೂರು ಕಣ್ಣುಗಳುಳ್ಳವನೂ, ಸದಾನಂದನೂ, ಐದು ಮುಖವುಳ್ಳವನೂ ಆದ ಪ್ರಭುವನ್ನು ಸ್ತುತಿಸುತ್ತೇನೆ.

೩. ಗಿರೀಶನೂ, ಗಣಗಳಿಗೆ ಒಡೆಯನೂ, ನೀಲಕಂಠನೂ, ವೃಷಭಾರೂಢನೂ, ಗುಣಾತೀತನೂ, ಸೃಷ್ಟಿಗೆ ಆದಿಕಾರಣನೂ, ಜ್ಯೋತಿಸ್ವರೂಪನೂ, ಭಸ್ಮಭೂಷಿತಾಂಗನೂ, ಭವಾನೀಪತಿಯೂ ಆದ ಪಂಚವಕ್ತ್ರನನ್ನು ಭಜಿಸುತ್ತೇನೆ.

೪. ಹೇ ಗೌರೀಶ, ಹೇ ಶಂಭು, ಹೇ ಅರ್ಧಚಂದ್ರಮೌಳಿ, ಮಹೇಶ, ಹೇ ಶೂಲಿ, ಜಟಾಜೂಟಧಾರಿ, ನೀನೊಬ್ಬನೇ ಜಗತ್ತನ್ನೆಲ್ಲ ವ್ಯಾಪಿಸಿರುವೆ ಮತ್ತು ವಿಶ್ವರೂಪನಾಗಿರುವೆ; ಹೇ ಪೂರ್ಣರೂಪನೇ, ಪ್ರಭುವೇ ಪ್ರಸನ್ನನಾಗು.

ಪರಾತ್ಮಾನಮೇಕಂ ಜಗದ್ಬೀಜಮಾದ್ಯಂ
ನಿರೀಹಂ ನಿರಾಕಾರಮೋಂಕಾರವೇದ್ಯಮ್ ।
ಯತೋ ಜಾಯತೇ ಪಾಲ್ಯತೇ ಯೇನ ವಿಶ್ವಂ
ತಮೀಶಂ ಭಜೇ ಲೀಯತೇ ಯತ್ರ ವಿಶ್ವಂ ॥ ೫ ॥

ನ ಭೂಮಿರ್ನ ಚಾಪೋ ನ ವಹ್ನಿರ್ನವಾಯು-
ರ್ನ ಚಾಕಾಶಮಾಸ್ತೇ ನ ತಂದ್ರಾ ನ ನಿದ್ರಾ ।
ನ ಗ್ರೀಷ್ಮೋ ನ ಶೀತಂ ನ ದೇಶೋ ನ ವೇಶೋ
ನ ಯಸ್ಯಾಸ್ತಿ ಮೂರ್ತಿಸ್ತ್ರಿಮೂರ್ತಿಂ ತಮೀಡೇ ॥ ೬ ॥

ಅಜಂ ಶಾಶ್ವತಂ ಕಾರಣಂ ಕಾರಣಾನಾಂ
ಶಿವಂ ಕೇವಲಂ ಭಾಸಕಂ ಭಾಸಕಾನಾಮ್ ।
ತುರೀಯಂ ತಮಃಪಾರಮಾದ್ಯಂತಹೀನಂ
ಪ್ರಪದ್ಯೇ ಪರಂ ಪಾವನಂ ದ್ವೈತಹೀನಮ್ ॥ ೭ ॥

ನಮಸ್ತೇ ನಮಸ್ತೇ ವಿಭೋ ವಿಶ್ವಮೂರ್ತೇ
ನಮಸ್ತೇ ನಮಸ್ತೇ ಚಿದಾನಂದಮೂರ್ತೇ ।
ನಮಸ್ತೇ ನಮಸ್ತೇ ತಪೋಯೋಗಗಮ್ಯ
ನಮಸ್ತೇ ನಮಸ್ತೇ ಶ್ರುತಿಜ್ಞಾನಗಮ್ಯ ॥ ೮ ॥

ಪ್ರಭೋ ಶೂಲಪಾಣೇ ವಿಭೋ ವಿಶ್ವನಾಥ
ಮಹಾದೇವ ಶಂಭೋ ಮಹೇಶ ತ್ರಿನೇತ್ರ ।
ಶಿವಾಕಾಂತ ಶಾಂತ ಸ್ಮರಾರೇ ಪುರಾರೇ
ತ್ವದನ್ಯೋ ವರೇಣ್ಯೋ ನ ಮಾನ್ಯೋ ನ ಗಣ್ಯಃ ॥ ೯ ॥

೫. ಪರಮಾತ್ಮನೂ, ಅದ್ವಿತೀಯನೂ, ಜಗತ್ಕಾರಣನೂ, ಆದಿಯೂ, ನಿಷ್ಕ್ರಿಯನೂ, ನಿರಾಕಾರನೂ, ಓಂಕಾರವೇದ್ಯನೂ, ಜಗತ್ತಿನ ಸೃಷ್ಟಿಸ್ಥಿತಿಲಯಕಾರಿಯೂ ಆದ ಈಶನನ್ನು ಭಜಿಸುತ್ತೇನೆ.

೬. ಪಂಚಭೂತಗಳಿಗಿಂತ ಭಿನ್ನನಾದ, ನಿದ್ರಾತಂದ್ರೆಗಳಿಲ್ಲದ, ಶೀತೋಷ್ಣಗಳನ್ನು ಮೀರಿದ, ದೇಶಸ್ಥಾನಗಳಿಲ್ಲದ, ಅಮೂರ್ತನಾದ ತ್ರಿಮೂರ್ತಿಯನ್ನು ಸ್ತುತಿಸುತ್ತೇನೆ.

೭. ಅಜನೂ, ಶಾಶ್ವತನೂ, ಕಾರಣಗಳಿಗೆ ಕಾರಣನೂ, ಶಿವನೂ, ಸ್ವಸ್ವರೂಪದಲ್ಲೇ ಇರುವವನೂ, ಜ್ಯೋತಿಗಳನ್ನು ಬೆಳಗಿಸುವವನೂ, ತುರೀಯನೂ, ತಮಸ್ಸನ್ನು ಮೀರಿದವನೂ, ಆದ್ಯಂತರಹಿತನೂ, ದ್ವೈತವಿಹೀನನೂ, ಪರಮಪಾವನನೂ ಆದ ಶಿವನಲ್ಲಿ ಶರಣಾಗತನಾಗುತ್ತೇನೆ.

೮. ಹೇ ವಿಭು, ಹೇ ವಿಶ್ವಮೂರ್ತಿ, ನಿನಗೆ ನಮಸ್ಕಾರ; ಹೇ ಚಿದಾನಂದಮೂರ್ತಿ, ನಿನಗೆ ಪುನಃ ಪುನಃ ನಮಸ್ಕಾರ; ತಪೋಯೋಗಗಳಿಗೆ ಸಿಲುಕುವವನೆ, ನಿನಗೆ ಪುನಃ ಪುನಃ ನಮಸ್ಕಾರ; ವೇದಜ್ಞಾನದ ಮೂಲಕ ತಿಳಿಯತಕ್ಕವನೆ, ನಿನಗೆ ಪುನಃ ಪುನಃ ನಮಸ್ಕಾರ.

೯. ಹೇ ಪ್ರಭು, ಶೂಲಪಾಣಿ, ವಿಭು, ವಿಶ್ವನಾಥ, ಮಹಾದೇವ, ಶಂಭು, ಮಹೇಶ, ತ್ರಿನೇತ್ರ, ಪಾರ್ವತೀವಲ್ಲಭ, ಶಾಂತಮೂರ್ತಿ, ಮನ್ಮಥಾರಿ, ತ್ರಿಪುರಾರಿ, ನಿನ್ನನ್ನು ಬಿಟ್ಟರೆ ಬೇರೆ ವರೇಣ್ಯರಿಲ್ಲ, ಗಣ್ಯರಿಲ್ಲ, ಮಾನ್ಯರಿಲ್ಲ.

ಶಂಭೋ ಮಹೇಶ ಕರುಣಾಮಯ ಶೂಲಪಾಣೇ
ಗೌರೀಪತೇ ಪಶುಪತೇ ಪಶುಪಾಶನಾಶಿನ್ ।
ಕಾಶೀಪತೇ ಕರುಣಯಾ ಜಗದೇತದೇಕ-
ಸ್ತ್ವಂ ಹಂಸಿ ಪಾಸಿ ವಿದಧಾತಿ ಮಹೇಶ್ವರೋಽಸಿ ॥ ೧೦ ॥

ತ್ವತ್ತೋ ಜಗದ್ಭವತಿ ದೇವ ಭವ ಸ್ಮರಾರೇ
ತ್ವಯ್ಯೇವ ತಿಷ್ಠತಿ ಜಗನ್ಮೃಡ ವಿಶ್ವನಾಥ ।
ತ್ವಯ್ಯೇವ ಗಚ್ಛತಿ ಲಯಂ ಜಗದೇತದೀಶ
ಲಿಂಗಾತ್ಮಕೇ ಹರ ಚರಾಚರವಿಶ್ವರೂಪಿನ್ ॥ ೧೧ ॥

೧೦. ಹೇ ಶಂಭು, ಮಹೇಶ, ಕರುಣಾಮಯ, ಶೂಲಪಾಣಿ, ಗೌರೀಪತಿ, ಪಶುಪತಿ, ಜೀವಿಗಳ ಕರ್ಮವಿಮೋಚಕನೆ, ಕಾಶೀಪತಿ, ನೀನೇ ಕರುಣೆಯಿಂದ ವಿಶ್ವವನ್ನು ಸೃಷ್ಟಿಸಿರುವೆ, ಪಾಲಿಸುವೆ, ನಾಶಮಾಡುವೆ; ನೀನೇ ಮಹೇಶ್ವರ.

೧೧. ಹೇ ದೇವ, ಭವ, ಸ್ಮರಾರಿ, ನಿನ್ನಿಂದ ವಿಶ್ವ ಜನಿಸಿದೆ. ಹೇ ಮೃಢ, ವಿಶ್ವನಾಥ, ನಿನ್ನಲ್ಲಿಯೇ ವಿಶ್ವ ಸ್ಥಿರವಾಗಿದೆ. ಹೇ ಈಶ, ಹರ, ಚರಾಚರವಿಶ್ವರೂಪಿ, ಲಿಂಗಾತ್ಮನಾದ ನಿನ್ನಲ್ಲಿಯೇ ಜಗತ್ತೆಲ್ಲಾ ಲಯವನ್ನು ಹೊಂದುವುದು.

# ಶಿವಪ್ರಾತಃಸ್ಮರಣಸ್ತೋತ್ರಮ್

ಪ್ರಾತಃ ಸ್ಮರಾಮಿ ಭವಭೀತಿಹರಂ ಸುರೇಶಂ
ಗಂಗಾಧರಂ ವೃಷಭವಾಹನಮಂಬಿಕೇಶಮ್ ।
ಖಟ್ವಾಂಗಶೂಲವರದಾಭಯಹಸ್ತಮೀಶಂ
ಸಂಸಾರರೋಗಹರಮೌಷಧಮದ್ವಿತೀಯಮ್ ॥ ೧ ॥

ಪ್ರಾತರ್ನಮಾಮಿ ಗಿರೀಶಂ ಗಿರಿಜಾರ್ಧದೇಹಂ
ಸರ್ಗಸ್ಥಿತಿಪ್ರಲಯಕಾರಣಮಾದಿದೇವಮ್ ।
ವಿಶ್ವೇಶ್ವರಂ ವಿಜಿತವಿಶ್ವಮನೋಭಿರಾಮಂ
ಸಂಸಾರರೋಗಹರಮೌಷಧಮದ್ವಿತೀಯಮ್ ॥ ೨ ॥

ಪ್ರಾತರ್ಭಜಾಮಿ ಶಿವಮೇಕಮನಂತಮಾದ್ಯಂ
ವೇದಾಂತವೇದ್ಯಮನಘಂ ಪುರುಷಂ ಮಹಾಂತಮ್ ।
ನಾಮಾದಿಭೇದರಹಿತಂ ಷಡ್ಭಾವಶೂನ್ಯಂ
ಸಂಸಾರರೋಗಹರಮೌಷಧಮದ್ವಿತೀಯಮ್ ॥ ೩ ॥

# ಶಿವಪ್ರಾತಃಸ್ಮರಣಸ್ತೋತ್ರ

೧. ಸಂಸಾರಭಯವನ್ನು ನಿವಾರಿಸುವವನೂ, ದೇವದೇವನೂ, ಗಂಗಾಧರನೂ, ವೃಷಭವಾಹನನೂ, ಅಂಬಿಕಾಪತಿಯೂ, ಖಟ್ವಾಂಗ ಮತ್ತು ಶೂಲಾಯುಧಗಳನ್ನು ಧರಿಸಿರುವವನೂ, ವರ ಮತ್ತು ಅಭಯಹಸ್ತ ಮುದ್ರಿಕೆಗಳುಳ್ಳವನೂ, ಸಂಸಾರರೋಗವನ್ನು ಹೋಗಲಾಡಿಸುವ ಅದ್ವಿತೀಯ ಔಷಧರೂಪವಾಗಿರುವವನೂ ಆದ ಪರಮೇಶ್ವರನನ್ನು ನಾನು ಪ್ರಾತಃಕಾಲದಲ್ಲಿ ಸ್ಮರಿಸುತ್ತೇನೆ.

೨. ಗಿರೀಶನೂ, ಗಿರಿಜೆಯೇ ತನ್ನ ಅರ್ಧದೇಹವಾದವನೂ, ಸೃಷ್ಟಿಸ್ಥಿತಿಲಯಗಳಿಗೆ ಕಾರಣನೂ, ಆದಿದೇವನೂ, ವಿಶ್ವೇಶ್ವರನೂ, ವಿಶ್ವವನ್ನೇ ಗೆಲ್ಲಬಲ್ಲ ಮನೋಹರರೂಪನೂ, ಸಂಸಾರರೋಗವನ್ನು ಹೋಗಲಾಡಿಸುವ ಅದ್ವಿತೀಯ ಔಷಧರೂಪವಾಗಿರುವವನೂ ಆದ ಪರಮೇಶ್ವರನನ್ನು ನಾನು ಪ್ರಾತಃಕಾಲದಲ್ಲಿ ನಮಿಸುತ್ತೇನೆ.

೩. ಅದ್ವಿತೀಯನೂ, ಅನಂತನೂ, ಆದ್ಯನೂ, ವೇದಾಂತವೇದ್ಯನೂ, ಪಾಪರಹಿತನೂ, ಪರಮಪುರುಷನೂ, ನಾಮರೂಪಾದಿಭೇದರಹಿತನೂ, (ಹುಟ್ಟು, ಬಾಳು, ಬೆಳವಣಿಗೆ, ಮುಪ್ಪು, ರೋಗ, ಸಾವು ಎಂಬ) ಷಡ್ಭಾವಶೂನ್ಯನೂ, ಸಂಸಾರರೋಗವನ್ನು ಹೋಗಲಾಡಿಸುವ ಅದ್ವಿತೀಯ ಔಷಧರೂಪವಾಗಿರುವವನೂ ಆದ ಶಿವನನ್ನು ನಾನು ಪ್ರಾತಃಕಾಲದಲ್ಲಿ ಸ್ತೋತ್ರಮಾಡುತ್ತೇನೆ.

# ಶಿವಪಂಚಾಕ್ಷರಸ್ತೋತ್ರಮ್

ನಾಗೇಂದ್ರಹಾರಾಯ ತ್ರಿಲೋಚನಾಯ
ಭಸ್ಮಾಂಗರಾಗಾಯ ಮಹೇಶ್ವರಾಯ ।
ನಿತ್ಯಾಯ ಶುದ್ಧಾಯ ದಿಗಂಬರಾಯ
ತಸ್ಮೈ ನಕಾರಾಯ ನಮಃ ಶಿವಾಯ ॥ ೧ ॥

ಮಂದಾಕಿನೀಸಲಿಲಚಂದನಚರ್ಚಿತಾಯ
ನಂದೀಶ್ವರಪ್ರಮಥನಾಥಮಹೇಶ್ವರಾಯ ।
ಮಂದಾರಪುಷ್ಪಬಹುಪುಷ್ಪಸುಪೂಜಿತಾಯ
ತಸ್ಮೈ ಮಕಾರಾಯ ನಮಃ ಶಿವಾಯ ॥ ೨ ॥

ಶಿವಾಯ ಗೌರೀವದನಾಬ್ಜಬಾಲ-
ಸೂರ್ಯಾಯ ದಕ್ಷಾಧ್ವರನಾಶಕಾಯ ।
ಶ್ರೀನೀಲಕಂಠಾಯ ವೃಷಧ್ವಜಾಯ
ತಸ್ಮೈ ಶಿಕಾರಾಯ ನಮಃ ಶಿವಾಯ ॥ ೩ ॥

ವಸಿಷ್ಠಕುಂಭೋದ್ಭವಗೌತಮಾರ್ಯ-
ಮುನೀಂದ್ರದೇವಾರ್ಚಿತಶೇಖರಾಯ ।
ಚಂದ್ರಾರ್ಕವೈಶ್ವಾನರಲೋಚನಾಯ
ತಸ್ಮೈ ವಕಾರಾಯ ನಮಃ ಶಿವಾಯ ॥ ೪ ॥

ಯಜ್ಞಸ್ವರೂಪಾಯ ಜಟಾಧರಾಯ
ಪಿನಾಕಹಸ್ತಾಯ ಸನಾತನಾಯ ।
ದಿವ್ಯಾಯ ದೇವಾಯ ದಿಗಂಬರಾಯ
ತಸ್ಮೈ ಯಕಾರಾಯ ನಮಃ ಶಿವಾಯ ॥ ೫ ॥

# ಶಿವಪಂಚಾಕ್ಷರಸ್ತೋತ್ರ

೧. ಸರ್ಪರಾಜನನ್ನು ಹಾರವಾಗಿ ಧರಿಸಿರುವವನೂ, ಮೂರು ಕಣ್ಣುಳ್ಳವನೂ, ಭಸ್ಮವನ್ನು ಅಂಗರಾಗವಾಗಿ ಲೇಪಿಸಿಕೊಂಡಿರುವವನೂ, ಮಹೇಶ್ವರನೂ, ನಿತ್ಯನೂ, ಶುದ್ಧನೂ, ದಿಗಂಬರನೂ, 'ನಮಃ ಶಿವಾಯ' ಎಂಬ ಮೂಲಮಂತ್ರದ ಮೊದಲನೆಯ ಅಕ್ಷರವಾದ ನ–ಕಾರಸ್ವರೂಪನೂ ಆದ ಪರಶಿವನನ್ನು ನಮಿಸುತ್ತೇನೆ.

೨. ಮಂದಾಕಿನಿಯ ಸಲಿಲವನ್ನು ಮತ್ತು ಶ್ರೀಗಂಧವನ್ನು ಲೇಪಿಸಿಕೊಂಡಿರುವವನೂ, ನಂದೀಶ್ವರನೇ ಮೊದಲಾದ ಪ್ರಮಥರ ಒಡೆಯನಾಗಿರುವವನೂ, ಮಂದಾರವೇ ಮೊದಲಾದ ಬಗೆಬಗೆಯ ಪುಷ್ಪಗಳಿಂದ ಪೂಜಿತನಾಗಿರುವವನೂ, 'ನಮಃ ಶಿವಾಯ' ಎಂಬ ಮೂಲಮಂತ್ರದ ಎರಡನೆಯ ಅಕ್ಷರವಾದ ಮ–ಕಾರಸ್ವರೂಪನೂ ಆದ ಪರಶಿವನನ್ನು ನಮಿಸುತ್ತೇನೆ.

೩. ಗೌರೀದೇವಿಯ ಮುಖಕಮಲಕ್ಕೆ ಬಾಲಸೂರ್ಯನಂತಿರುವವನೂ, ದಕ್ಷಯಜ್ಞವನ್ನು ನಾಶಮಾಡಿದವನೂ, ನೀಲಕಂಠನೂ, ವೃಷಭಧ್ವಜನೂ 'ನಮಃ ಶಿವಾಯ' ಎಂಬ ಮೂಲಮಂತ್ರದ ಮೂರನೆಯ ಅಕ್ಷರವಾದ ಶಿ–ಕಾರಸ್ವರೂಪನೂ ಆದ ಪರಶಿವನನ್ನು ನಮಿಸುತ್ತೇನೆ.

೪. ವಸಿಷ್ಠ, ಅಗಸ್ತ್ಯ, ಗೌತಮ ಮೊದಲಾದ ಆರ್ಯಮಹರ್ಷಿಗಳಿಂದಲೂ, ದೇವತೆಗಳಿಂದಲೂ ದೇವದೇವನೆಂದು ಪೂಜಿತನಾಗಿರುವವನೂ, ಅಗ್ನಿ ಸೂರ್ಯ ಚಂದ್ರರೆಂಬ ಮೂರು ಕಣ್ಣುಗಳುಳ್ಳವನೂ, 'ನಮಃ ಶಿವಾಯ' ಎಂಬ ಮೂಲಮಂತ್ರದ ನಾಲ್ಕನೆಯ ಅಕ್ಷರವಾದ ವ–ಕಾರಸ್ವರೂಪನೂ ಆದ ಪರಶಿವನನ್ನು ನಮಿಸುತ್ತೇನೆ.

೫. ಯಜ್ಞಸ್ವರೂಪನೂ, ಜಟಾಧರನೂ, ಪಿನಾಕವೆಂಬ ಬಿಲ್ಲನ್ನು ಧರಿಸಿರುವವನೂ, ಸನಾತನನೂ, ದಿವ್ಯನೂ, ಕಾಂತಿಮಯನೂ, ದಿಗಂಬರನೂ, 'ನಮಃ ಶಿವಾಯ' ಎಂಬ ಮೂಲಮಂತ್ರದ ಕೊನೆಯ ಅಕ್ಷರವಾದ ಯ–ಕಾರಸ್ವರೂಪನೂ ಆದ ಪರಶಿವನನ್ನು ನಮಿಸುತ್ತೇನೆ.

# ಶಿವನಾಮಾವಲ್ಯಷ್ಟಕಮ್

ಹೇ ಚಂದ್ರಚೂಡ ಮದನಾಂತಕ ಶೂಲಪಾಣೇ
ಸ್ಥಾಣೋ ಗಿರೀಶ ಗಿರಿಜೇಶ ಮಹೇಶ ಶಂಭೋ ।
ಭೂತೇಶ ಭೀತಭಯಸೂದನ ಮಾಮನಾಥಂ
ಸಂಸಾರದುಃಖಗಹನಾಜ್ಜಗದೀಶ ರಕ್ಷ ॥ ೧ ॥

ಹೇ ಪಾರ್ವತೀಹೃದಯವಲ್ಲಭ ಚಂದ್ರಮೌಳೇ
ಭೂತಾಧಿಪ ಪ್ರಮಥನಾಥ ಗಿರೀಶಜಾಪ ।
ಹೇ ವಾಮದೇವ ಭವ ರುದ್ರ ಪಿನಾಕಪಾಣೇ
ಸಂಸಾರದುಃಖಗಹನಾಜ್ಜಗದೀಶ ರಕ್ಷ ॥ ೨ ॥

ಹೇ ನೀಲಕಂಠ ವೃಷಭಧ್ವಜ ಪಂಚವಕ್ತ್ರ
ಲೋಕೇಶ ಶೇಷವಲಯ ಪ್ರಮಥೇಶ ಶರ್ವ ।
ಹೇ ಧೂರ್ಜಟೇ ಪಶುಪತೇ ಗಿರಿಜಾಪತೇ ಮಾಂ
ಸಂಸಾರದುಃಖಗಹನಾಜ್ಜಗದೀಶ ರಕ್ಷ ॥ ೩ ॥

ಹೇ ವಿಶ್ವನಾಥ ಶಿವ ಶಂಕರ ದೇವದೇವ
ಗಂಗಾಧರ ಪ್ರಮಥನಾಯಕ ನಂದಿಕೇಶ ।
ಬಾಣೇಶ್ವರಾಂಧಕರಿಪೋ ಹರ ಲೋಕನಾಥ
ಸಂಸಾರದುಃಖಗಹನಾಜ್ಜಗದೀಶ ರಕ್ಷ ॥ ೪ ॥

ವಾರಾಣಸೀಪುರಪತೇ ಮಣಿಕರ್ಣಿಕೇಶ
ವೀರೇಶ ದಕ್ಷಮುಖಕಾಲ ವಿಭೋ ಗಣೇಶ ।
ಸರ್ವೇಶ ಸರ್ವಹೃದಯೈಕನಿವಾಸ ನಾಥ
ಸಂಸಾರದುಃಖಗಹನಾಜ್ಜಗದೀಶ ರಕ್ಷ ॥ ೫ ॥

# ಶಿವನಾಮಾವಲ್ಯಷ್ಟಕ

೧. ಹೇ ಚಂದ್ರಶೇಖರ, ಮದನಾಂತಕ, ಶೂಲಪಾಣಿ, ಸ್ಥಾಣು, ಗಿರೀಶ, ಗಿರಿಜಾಪತಿ, ಮಹೇಶ, ಶಂಭು, ಭೂತೇಶ, ಭಯಗೊಂಡವರ ಭಯವನ್ನು ನಾಶಮಾಡುವವನೇ, ಜಗದೀಶ, ಸಂಸಾರದುಃಖವೆಂಬ ದಟ್ಟವಾದ ಅಡವಿಯಿಂದ ಅನಾಥನಾದ ನನ್ನನ್ನು ರಕ್ಷಿಸು.

೨. ಹೇ ಪಾರ್ವತೀಹೃದಯವಲ್ಲಭ, ಚಂದ್ರಮೌಳಿ, ಪ್ರಾಣಿಗಳ ಒಡೆಯನೇ, ಪ್ರಮಥನಾಥ, ಗಿರಿಜಾಪತಿ, ವಾಮದೇವ, ಭವ, ರುದ್ರ, ಪಿನಾಕಪಾಣಿ, ಜಗದೀಶ, ಸಂಸಾರದುಃಖವೆಂಬ ದಟ್ಟವಾದ ಅಡವಿಯಿಂದ ನನ್ನನ್ನು ರಕ್ಷಿಸು.

೩. ಹೇ ನೀಲಕಂಠ, ವೃಷಭಧ್ವಜ, ಪಂಚವಕ್ತ್ರ, ಲೋಕೇಶ, ಹಾವನ್ನು ಹಾರವಾಗಿ ಧರಿಸಿರುವವನೇ, ಪ್ರಮಥೇಶ, ಶರ್ವ, ಧೂರ್ಜಟಿ, ಪಶುಪತಿ, ಗಿರಿಜಾಪತಿ, ಸಂಸಾರದುಃಖವೆಂಬ ಗಹನವಾದ ಅಡವಿಯಿಂದ ನನ್ನನ್ನು ರಕ್ಷಿಸು.

೪. ಹೇ ವಿಶ್ವನಾಥ, ಶಿವ, ಶಂಕರ, ದೇವದೇವ, ಗಂಗಾಧರ, ಪ್ರಮಥನಾಯಕ, ನಂದಿಕೇಶ, ಬಾಣೇಶ್ವರ, ಅಂಧಕಾಸುರಶತ್ರು, ಪಾಪಹರ, ಲೋಕನಾಥ, ಜಗದೀಶ, ಸಂಸಾರದುಃಖವೆಂಬ ದಟ್ಟವಾದ ಅಡವಿಯಿಂದ ನನ್ನನ್ನು ರಕ್ಷಿಸು.

೫. ಹೇ ಕಾಶೀಪುರಪತಿ, ಮಣಿಕರ್ಣಿಕೇಶ, ವೀರಾಗ್ರೇಸರ, ದಕ್ಷಯಜ್ಞವನ್ನು ಧ್ವಂಸಮಾಡಿದವನೇ, ಸರ್ವವ್ಯಾಪಕ, ಗಣಾಧ್ಯಕ್ಷ, ಸರ್ವೇಶ, ಸಮಸ್ತರ ಹೃದಯದಲ್ಲಿಯೂ ನೆಲೆಸಿರುವವನೇ, ಸಂಸಾರದುಃಖವೆಂಬ ದಟ್ಟವಾದ ಅಡವಿಯಿಂದ ನನ್ನನ್ನು ರಕ್ಷಿಸು.

ಶ್ರೀಮನ್ಮಹೇಶ್ವರ ಕೃಪಾಮಯ ಹೇ ದಯಾಳೋ
ಹೇ ವ್ಯೋಮಕೇಶ ಶಿತಿಕಂಠ ಗಣಾಧಿನಾಥ ।
ಭಸ್ಮಾಂಗರಾಗ ನೃಕಪಾಲಕಲಾಪಮಾಲ
ಸಂಸಾರದುಃಖಗಹನಾಜ್ಜಗದೀಶ ರಕ್ಷ ॥ ೬ ॥

ಕೈಲಾಸಶೈಲವಿನಿವಾಸ ವೃಷಾಕಪೇ
ಹೇ ಮೃತ್ಯುಂಜಯ ತ್ರಿನಯನ ತ್ರಿಜಗನ್ನಿವಾಸ ।
ನಾರಾಯಣಪ್ರಿಯ ಮದಾಪಹ ಶಕ್ತಿನಾಥ
ಸಂಸಾರದುಃಖಗಹನಾಜ್ಜಗದೀಶ ರಕ್ಷ ॥ ೭ ॥

ವಿಶ್ವೇಶ ವಿಶ್ವಭವನಾಶಕ ವಿಶ್ವರೂಪ
ವಿಶ್ವಾತ್ಮಕ ತ್ರಿಭುವನೈಕಗುಣಾಧಿವಾಸ ।
ಹೇ ವಿಶ್ವವಂದ್ಯ ಕರುಣಾಮಯ ದೀನಬಂಧು
ಸಂಸಾರದುಃಖಗಹನಾಜ್ಜಗದೀಶ ರಕ್ಷ ॥ ೮ ॥

## ಶಿವನಾಮಾವಲ್ಯಷ್ಟಕ

೬. ಹೇ ಶ್ರೀಮನ್ಮಹೇಶ್ವರ, ಕೃಪಾಮಯ, ದಯಾಳು, ವ್ಯೋಮಕೇಶ, ನೀಲಕಂಠ, ಗಣನಾಯಕ, ಭಸ್ಮಧಾರಿ, ಕಂಠದಲ್ಲಿ ಕಪಾಲಮಾಲೆಯನ್ನು ಧರಿಸಿರುವವನೇ, ಜಗದೀಶ, ಸಂಸಾರದುಃಖವೆಂಬ ದಟ್ಟವಾದ ಅಡವಿಯಿಂದ ನನ್ನನ್ನು ರಕ್ಷಿಸು.

೭. ಹೇ ಕೈಲಾಸಪರ್ವತವಾಸಿ, ವೃಷಾಕಪಿ, ಮೃತ್ಯುಂಜಯ, ಮುಕ್ಕಣ್ಣ, ತ್ರಿಜಗನ್ನಿವಾಸ, ನಾರಾಯಣಪ್ರಿಯ, ಮದನಾಶಕ, ಶಕ್ತಿನಾಥ, ಜಗದೀಶ, ಸಂಸಾರದುಃಖವೆಂಬ ದಟ್ಟವಾದ ಅಡವಿಯಿಂದ ನನ್ನನ್ನು ರಕ್ಷಿಸು.

೮. ಹೇ ವಿಶ್ವೇಶ್ವರ, ಸೃಷ್ಟಿಪ್ರಳಯಗಳ ಕರ್ತೃವೇ, ವಿಶ್ವರೂಪ, ವಿಶ್ವಾತ್ಮಕ, ಮೂರು ಲೋಕಗಳ ಗುಣಗಳಿಗೂ ಏಕಮಾತ್ರ ಆಶ್ರಯನೇ, ವಿಶ್ವವಂದ್ಯ, ಕರುಣಾಮಯ, ದೀನಬಂಧು, ಜಗದೀಶ, ಸಂಸಾರದುಃಖವೆಂಬ ದಟ್ಟವಾದ ಅಡವಿಯಿಂದ ನನ್ನನ್ನು ರಕ್ಷಿಸು.

# ಶಿವಸ್ತೋತ್ರಮ್

ನಿಖಿಲಭುವನಜನ್ಮಸ್ಥೇಮಭಂಗಪ್ರರೋಹಾಃ
ಅಕಲಿತಮಹಿಮಾನಃ ಕಲ್ಪಿತಾ ಯತ್ರ ತಸ್ಮಿನ್ ।
ಸುವಿಮಲಗಗನಾಭೇ ಈಶಸಂಸ್ಥೇಽಪ್ಯನೀಶೇ
ಮಮ ಭವತು ಭವೇಽಸ್ಮಿನ್ ಭಾಸುರೋ ಭಾವಬಂಧಃ ॥ ೧ ॥

ನಿಹತನಿಖಿಲಮೋಹೇಽಧೀಶತಾ ಯತ್ರ ರೂಢಾ
ಪ್ರಕಟಿತಪರಮಪ್ರೇಮ್ಣಾ ಯೋ ಮಹಾದೇವಸಂಜ್ಞಃ ।
ಅಶಿಥಿಲಪರಿರಂಭಃ ಪ್ರೇಮರೂಪಸ್ಯ ಯಸ್ಯ
ಹೃದಿ ಪ್ರಣಯತಿ ವಿಶ್ವಂ ವ್ಯಾಜಮಾತ್ರಂ ವಿಭುತ್ವಮ್ ॥ ೨ ॥

ವಹತಿ ವಿಪುಲವಾತಃ ಪೂರ್ವಸಂಸ್ಕಾರರೂಪಃ
ಪ್ರಮಥತಿ ಬಲವೃಂದಂ ಘೂರ್ಣಿತೇವೋರ್ಮಿಮಾಲಾ ।
ಪ್ರಚಲತಿ ಖಲು ಯುಗ್ಮಂ ಯುಷ್ಮದಸ್ಮತ್ಪ್ರತೀತಂ
ಅತಿವಿಕಲಿತರೂಪಂ ನೌಮಿ ಚಿತ್ತಂ ಶಿವಸ್ಥಮ್ ॥ ೩ ॥

ಜನಕಜನಿತಭಾವೋ ವೃತ್ತಯಃ ಸಂಸ್ಕೃತಾಶ್ಚ
ಅಗಣನಬಹುರೂಪೋ ಯತ್ರ ಏಕೋ ಯಥಾರ್ಥಃ ।
ಶಮಿತವಿಕೃತಿವಾತೇ ಯತ್ರ ನಾಂತರ್ಬಹಿಶ್ಚ
ತಮಹಹ ಹರಮೀಡೇ ಚಿತ್ತವೃತ್ತೇರ್ನಿರೋಧಮ್ ॥ ೪ ॥

# ಶಿವಸ್ತೋತ್ರ

೧. ಅವನ ಮಹಿಮೆಯನ್ನು ಬಣ್ಣಿಸಲು ಅಸದಳ. ಅವನು ಶುಭ್ರತೆಯಲ್ಲಿ ಆಕಾಶವನ್ನು ಹೋಲುವನು. ಅವನಲ್ಲಿ ನಿಖಿಲ ಪ್ರಪಂಚದ ಸೃಷ್ಟಿಸ್ಥಿತಿ ಪ್ರಳಯಗಳ ಕಾರ್ಯವು ಕಲ್ಪಿತವಾಗಿದೆ. ಪ್ರಜ್ವಲಿಸುವ ನನ್ನ ಈ ಜೀವನದ ಭಕ್ತಿ ವಿಶ್ವಕ್ಕೆಲ್ಲ ಒಡೆಯನಾದರೂ ತನಗೆ ಒಡೆಯನಿಲ್ಲದ ಶಿವನ ಪಾದಪದ್ಮದಲ್ಲಿ ನೆಲೆಸಲಿ.

೨. ಮೋಹವನ್ನು ನಾಶಮಾಡುವ ಶಿವನಲ್ಲಿ ಈಶತ್ವ ಸದಾ ನೆಲೆಸಿರುವುದು. ಪ್ರಕಟವಾದ ಮಹಾಪ್ರೇಮದಿಂದ ಮಹಾದೇವನೆಂಬ ಹೆಸರು ಅವನಿಗೆ ಸಲ್ಲುವುದು. ಆ ಶಿವನ ಪರಮಪ್ರೇಮದಿಂದ ಕೂಡಿದ ಆಲಿಂಗನ ವಿಶ್ವದ ಪ್ರಭುತ್ವ ಕೂಡ ಒಂದು ವ್ಯಾಜ ಎಂಬ ಭಾವವನ್ನು ಹೃದಯದಲ್ಲಿ ಉಂಟುಮಾಡುವುದು.

೩. ಬಿರುಗಾಳಿ ಬೀಸಿ ಅಲೆಯನ್ನು ಎಬ್ಬಿಸುವಂತೆ ಪೂರ್ವಸಂಸ್ಕಾರ ಎಂಬ ಮಹಾಬಿರುಗಾಳಿ ಬೀಸಿ 'ನಾನು', 'ನೀನು' ಎಂಬ ಅಲೆಗಳನ್ನು ಉಂಟು ಮಾಡಿದೆ. ಶಿವನಲ್ಲಿ ನೆಲೆಸಿರುವ ಅಂತಹ ವಿಕಲಿತರೂಪವಾಗಿದ್ದ ಮನಸ್ಸನ್ನು ನಾನು ನಮಿಸುವೆನು.

೪. ಎಲ್ಲಿ ಜನಕಜನಿತಭಾವ, ಪರಿಶುದ್ಧವಾದ ವೃತ್ತಿಗಳು ಮತ್ತು ಅಗಣಿತವಾದ ರೂಪಗಳು ಒಂದೇ ಸತ್ಯದಲ್ಲಿ ಏಕವಾಗುವುವೋ, ಎಲ್ಲಿ ಒಳಗೆ ಹೊರಗೆ ಎಂಬ ಭಾವ ಕೊನೆಗಾಣುವುದೋ, ಪ್ರವೃತ್ತಿಗಳೆಂಬ ಅಲೆಗಳು ಎಲ್ಲಿ ಶಾಂತವಾಗುವುವೋ ಅಂತಹ ಚಿತ್ತವೃತ್ತಿಯನ್ನು ನಿರೋಧಿಸುವ ಹರನನ್ನು ನಾನು ಸ್ತುತಿಸುವೆನು.

ಗಲಿತತಿಮಿರಮಾಲಃ ಶುಭ್ರತೇಜಃಪ್ರಕಾಶಃ
ಧವಲಕಮಲಶೋಭಃ ಜ್ಞಾನಪುಂಜಾಟ್ಟಹಾಸಃ ।
ಯಮಿಜನಹೃದಿಗಮ್ಯಃ ನಿಷ್ಕಲಂ ಧ್ಯಾಯಮಾನಃ
ಪ್ರಣತಮವತುಮಾಂ ಸಃ ಮಾನಸೋ ರಾಜಹಂಸಃ ॥ ೫ ॥

ದುರಿತದಲನದಕ್ಷಂ ದಕ್ಷಜಾದತ್ತದೋಷಂ
ಕಲಿತಕಲಿಕಲಂಕಂ ಕಮ್ರಕಲ್ಹಾರಕಾಂತಮ್ ।
ಪರಹಿತಕರಣಾಯ ಪ್ರಾಣವಿಚ್ಛೇದಸೂತ್ಕಂ
ನತನಯನನಿಯುಕ್ತಂ ನೀಲಕಂಠಂ ನಮಾಮಃ ॥ ೬ ॥

೫. ತಿಮಿರಮಾಲೆ ಯಾರಲ್ಲಿ ಜಾರಿಹೋಗಿರುವುದೋ, ಶುಭ್ರತೇಜಃಪ್ರಕಾಶನಾಗಿ ಧವಳಕಮಲದಂತೆ ಯಾರು ಶೋಭಿಸುತ್ತಿರುವನೋ, ಯಾರ ಅಟ್ಟಹಾಸ ಜ್ಞಾನವನ್ನು ಪ್ರಚೋದಿಸುವುದೋ, ಯಾರನ್ನು ನಿರಂತರ ಧ್ಯಾನದಿಂದ ತಮ್ಮ ಹೃದಯಾಂತರಾಳದಲ್ಲಿ ಜ್ಞಾನಿಗಳು ತಿಳಿದುಕೊಂಡಿರುವರೋ ಅಂತಹ ಮಾನಸಸರೋವರದಲ್ಲಿ ವಿಹರಿಸುತ್ತಿರುವ ಪರಮ ಶಿವನೆಂಬ ರಾಜಹಂಸ ಪ್ರಣತನಾದ ನನ್ನನ್ನು ರಕ್ಷಿಸಲಿ.

೬. ಯಾರು ನಮ್ಮ ದುರಿತಗಳನ್ನು ಪರಿಹರಿಸುವುದರಲ್ಲಿ ದಕ್ಷನೋ, ಯಾರು ಕಲಿಕಲಂಕವನ್ನು ಹೋಗಲಾಡಿಸುವನೋ, ಯಾರಿಗೆ ದಕ್ಷ ತನ್ನ ಮಗಳನ್ನು ಕೊಟ್ಟನೋ, ಯಾರು ಕಲ್ಹಾರಪುಷ್ಪದಂತೆ ಸುಂದರನಾಗಿರುವನೋ, ಯಾರು ಮತ್ತೊಬ್ಬರ ಹಿತಕ್ಕಾಗಿ ಸದಾ ತನ್ನ ಪ್ರಾಣವನ್ನು ಕೊಡಲು ಸಿದ್ಧನಾಗಿರುವನೋ, ಯಾರ ಕೃಪಾದೃಷ್ಟಿ ದೀನರ ಮೇಲೆ ಇರುವುದೋ ಅಂತಹ ನೀಲಕಂಠನಿಗೆ ನಮಸ್ಕರಿಸುತ್ತೇವೆ.

# ನಾರಾಯಣಸೂಕ್ತಮ್

ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಮ್ ।
ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪದಮ್ ॥ ೧ ॥

ವಿಶ್ವತಃ ಪರಮಾನ್ನಿತ್ಯಂ ವಿಶ್ವಂ ನಾರಾಯಣಂ ಹರಿಂ ।
ವಿಶ್ವಮೇವೇದಂ ಪುರುಷಸ್ತದ್ವಿಶ್ವಮುಪಜೀವತಿ ॥ ೨ ॥

ಪತಿಂ ವಿಶ್ವಸ್ಯಾತ್ಮೇಶ್ವರಂ ಶಾಶ್ವತಂ ಶಿವಮಚ್ಯುತಮ್ ।
ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ
ಪರಾಯಣಮ್ ॥ ೩ ॥

ನಾರಾಯಣ ಪರಂ ಬ್ರಹ್ಮ ತತ್ತ್ವಂ ನಾರಾಯಣಃ ಪರಃ ।
ನಾರಾಯಣಂ ಪರೋ ಜ್ಯೋತಿರಾತ್ಮಾ ನಾರಾಯಣಃ ಪರಃ ।
ನಾರಾಯಣ ಪರೋ ಧ್ಯಾತಾ ಧ್ಯಾನಂ ನಾರಾಯಣಃ ಪರಃ ॥ ೪ ॥

ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ ।
ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥ ೫ ॥

ಅನಂತಮವ್ಯಯಂ ಕವಿಂ ಸಮುದ್ರೇಽಂತಂ ವಿಶ್ವಶಂಭುವಮ್ ।
ಪದ್ಮಕೋಶಪ್ರತೀಕಾಶಂ ಹೃದಯಂ ಚಾಪ್ಯಧೋಮುಖಮ್ ॥ ೬ ॥

# ನಾರಾಯಣಸೂಕ್ತ

೧. ಸಹಸ್ರಶೀರ್ಷನೂ, ವಿಶ್ವಾಕ್ಷನೂ, ವಿಶ್ವಮಂಗಳದ ಕಾರಣನೂ, ವಿಶ್ವಾತ್ಮನೂ, ಸ್ವಯಂಪ್ರಕಾಶನೂ, ಅಕ್ಷರನೂ, ಪರಮಪದವೂ ಆದ ನಾರಾಯಣನನ್ನು ಧ್ಯಾನಿಸುತ್ತೇವೆ.

೨. ವಿಶ್ವಕ್ಕಿಂತ ಶ್ರೇಷ್ಠನಾದವನೂ, ನಿತ್ಯನೂ, ಸರ್ವವ್ಯಾಪಕನೂ, ನಮ್ಮ ದೋಷಗಳನ್ನು ಪರಿಹರಿಸುವವನೂ ಆದ ನಾರಾಯಣನನ್ನು ಧ್ಯಾನಿಸುತ್ತೇವೆ. ಈ ವಿಶ್ವವೆಲ್ಲಾ ಆ ಪುರುಷನೇ ಆಗಿರುವನು; ಈ ವಿಶ್ವಕ್ಕೆ ಅವನೇ ಆಶ್ರಯನು.

೩. ವಿಶ್ವಕ್ಕೆಲ್ಲಾ ಒಡೆಯನೂ, ಜೀವವರ್ಗಕ್ಕೆಲ್ಲಾ ಈಶ್ವರನೂ, ಶಾಶ್ವತನೂ, ಮಂಗಳಸ್ವರೂಪನೂ, ಚ್ಯುತಿಯಿಲ್ಲದವನೂ, ಅರಿಯಬಹುದಾದ ವಸ್ತುಗಳಲ್ಲಿ ಅತ್ಯಂತ ಶ್ರೇಷ್ಠನೂ, ಜಗದಾತ್ಮನೂ, ಪರಮಾಶ್ರಯನೂ ಆದ ನಾರಾಯಣನನ್ನು ಧ್ಯಾನಿಸುತ್ತೇವೆ.

೪. ನಾರಾಯಣನೇ ಪರಬ್ರಹ್ಮ, ನಾರಾಯಣನೇ ಪರತತ್ತ್ವ, ನಾರಾಯಣನೇ ಪರಮಜ್ಯೋತಿ, ನಾರಾಯಣನೇ ಪರಮಾತ್ಮ; ನಾರಾಯಣನೇ ವರಿಷ್ಠನಾದ ಧ್ಯಾನಿ, ನಾರಾಯಣನೇ ಶ್ರೇಷ್ಠವಾದ ಧ್ಯಾನ.

೫. ಈ ಜಗತ್ತಿನಲ್ಲಿ ನೋಡಬಹುದಾದ ಕೇಳಬಹುದಾದ ಯಾವ ವಸ್ತುವೇ ಇರಲಿ, ಅವೆಲ್ಲವನ್ನೂ ನಾರಾಯಣನೇ ಒಳಗೂ ಹೊರಗೂ ವ್ಯಾಪಿಸಿಕೊಂಡು ಇರುವನು.

೬. ಅನಂತನೂ, ಅವ್ಯಯನೂ, ಸರ್ವಜ್ಞನೂ, ಜೀವನ–ಸಮುದ್ರದ ಲಕ್ಷ್ಯನೂ, ವಿಶ್ವಮಂಗಳದ ಕಾರಣನೂ ಆದ ನಾರಾಯಣನನ್ನು ಧ್ಯಾನಿಸುತ್ತೇವೆ; ಪದ್ಮದ ಮೊಗ್ಗಿನಂತೆ ನಮ್ಮ ಹೃದಯವು ಕೆಳಮುಖವಾಗಿದೆ:

ಅಧೋ ನಿಷ್ಟ್ಯಾ ವಿತಸ್ತ್ಯಾಂತೇ ನಾಭ್ಯಾಮುಪರಿ ತಿಷ್ಠತಿ ।
ಜ್ವಾಲಮಾಲಾಕುಲಂ ಭಾತಿ ವಿಶ್ವಸ್ಯಾಽಯತನಂ ಮಹತ್ ॥ ೭ ॥

ಸನ್ತತಂ ಶಿಲಾಭಿಸ್ತು ಲಂಬತ್ಯಾಕೋಶಸನ್ನಿಭಮ್ ।
ತಸ್ಯಾನ್ತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಂ ॥ ೮ ॥

ತಸ್ಯ ಮಧ್ಯೇ ಮಹಾನಗ್ನಿರ್ವಿಶ್ವಾರ್ಚಿರ್ವಿಶ್ವತೋಮುಖಃ ।
ಸೋಽಗ್ರಭುಗ್ವಿಭಜನ್ತಿಷ್ಠನ್ನಾಹಾರಮಜರಃ ಕವಿಃ ।
ತಿರ್ಯಗೂರ್ಧ್ವಮಧಃಶಾಯೀ ರಶ್ಮಯಸ್ತಸ್ಯ ಸಂತತಾ ॥ ೯ ॥

ಸಂತಾಪಯತಿ ಸ್ವಂ ದೇಹಮಾಪಾದತಲಮಸ್ತಕಃ ।
ತಸ್ಯ ಮಧ್ಯೇ ವಹ್ನಿಶಿಖಾ ಅಣೀಯೋರ್ಧ್ವಾ ವ್ಯವಸ್ಥಿತಃ ॥ ೧೦ ॥

ನೀಲತೋಯದಮಧ್ಯಸ್ಥಾ ವಿದ್ಯುಲ್ಲೇಖೇವ ಭಾಸ್ವರಾ ।
ನೀವಾರಶೂಕವತ್ತನ್ವೀ ಪೀತಾ ಭಾಸ್ವತ್ಯಣೂಪಮಾ ॥ ೧೧ ॥

ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ ।
ಸ ಬ್ರಹ್ಮ ಸ ಶಿವಃ ಸ ಹರಿಃ ಸೇಂದ್ರಃ ಸೋಽಕ್ಷರಃ ಪರಮಃ
ಸ್ವರಾಟ್ ॥ ೧೨ ॥

೭. ಕಂಠಮೂಲದ ಕೆಳಗೆ ಮತ್ತು ನಾಭಿಯಿಂದ ಹನ್ನೆರಡು ಅಂಗುಲಗಳ ಮೇಲೆ ಹೃದಯವಿರುವುದು; ಜ್ವಾಲಮಾಲೆಗಳಿಂದ ಸುತ್ತಲ್ಪಟ್ಟ ಆ ಮಹತ್ತಾದ ಆಯತನವು ಅದರಲ್ಲಿ ಪ್ರಕಾಶಿಸುತ್ತಾ ಇರುವುದು.

೮. ನಾಡಿಗಳಿಂದ ಸುತ್ತಲ್ಪಟ್ಟ ಹೃದಯವು ಕಮಲದ ಮೊಗ್ಗಿನಂತೆ ತೂಗಾಡುತ್ತಿರುವುದು; ಅದರ ಸಮೀಪದಲ್ಲಿ ಸೂಕ್ಷ್ಮವಾದ ಸುಷುಮ್ನಾ ನಾಡಿಯಿರುವುದು; ಅಲ್ಲಿ ಎಲ್ಲವೂ ಇರುವುದು.

೯. ಅದರ ಮಧ್ಯದಲ್ಲಿ ಬಹು ಜ್ವಾಲೆಗಳುಳ್ಳ ವಿಶ್ವತೋಮುಖವಾದ ಮಹಾಗ್ನಿ ಇರುವುದು; ಅದು ತನಗೆ ಅರ್ಪಿಸಿದ ಆಹಾರವನ್ನು ಜೀರ್ಣಿಸಿಕೊಂಡು (ದೇಹದ ಇತರ ಭಾಗಗಳಿಗೆ) ಹಂಚುತ್ತದೆ; ಅದು ಸ್ವತಃ ಜೀರ್ಣವಾಗದೆ ಜ್ಞಾನವುಳ್ಳದ್ದಾಗಿದೆ; ಅದು ಎಲ್ಲಾ ಕಡೆಗಳಲ್ಲಿಯೂ ವ್ಯಾಪ್ತವಾಗಿ ತನ್ನ ರಶ್ಮಿಗಳನ್ನು ಪ್ರಸರಿಸುವುದು.

೧೦. ಅದು ಕಾಲಿನಿಂದ ತಲೆಯ ವರೆಗೆ ತನ್ನ ದೇಹವನ್ನು ಶಾಖವಾಗಿಟ್ಟಿರುವುದು; ಅದರ ಮಧ್ಯದಲ್ಲಿ ಅತೀ ಸೂಕ್ಷ್ಮವಾದ ಒಂದು ಅಗ್ನಿಯ ಜ್ವಾಲೆಯು ಮೇಲಕ್ಕೇಳುವುದು.

೧೧. ಅದು ನೀಲಮೇಘದ ಮಧ್ಯದಲ್ಲಿ ಹೊಳೆಯುವ ವಿದ್ಯುಲ್ಲೇಖೆಯಂತೆ ಉಜ್ವಲವಾಗಿದೆ, ಯವೆಯ ಊಬಿನಂತೆ ಸೂಕ್ಷ್ಮವಾಗಿದೆ; ಅದು ಹಳದಿಯ ಬಣ್ಣದಿಂದ ಪ್ರಕಾಶಿಸುತ್ತದೆ ಮತ್ತು ಅಣುವಿನಂತೆ ಸೂಕ್ಷ್ಮವಾಗಿದೆ.

೧೨. ಈ ಅಗ್ನಿಜ್ವಾಲೆಯ ಮಧ್ಯದಲ್ಲಿ ಪರಮಾತ್ಮನು ಪ್ರತಿಷ್ಠಿತನಾಗಿರುವನು; ಅವನೇ ಬ್ರಹ್ಮ, ಅವನೇ ಶಿವ, ಅವನೇ ಇಂದ್ರ, ಅವನೇ ಅಕ್ಷರ, ವಿಶ್ವಾತೀತ ಮತ್ತು ಸ್ವರಾಟ್.

# ವಿಷ್ಣುಸ್ತೋತ್ರಮ್

ನಮಸ್ತೇ ಪುಂಡರೀಕಾಕ್ಷ ನಮಸ್ತೇ ಪುರುಷೋತ್ತಮ ।
ನಮಸ್ತೇ ಸರ್ವಲೋಕಾತ್ಮನ್ ನಮಸ್ತೇ ತಿಗ್ಮಚಕ್ರಿಣೇ ॥ ೧ ॥

ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥ ೨ ॥

ಬ್ರಹ್ಮತ್ವೇ ಸೃಜತೇ ವಿಶ್ವಂ ಸ್ಥಿತೌ ಪಾಲಯತೇ ನಮಃ ।
ರುದ್ರರೂಪಾಯ ಕಲ್ಪಾಂತೇ ನಮಸ್ತುಭ್ಯಂ ತ್ರಿಮೂರ್ತಯೇ ॥ ೩ ॥

ದೇವಾ ಯಕ್ಷಾಸುರಾಃ ಸಿದ್ಧಾ ನಾಗಾ ಗಂಧರ್ವಕಿನ್ನರಾಃ ।
ಪಿಶಾಚಾ ರಾಕ್ಷಸಾಶ್ಚೈವ ಮನುಷ್ಯಾಃ ಪಶವಶ್ಚಯೇ ॥ ೪ ॥

ಪಕ್ಷಿಣಃ ಸ್ಥಾವರಾಶ್ಚೈವ ಪಿಪೀಲಿಕಸರೀಸೃಪಾಃ ।
ಭೂಮ್ಯಾಪೋಽಗ್ನಿರ್ನಭೋ ವಾಯುಃ ಶಬ್ದಃ ಸ್ಪರ್ಶಸ್ತಥಾ ರಸಃ ॥ ೫ ॥

ರೂಪಂ ಗಂಧೋ ಮನೋ ಬುದ್ಧಿರಾತ್ಮಾ ಕಾಲಸ್ತಥಾ ಗುಣಾಃ ।
ಏತೇಷಾಂ ಪರಮಾರ್ಥಶ್ಚ ಸರ್ವಮೇತತ್ ತ್ವಮಚ್ಯುತ ॥ ೬ ॥

ವಿದ್ಯಾವಿದ್ಯೇ ಭವಾನ್ ಸತ್ಯಮಸತ್ಯಂ ಚ ವಿಷಾಮೃತೇ ।
ಪ್ರವೃತ್ತಂ ಚ ನಿವೃತ್ತಂ ಚ ಕರ್ಮವೇದೋದಿತಂ ಭವಾನ್ ॥ ೭ ॥

# ವಿಷ್ಣುಸ್ತೋತ್ರ

೧. ಹೇ ಪುಂಡರೀಕಾಕ್ಷ, ನಿನಗೆ ನಮಸ್ಕಾರ, ಹೇ ಪುರುಷೋತ್ತಮ, ನಿನಗೆ ನಮಸ್ಕಾರ, ಹೇ ಸರ್ವಲೋಕಾತ್ಮನೇ, ನಿನಗೆ ನಮಸ್ಕಾರ, ಹೇ ತೀಕ್ಷ್ಣ ಚಕ್ರಧಾರಿ, ನಿನಗೆ ನಮಸ್ಕಾರ.

೨. ಬ್ರಹ್ಮಣ್ಯದೇವನೂ, ಗೋಬ್ರಾಹ್ಮಣಹಿತಕಾರಿಯೂ ಆದ ಶ್ರೀಕೃಷ್ಣನಿಗೆ ನಮಸ್ಕಾರ. ಜಗತ್ತಿಗೆ ಹಿತವನ್ನು ಮಾಡುವ ಕೃಷ್ಣನಿಗೆ, ಗೋವಿಂದನಿಗೆ ನಮೋ ನಮಃ.

೩. ನೀನು ಬ್ರಹ್ಮರೂಪದಿಂದ ವಿಶ್ವವನ್ನು ಸೃಜಿಸುವೆ, ವಿಷ್ಣುರೂಪದಿಂದ ಪಾಲಿಸುವೆ ಮತ್ತು ಪ್ರಳಯಕಾಲದಲ್ಲಿ ರುದ್ರರೂಪದಿಂದ ಸಂಹಾರ ಮಾಡುವೆ; ತ್ರಿಮೂರ್ತಿಯಾದ ನಿನಗೆ ನಮಸ್ಕಾರ.

೪. ದೇವತೆಗಳು, ಯಕ್ಷರು, ಅಸುರರು, ಸಿದ್ಧರು, ನಾಗರು, ಗಂಧರ್ವರು, ಕಿನ್ನರರು, ಪಿಶಾಚಗಳು, ರಾಕ್ಷಸರು, ಮನುಷ್ಯರು ಮತ್ತು ಪಶುಗಳು.

೫. ಪಕ್ಷಿಗಳು, ಸ್ಥಾವರಗಳು, ಇರುವೆಗಳು ಮತ್ತು ಸರ್ಪಗಳು; ಭೂಮಿ, ನೀರು, ಅಗ್ನಿ, ಆಕಾಶ ಮತ್ತು ವಾಯು; ಶಬ್ದ, ಸ್ಪರ್ಶ ಮತ್ತು ರಸ;

೬. ರೂಪ, ಗಂಧ, ಮನಸ್ಸು, ಬುದ್ಧಿ, ಆತ್ಮ, ಕಾಲ ಮತ್ತು ತ್ರಿಗುಣಗಳು– ಇವುಗಳ ಪಾರಮಾರ್ಥಿಕರೂಪ ನೀನೇ ಆಗಿರುವೆ; ಹೇ ಅಚ್ಯುತ, ಸತ್ಯವಾಗಿ ಇವೆಲ್ಲಾ ನೀನೇ ಆಗಿರುವೆ.

೭. ನೀನೇ ವಿದ್ಯೆ ಮತ್ತು ಅವಿದ್ಯೆ, ಸತ್ಯ ಮತ್ತು ಅಸತ್ಯ, ವಿಷ ಮತ್ತು ಅಮೃತ; ನೀನೇ ವೇದೋಕ್ತವಾದ ಪ್ರವೃತ್ತಿ ಮತ್ತು ನಿವೃತ್ತಿ ಕರ್ಮ ಸ್ವರೂಪನು.

ಸಮಸ್ತಕರ್ಮಭೋಕ್ತಾ ಚ ಕರ್ಮೋಪಕರಣಾನಿ ಚ ।
ತ್ವಮೇವ ವಿಷ್ಣೋ ಸರ್ವಾಣಿ ಸರ್ವಕರ್ಮಫಲಂ ಚ ಯತ್ ॥ ೮ ॥

ಮಯ್ಯನ್ಯತ್ರ ತಥಾಶೇಷಭೂತೇಷು ಭುವನೇಷು ಚ ।
ತವೈವ ವ್ಯಾಪ್ತಿರೈಶ್ವರ್ಯಗುಣಸಂಸೂಚಿಕಾ ಪ್ರಭೋ ॥ ೯ ॥

ತ್ವಾಂ ಯೋಗಿನಶ್ಚಿಂತಯಂತಿ ತ್ವಾಂ ಯಜಂತೇ ಚ ಯಜ್ವಿನಃ ।
ಹವ್ಯಕವ್ಯಭುಗೇಕಸ್ತ್ವಂ ಪಿತೃದೇವಸ್ವರೂಪಧೃತ್ ॥ ೧೦ ॥

ರೂಪಂ ಮಹತ್ತೇ ಸ್ಥಿತಮತ್ರವಿಶ್ವಂ
ತತಶ್ಚ ಸೂಕ್ಷ್ಮಂ ಜಗದೇತದೀಶ ।
ರೂಪಾಣಿ ಸೂಕ್ಷ್ಮಾಣಿ ಚ ಭೂತಭೇದಾ-
ಸ್ತೇಷ್ವಂತರಾತ್ಮಾಖ್ಯಮತೀವ ಸೂಕ್ಷ್ಮಮ್ ॥ ೧೧ ॥

ತಸ್ಮಾಚ್ಚ ಸೂಕ್ಷ್ಮಾದಿವಿಶೇಷಣಾನಾ-
ಮಗೋಚರೇ ಯತ್ಪರಮಾರ್ಥರೂಪಂ ।
ಕಿಮಪ್ಯಚಿಂತ್ಯಂ ತವರೂಪಮಸ್ತಿ
ತಸ್ಮೈ ನಮಸ್ತೇ ಪುರುಷೋತ್ತಮಾಯ ॥ ೧೨ ॥

ಸರ್ವಭೂತೇಷು ಸರ್ವಾತ್ಮನ್ ಯಾ ಶಕ್ತಿರಪರಾ ತವ ।
ಗುಣಾಶ್ರಯಾ ನಮಸ್ತಸ್ಯೈ ಶಾಶ್ವತಾಯೈ ಸುರೇಶ್ವರ ॥ ೧೩ ॥

ಯಾತೀತಗೋಚರಾ ವಾಚಾಂ ಮನಸಾ ಚಾವಿಶೇಷಣಾ ।
ಜ್ಞಾನಿಜ್ಞಾನಪರಿಚ್ಛೇದ್ಯಾ ತಾಂ ವಂದೇ ಚೇಶ್ವರೀಂ ಪರಾಂ ॥ ೧೪ ॥

ಓಂ ನಮೋ ವಾಸುದೇವಾಯ ತಸ್ಮೈ ಭಗವತೇ ಸದಾ ।
ವ್ಯತಿರಿಕ್ತಂ ನ ಯಸ್ಯಾಸ್ತಿ ವ್ಯತಿರಿಕ್ತೋಽಖಿಲಸ್ಯ ಯಃ ॥ ೧೫ ॥

೮. ಸಮಸ್ತಕರ್ಮಗಳನ್ನೂ ಭೋಗಿಸುವವನು ನೀನೇ, ಕರ್ಮದ ಉಪಕರಣಗಳು ನೀನೇ, ಕರ್ಮಫಲವೂ ನೀನೇ; ಹೇ ವಿಷ್ಣು, ನೀನೇ ಸರ್ವವೂ ಆಗಿರುವೆ.

೯. ಹೇ ಪ್ರಭು, ನನ್ನಲ್ಲಿ ಮತ್ತು ಬೇರೆ ಕಡೆ, ಪ್ರತಿಯೊಂದು ಪ್ರಾಣಿಯಲ್ಲಿ ಮತ್ತು ಪ್ರತಿಯೊಂದು ಲೋಕದಲ್ಲಿ ನಿನ್ನ ವ್ಯಾಪ್ತಿ ನಿನ್ನ ಸಂಪತ್ತನ್ನು ಮತ್ತು ಗುಣಗಳನ್ನು ಸೂಚಿಸುತ್ತಿರುವುದು.

೧೦. ಯೋಗಿಗಳು ಧ್ಯಾನಿಸುವುದು ನಿನ್ನನ್ನು, ಜನರು ಯಜ್ಞಮಾಡುವುದು ನಿನಗೆ; ನೀನೇ ದೇವತೆಗಳ ಸ್ವರೂಪನಾಗಿ, ಪಿತೃಗಳ ಸ್ವರೂಪನಾಗಿ ಹವ್ಯಕವ್ಯಗಳನ್ನು ಸ್ವೀಕರಿಸುವೆ.

೧೧. ಅಖಿಲಬ್ರಹ್ಮಾಂಡವು ನಿನ್ನ ಮಹಾರೂಪ; ಅದಕ್ಕಿಂತ ಸೂಕ್ಷ್ಮವಾದದ್ದು ಈ ಜಗತ್ತು (ಸಂಸಾರ); ಅದಕ್ಕಿಂತಲೂ ಸೂಕ್ಷ್ಮವಾದದ್ದು ಭಿನ್ನಭಿನ್ನ ರೂಪವುಳ್ಳ ಸಮಸ್ತ ಪ್ರಾಣಿಗಳು; ಅವುಗಳಲ್ಲಿರುವ ಅಂತರಾತ್ಮವು ಅತ್ಯಂತ ಸೂಕ್ಷ್ಮವಾದುದು.

೧೨. ಅದಕ್ಕಿಂತಲೂ ಅತೀತವಾದ ಸೂಕ್ಷ್ಮಾದಿ ವಿಶೇಷಣಗಳಿಗೆ ಗೋಚರವಾಗದ, ಅಚಿಂತ್ಯವಾದ ಒಂದು ಪರಮಾರ್ಥರೂಪವು ನಿನಗುಂಟು; ಆ ಪುರುಷೋತ್ತಮರೂಪನಾದ ನಿನಗೆ ನಮಸ್ಕಾರ.

೧೩. ಹೇ ಸರ್ವಾತ್ಮನೇ, ಸರ್ವಭೂತಗಳಲ್ಲಿಯೂ ಗುಣಾಶ್ರಯವಾದ ಯಾವ ಅಪರಾಶಕ್ತಿಯುಂಟೋ, ಹೇ ಸುರೇಶ್ವರ, ಅಂತಹ ಶಾಶ್ವತವಾದ ಶಕ್ತಿಗೆ ನಮಸ್ಕಾರ.

೧೪. ಮನಸ್ಸು ಮತ್ತು ಮಾತಿಗೆ ಗೋಚರವಾಗದ, ಯಾವ ವಿಶೇಷಣಗಳೂ ಇಲ್ಲದ, ಜ್ಞಾನಿಗಳ ಜ್ಞಾನಕ್ಕೆ ಗೋಚರವಾಗುವ ಪರಮೇಶ್ವರನಿಗೆ ನಮಸ್ಕಾರ.

೧೫. ಓಂ. ಭಗವಂತನಾದ ವಾಸುದೇವನಿಗೆ ಸದಾ ನಮಸ್ಕಾರ, ಅವನಿಗಿಂತ ಅತಿರಿಕ್ತವಾದುದು ಯಾವುದೂ ಇಲ್ಲ; ಆದರೆ ಅವನು ಎಲ್ಲವನ್ನೂ ಅತಿಕ್ರಮಿಸಿದವನು.

ನಮಸ್ತಸ್ಮೈ ನಮಸ್ತಸ್ಮೈ ನಮಸ್ತಸ್ಮೈ ಮಹಾತ್ಮನೇ ।
ನಾಮರೂಪಂ ನ ಯಸ್ಯೈಕೋ ಯೋಽಸ್ತಿತ್ವೇನೋಪಲಭ್ಯತೇ ॥ ೧೬ ॥

ಯಸ್ಯಾವತಾರರೂಪಾಣಿ ಸಮರ್ಚಂತಿ ದಿವೌಕಸಃ ।
ಅಪಶ್ಯಂತಃ ಪರಂ ರೂಪಂ ನಮಸ್ತಸ್ಮೈ ಪರಾತ್ಮನೇ ॥ ೧೭ ॥

ಯೋಽನ್ತಸ್ತಿಷ್ಠನ್ನಶೇಷಸ್ಯ ಪಶ್ಯತೀಶಃ ಶುಭಾಶುಭಂ ।
ತಂ ಸರ್ವಸಾಕ್ಷಿಣಂ ವಿಷ್ಣುಂ ನಮಸ್ಯೇ ಪರಮೇಶ್ವರಮ್ ॥ ೧೮ ॥

ನಮೋಽಸ್ತು ವಿಷ್ಣವೇ ತಸ್ಮೈ ಯಸ್ಯಾಭಿನ್ನಮಿದಂ ಜಗತ್ ।
ಧ್ಯೇಯಃ ಸ ಜಗತಾಮಾದ್ಯಃ ಪ್ರಸೀದತು ಮಮಾವ್ಯಯಃ ॥ ೧೯ ॥

ಯತ್ರೋತಮೋತತ್ರೋತಂ ಚ ವಿಶ್ವಮಕ್ಷರಮವ್ಯಯಂ ।
ಆಧಾರಭೂತಃ ಸರ್ವಸ್ಯ ಸ ಪ್ರಸೀದತು ಮೇ ಹರಿಃ ॥ ೨೦ ॥

ಓಂ ನಮೋಽಸ್ತು ವಿಷ್ಣವೇ ತಸ್ಮೈ ನಮಸ್ತಸ್ಮೈ ಪುನಃ ಪುನಃ ।
ಯತ್ರ ಸರ್ವಂ ಯತಃ ಸರ್ವಂ ಯಃ ಸರ್ವಂ ಸರ್ವಸಂಶ್ರಯಃ ॥ ೨೧ ॥

ಸರ್ವಗತ್ವಾದನಂತಸ್ಯ ಸ ಏವಾಹಮವಸ್ಥಿತಃ ।
ಮತ್ತಃ ಸರ್ವಮಹಂ ಸರ್ವಂ ಮಯಿ ಸರ್ವಂ ಸನಾತನೇ ॥ ೨೨ ॥

ಅಹಮೇವಾಕ್ಷಯೋ ನಿತ್ಯಃ ಪರಮಾತ್ಮಾತ್ಮಸಂಶ್ರಯಃ ।
ಬ್ರಹ್ಮಸಂಜ್ಞೋಽಹಮೇವಾಗ್ರೇ ತಥಾನ್ತೇ ಚ ಪರಃ ಪುಮಾನ್ ॥ ೨೩ ॥

೧೬. ನಾಮರೂಪಗಳಿಲ್ಲದವನೂ, ಅದ್ವಿತೀಯನೂ, ಸತ್ತಾಮಾತ್ರದಿಂದ ಉಪಲಬ್ಧನಾಗುವವನೂ ಆದ ಮಹಾತ್ಮನಿಗೆ ಪುನಃ ಪುನಃ ನಮಸ್ಕಾರ.

೧೭. ಯಾವನ ಪರರೂಪವನ್ನು ನೋಡಲಾರದೆ ದೇವತೆಗಳು ಅವತಾರ ರೂಪಗಳನ್ನು ಪೂಜಿಸುವರೋ ಅಂತಹ ಪರಮಾತ್ಮನಿಗೆ ನಮಸ್ಕಾರ.

೧೮. ಯಾವ ಈಶನು ಸಮಸ್ತ ಪ್ರಾಣಿಗಳ ಹೃದಯದಲ್ಲಿದ್ದುಕೊಂಡು ಅವರ ಶುಭಾಶುಭ ಕರ್ಮಗಳನ್ನು ನೋಡುತ್ತಿರುವನೋ ಅಂತಹ ಸರ್ವಸಾಕ್ಷಿಯೂ ಪರಮೇಶ್ವರನೂ ಆದ ವಿಷ್ಣುವಿಗೆ ನಮಸ್ಕಾರ.

೧೯. ಯಾರಿಂದ ಈ ಜಗತ್ತು ಭಿನ್ನವಾಗಿಲ್ಲವೋ ಅಂತಹ ವಿಷ್ಣುವಿಗೆ ನಮಸ್ಕಾರ. ಈ ಜಗತ್ತಿಗೆ ಮೂಲಕಾರಣನೂ, (ಯೋಗಿಗಳಿಗೆ) ಧ್ಯೇಯನೂ, ಅವ್ಯಕ್ತನೂ ಆದ ವಿಷ್ಣುವು ನನಗೆ ಪ್ರಸನ್ನನಾಗಲಿ.

೨೦. ಯಾವನಲ್ಲಿ ಪ್ರಕೃತಿ, ಮಹತ್ತು ಮತ್ತು ವಿಶ್ವ ಓತಪ್ರೋತಗಳಾಗಿವೆಯೋ, ಯಾವನು ಸರ್ವಕ್ಕೂ ಆಧಾರಭೂತನಾಗಿರುವನೋ ಅಂತಹ ಹರಿಯು ನನಗೆ ಪ್ರಸನ್ನನಾಗಲಿ.

೨೧. ಯಾರಲ್ಲಿ ಎಲ್ಲವೂ ಇದೆಯೋ, ಯಾರಿಂದ ಎಲ್ಲವೂ ಬಂದಿದೆಯೋ, ಯಾರು ಎಲ್ಲವೂ ಆಗಿರುವನೋ, ಯಾರು ಎಲ್ಲರಿಗೂ ಆಶ್ರಯನಾಗಿರುವನೋ ಅಂತಹ ವಿಷ್ಣುವಿಗೆ ಪುನಃ ಪುನಃ ನಮಸ್ಕಾರ.

೨೨. ಅನಂತನು ಸರ್ವಗತನಾಗಿರುವುದರಿಂದ ಅವನೇ ನನ್ನ ರೂಪದಲ್ಲಿರುವನು; ಎಲ್ಲಾ ನನ್ನಿಂದಲೇ ಬಂದಿದೆ, ನಾನೇ ಎಲ್ಲಾ, ಎಲ್ಲವೂ ಸನಾತನನಾದ ನನ್ನಲ್ಲಿದೆ.

೨೩. ನಾನೇ ಅಕ್ಷಯನು, ನಿತ್ಯನು, ಪರಮಾತ್ಮನು, ಎಲ್ಲಾ ಚೇತನರಿಗೂ ಆಧಾರನು. ಬ್ರಹ್ಮಸಂಜ್ಞಿಕನೂ ಪರಮಪುರುಷನೂ ಆದ ನಾನೇ ಸೃಷ್ಟಿಯ ಆದಿಯಲ್ಲಿದ್ದೆನು, ಅಂತ್ಯದಲ್ಲಿಯೂ ಇರುತ್ತೇನೆ.

# ವಿಷ್ಣುಷಟ್ಪದೀ

ಅವಿನಯಮಪನಯ ವಿಷ್ಣೋ
ದಮಯ ಮನಃ ಶಮಯ ವಿಷಯಮೃಗತೃಷ್ಣಾಮ್ ।
ಭೂತದಯಾಂ ವಿಸ್ತಾರಯ
ತಾರಯ ಸಂಸಾರಸಾಗರತಃ ॥ ೧ ॥

ದಿವ್ಯಧುನೀಮಕರಂದೇ ಪರಿಮಲಪರಿಭೋಗಸಚ್ಚಿದಾನಂದೇ ।
ಶ್ರೀಪತಿಪದಾರವಿಂದೇ ಭವಭಯಖೇದಚ್ಛಿದೇ ವಂದೇ ॥ ೨ ॥

ಸತ್ಯಪಿ ಭೇದಾಪಗಮೇ ನಾಥ ತವಾಹಂ ನ ಮಾಮಕೀನಸ್ತ್ವಮ್ ।
ಸಾಮುದ್ರೋ ಹಿ ತರಂಗಃ ಕ್ವಚನ ಸಮುದ್ರೋ ನ ತಾರಂಗಃ ॥ ೩ ॥

ಉದ್ಧೃತನಗ ನಗಭಿದನುಜ ದನುಜಕುಲಾಮಿತ್ರ ಮಿತ್ರಶಶಿದೃಷ್ಟೇ ।
ಧೃಷ್ಟೇ ಭವತಿ ಪ್ರಭವತಿ ನ ಭವತಿ ಕಿಂ ಭವತಿರಸ್ಕಾರಃ ॥ ೪ ॥

ಮತ್ಸ್ಯಾದಿಭಿರವತಾರೈರವತಾರವತಾಽವತಾ ಸದಾ ವಸುಧಾಮ್ ।
ಪರಮೇಶ್ವರ ಪರಿಪಾಲ್ಯೋ ಭವತಾ ಭವತಾಪಭೀತೋಽಹಮ್ ॥ ೫ ॥

ದಾಮೋದರ ಗುಣಮಂದಿರ ಸುಂದರವದನಾರವಿಂದ ಗೋವಿಂದ ।
ಭವಜಲಧಿಮಥನಮಂದರ ಪರಮಂ ದರಮಪನಯ ತ್ವಂ ಮೇ ॥ ೬ ॥

ನಾರಾಯಣ ಕರುಣಾಮಯ ಶರಣಂ ಕರವಾಣಿ ತಾವಕೌ ಚರಣೌ ।
ಇತಿ ಷಟ್ಪದೀ ಮದೀಯೇ ವದನಸರೋಜೇ ಸದಾ ವಸತು ॥ ೭ ॥

## ವಿಷ್ಣುಷಟ್ಪದಿ

೧. ಹೇ ವಿಷ್ಣು, ನನ್ನ ಅವಿನಯವನ್ನು ತೆಗೆದುಹಾಕು, ನನ್ನ ಮನಸ್ಸನ್ನು ದಮನಮಾಡು; ವಿಷಯಸುಖವೆಂಬ ಮೃಗತೃಷ್ಣೆಯನ್ನು ಶಮನಮಾಡು, ನನ್ನಲ್ಲಿರುವ ಭೂತದಯೆಯನ್ನು ವಿಸ್ತರಿಸು; ಸಂಸಾರಸಾಗರದಿಂದ ನನ್ನನ್ನು ಪಾರುಮಾಡು.

೨. ಸುರನದೀ ಗಂಗೆಯು ಯಾವಾತನ ಪಾದಪದ್ಮಗಳಲ್ಲಿ ಮಕರಂದವಾಗಿದ್ದಾಳೋ, ಸಚ್ಚಿದಾನಂದವು ಯಾವುದರಲ್ಲಿ ಪರಿಮಳಸ್ವರೂಪವಾಗಿದೆಯೋ, ಆ ಸಂಸಾರಭಯ ಮತ್ತು ದುಃಖವನ್ನು ನಾಶಮಾಡುವ ಶ್ರೀಪತಿಯ ಪಾದಾರವಿಂದಗಳಿಗೆ ವಂದನೆಮಾಡುತ್ತೇನೆ.

೩. ಹೇ ನಾಥ, ದ್ವೈತಭಾವನೆಯೆಲ್ಲಾ ಹೋದ ಮೇಲೆ ನಾನು ನಿನ್ನವನಾದರೂ ನೀನು ಮಾತ್ರ ನನ್ನವನಲ್ಲ; ಕಾರಣ, ಸಾಗರಕ್ಕೆ ಅಲೆ ಸೇರಿದೆಯೆ ಹೊರತು ಅಲೆಗೆ ಸಾಗರ ಸೇರಿಲ್ಲ.

೪. ಹೇ ಗೋವರ್ಧನಧಾರಿ, ಹೇ ಉಪೇಂದ್ರ, ಹೇ ದೈತ್ಯಕುಲಶತ್ರು, ಹೇ ಚಂದ್ರಸೂರ್ಯನಯನ, ಹೇ ಸರ್ವಲೋಕಪ್ರಭು, ನಿನ್ನನ್ನು ಒಮ್ಮೆ ನೋಡಿದರೆ ಸಂಸಾರವೆಲ್ಲಾ ನಾಶವಾಗುವುದಲ್ಲವೇ?

೫. ಹೇ ಪರಮೇಶ್ವರ, ಮತ್ಸ್ಯಾದಿ ಅವತಾರರೂಪಗಳಿಂದ ಅವತಾರಗಳನ್ನು ಮಾಡಿ ನೀನು ಪ್ರಪಂಚವನ್ನು ಸದಾ ರಕ್ಷಿಸಿರುವೆ. ಭವತಾಪದಿಂದ ಭೀತನಾದ ನನ್ನನ್ನು ಪರಿಪಾಲಿಸು.

೬. ಹೇ ದಾಮೋದರ, ಹೇ ಗುಣಮಂದಿರ, ಹೇ ಸುಂದರವದನಾರವಿಂದ, ಹೇ ಗೋವಿಂದ, ಭವಜಲಧಿಯನ್ನು ಮಥಿಸುವ ಮಂದರಪರ್ವತನೇ, ನನ್ನ ಪರಮಭಯವನ್ನು ಹೋಗಲಾಡಿಸು.

೭. ಹೇ ನಾರಾಯಣ, ಹೇ ಕರುಣಾಮಯ, ನಾನು ನಿನ್ನ ಪಾದಪದ್ಮದಲ್ಲಿ ಶರಣಾಗತನಾಗುವೆನು. ಈ ಷಟ್ಪದಿಯ ಸ್ತೋತ್ರ (ಈ ಸ್ತೋತ್ರಭ್ರಮರ) ಸದಾ ನನ್ನ ಮುಖಕಮಲದಲ್ಲಿ ವಾಸಿಸಲಿ.

# ಹರಿಶರಣಾಷ್ಟಕಮ್

ಧ್ಯೇಯಂ ವದನ್ತಿ ಶಿವಮೇವ ಹಿ ಕೇಚಿದನ್ಯೇ
ಶಕ್ತಿಂ ಗಣೇಶಮಪರೇ ತು ದಿವಾಕರಂ ವೈ ।
ರೂಪೈಸ್ತು ತೈರಪಿ ವಿಭಾಸಿ ಯತಸ್ತ್ವಮೇವ
ತಸ್ಮಾತ್ತ್ವಮೇವ ಶರಣಂ ಮಮ ಶಂಖಪಾಣೇ ॥ ೧ ॥

ನೋ ಸೋದರೋ ನ ಜನಕೋ ಜನನೀ ನ ಜಾಯಾ
ನೈವಾತ್ಮಜೋ ನ ಚ ಕುಲಂ ವಿಪುಲಂ ಬಲಂ ವಾ ।
ಸಂದೃಶ್ಯತೇ ನ ಕಿಲ ಕೋಽಪಿ ಸಹಾಯಕೋ ಮೇ
ತಸ್ಮಾತ್ತ್ವಮೇವ ಶರಣಂ ಮಮ ಶಂಖಪಾಣೇ ॥ ೨ ॥

ನೋಪಾಸಿತಾ ಮದಮಪಾಸ್ಯ ಮಯಾ ಮಹಾನ್ತಃ
ತೀರ್ಥಾನಿ ಚಾಸ್ತಿಕಧಿಯಾ ನಹಿ ಸೇವಿತಾನಿ ।
ದೇವಾರ್ಚನಂ ಚ ವಿಧಿವನ್ನ ಕೃತಂ ಕದಾಪಿ
ತಸ್ಮಾತ್ತ್ವಮೇವ ಶರಣಂ ಮಮ ಶಂಖಪಾಣೇ ॥ ೩ ॥

ದುರ್ವಾಸನಾ ಮಮ ಸದಾ ಪರಿಕರ್ಷಯನ್ತಿ
ಚಿತ್ತಂ ಶರೀರಮಪಿ ರೋಗಗಣಾ ದಹನ್ತಿ ।
ಸಂಜೀವನಂ ಚ ಪರಹಸ್ತಗತಂ ಸದೈವ
ತಸ್ಮಾತ್ತ್ವಮೇವ ಶರಣಂ ಮಮ ಶಂಖಪಾಣೇ ॥ ೪ ॥

ಪೂರ್ವಂ ಕೃತಾನಿ ದುರಿತಾನಿ ಮಯಾ ತು ಯಾನಿ
ಸ್ಮೃತ್ವಾಖಿಲಾನಿ ಹೃದಯಂ ಪರಿಕಂಪತೇ ಮೇ ।
ಖ್ಯಾತಾ ಚ ತೇ ಪತಿತಪಾವನತಾ ತು ಯಸ್ಮಾತ್
ತಸ್ಮಾತ್ತ್ವಮೇವ ಶರಣಂ ಮಮ ಶಂಖಪಾಣೇ ॥ ೫ ॥

# ಹರಿಶರಣಾಷ್ಟಕ

೧. ಕೆಲವರು ಧ್ಯಾನಿಸಲು ಶಿವನೇ ಯೋಗ್ಯವಸ್ತು ಎನ್ನುವರು; ಕೆಲವರು ಶಕ್ತಿ ಎನ್ನುವರು; ಕೆಲವರು ಗಣೇಶ ಎನ್ನುವರು; ಇನ್ನು ಕೆಲವರು ಸೂರ್ಯ ಎನ್ನುವರು; ಆದರೆ ಹೇ ಶಂಖಪಾಣಿ, ನೀನು ಆ ರೂಪಗಳಲ್ಲಿಯೂ ಪ್ರಕಾಶಿಸುತ್ತಿರುವುದರಿಂದ ನೀನೇ ನನಗೆ ಶರಣು.

೨. ನನಗೆ ಸಹೋದರರಿಲ್ಲ, ಜನಕಜನನಿಯರಿಲ್ಲ, ಹೆಂಡತಿಮಕ್ಕಳಿಲ್ಲ, ನನಗೆ ಕುಲವಾಗಲೀ, ವಿಪುಲ ಬಲವಾಗಲೀ ಯಾವುದೂ ಇಲ್ಲ. ನನಗೆ ಯಾವ ಸಹಾಯಕನೂ ಕಾಣುವುದಿಲ್ಲ; ಆದಕಾರಣ ಹೇ ಶಂಖಪಾಣಿ, ನೀನೇ ನನಗೆ ಶರಣು.

೩. ನಾನು ಮದವನ್ನು ಬಿಟ್ಟು ಮಹಾತ್ಮರನ್ನು ಎಂದೂ ಸೇವಿಸಲಿಲ್ಲ; ಆಸ್ತಿಕ್ಯ ಬುದ್ಧಿಯಿಂದ ನಾನು ಯಾವ ತೀರ್ಥವನ್ನೂ ಸೇವಿಸಲಿಲ್ಲ; ವಿಧಿಪೂರ್ವಕವಾಗಿ ನಾನು ದೇವತಾರ್ಚನೆ ಮಾಡಲಿಲ್ಲ; ಆದಕಾರಣ ಹೇ ಶಂಖಪಾಣಿ, ನೀನೇ ನನಗೆ ಶರಣು.

೪. ಕೆಟ್ಟ ಸಂಸ್ಕಾರಗಳು ನನ್ನ ಮನಸ್ಸನ್ನು ಯಾವಾಗಲೂ ಎಳದಾಡುತ್ತಿವೆ; ರೋಗರುಜಿನಗಳು ನನ್ನ ಶರೀರವನ್ನು ದಹಿಸುತ್ತಿವೆ; ನನ್ನ ಜೀವನವೋ ಯಾವಾಗಲೂ ಮತ್ತೊಬ್ಬರನ್ನು ಆಶ್ರಯಿಸಿಕೊಂಡು ಬೆಳೆಯಬೇಕಾಗಿದೆ; ಆದಕಾರಣ ಹೇ ಶಂಖಪಾಣಿ, ನೀನೇ ನನಗೆ ಶರಣು.

೫. ನಾನು ಪೂರ್ವದಲ್ಲಿ ಮಾಡಿದ ಪಾಪಕೃತ್ಯಗಳನ್ನು ಕುರಿತು ಚಿಂತಿಸಿದರೆ ಸಾಕು, ಹೃದಯ ಅಂಜಿಕೆಯಿಂದ ಕಂಪಿಸುವುದು. ನಿನಗೆ ಪತಿತಪಾವನನೆಂದು ಖ್ಯಾತಿಯುಂಟು; ಆದುದರಿಂದ ಹೇ ಶಂಖಪಾಣಿ, ನೀನೇ ನನಗೆ ಶರಣು.

ದುಃಖಂ ಜರಾಜನನಜಂ ವಿವಿಧಾಶ್ಚ ರೋಗಾಃ
ಕಾಕಶ್ವಸೂಕರಜನಿರ್ನಿರಯೇ ಚ ಪಾತಃ ।
ತೇ ವಿಸ್ಮೃತೇಃ ಫಲಮಿದಂ ವಿತತಂ ಹಿ ಲೋಕೇ
ತಸ್ಮಾತ್ತ್ವಮೇವ ಶರಣಂ ಮಮ ಶಂಖಪಾಣೇ ॥ ೬ ॥

ನೀಚೋಽಪಿ ಪಾಪವಲಿತೋಽಪಿ ವಿನಿಂದಿತೋಽಪಿ
ಭ್ರೂಯಾತ್ತವಾಹಮಿತಿ ಯಸ್ತು ಕಿಲೈಕವಾರಮ್ ।
ತಂ ಯಚ್ಛಸೀಶ ನಿಜಲೋಕಮಿತಿ ವ್ರತಂ ತೇ
ತಸ್ಮಾತ್ತ್ವಮೇವ ಶರಣಂ ಮಮ ಶಂಖಪಾಣೇ ॥ ೭ ॥

ವೇದೇಷು ಧರ್ಮವಚನೇಷು ತಥಾಗಮೇಷು
ರಾಮಾಯಣೇಽಪಿ ಚ ಪುರಾಣಕದಂಬಕೇ ವಾ ।
ಸರ್ವತ್ರ ಸರ್ವವಿಧಿನಾ ಗದಿತಸ್ತ್ವಮೇವ
ತಸ್ಮಾತ್ತ್ವಮೇವ ಶರಣಂ ಮಮ ಶಂಖಪಾಣೇ ॥ ೮ ॥

೬. ಜನ್ಮಮುಪ್ಪುಗಳಿಂದ ಉಂಟಾಗುವ ದುಃಖ, ವಿವಿಧ ರೋಗಗಳು, ಕಾಗೆ, ನಾಯಿ, ಹಂದಿ ಮುಂತಾದ ಜನ್ಮಗಳು ಮತ್ತು ನರಕವಾಸ—ಇವೆಲ್ಲವೂ ನಿನ್ನನ್ನು ಈ ಲೋಕದಲ್ಲಿ ಮರೆತಿದ್ದುದರ ಫಲವಾಗಿದೆ; ಆದಕಾರಣ ಹೇ ಶಂಖಪಾಣಿ, ನೀನೇ ನನಗೆ ಶರಣು.

೭. ನೀಚನಾಗಿರಲಿ, ಪಾಪಿಯಾಗಿರಲಿ, ನಿಂದಾರ್ಹನಾಗಿರಲಿ, ಅವನು ಒಂದೇ ಸಲ "ನಾನು ನಿನ್ನವನು" ಎಂದರೆ ಸಾಕು, ನೀನು ಅವನಿಗೆ ನಿನ್ನ ಲೋಕದಲ್ಲಿ ಆಶ್ರಯವನ್ನು ಕೊಡುವೆ; ಇದು ನಿನ್ನ ವ್ರತವಾಗಿದೆ; ಆದಕಾರಣ ಹೇ ಶಂಖಪಾಣಿ, ನೀನೇ ನನಗೆ ಶರಣು.

೮. ವೇದಗಳಲ್ಲಿ, ಧರ್ಮಶಾಸ್ತ್ರಗಳಲ್ಲಿ, ಆಗಮಗಳಲ್ಲಿ, ಶ್ರೀಮದ್ರಾಮಾಯಣ ಮತ್ತು ಇತರ ಪುರಾಣಗಳಲ್ಲಿ, ಎಲ್ಲಾ ಕಡೆಯಲ್ಲಿಯೂ, ಎಲ್ಲಾ ವಿಧಿಗಳಲ್ಲಿಯೂ ನಿನ್ನನ್ನೇ ಸಾರಿ ಹೇಳಿದೆ; ಆದಕಾರಣ ಹೇ ಶಂಖಪಾಣಿ, ನೀನೇ ನನಗೆ ಶರಣು.

# ದ್ವಾದಶಪಂಜರಿಕಾಸ್ತೋತ್ರಮ್

ಮೂಢ ಜಹೀಹಿ ಧನಾಗಮತೃಷ್ಣಾಂ
ಕುರು ಸದ್ಬುದ್ಧಿಂ ಮನಸಿ ವಿತೃಷ್ಣಾಮ್ ।
ಯಲ್ಲಭಸೇ ನಿಜಕರ್ಮೋಪಾತ್ತಂ
ವಿತ್ತಂ ತೇನ ವಿನೋದಯ ಚಿತ್ತಮ್ ॥ ೧ ॥

ಅರ್ಥಮನರ್ಥಂ ಭಾವಯ ನಿತ್ಯಂ
ನಾಸ್ತಿ ತತಃ ಸುಖಲೇಶಃ ಸತ್ಯಮ್ ।
ಪುತ್ರಾದಪಿ ಧನಭಾಜಾಂ ಭೀತಿಃ
ಸರ್ವತ್ರೈಷಾ ವಿಹಿತಾ ನೀತಿಃ ॥ ೨ ॥

ಕಾ ತೇ ಕಾಂತಾ ಕಸ್ತೇ ಪುತ್ರಃ
ಸಂಸಾರೋಽಯಮತೀವ ವಿಚಿತ್ರಃ ।
ಕಸ್ಯ ತ್ವಂ ಕಃ ಕುತ ಆಯಾತ-
ಸ್ತತ್ತ್ವಂ ಚಿಂತಯ ಯದಿದಂ ಭ್ರಾತಃ ॥ ೩ ॥

ಮಾ ಕುರು ಧನಜನಯೌವನಗರ್ವಂ
ಹರತಿ ನಿಮೇಷಾತ್ ಕಾಲಃ ಸರ್ವಮ್ ।
ಮಾಯಾಮಯಮಿದಮಖಿಲಂ ಹಿತ್ವಾ
ಬ್ರಹ್ಮಪದಂ ತ್ವಂ ಪ್ರವಿಶ ವಿದಿತ್ವಾ ॥ ೪ ॥

ಕಾಮಂ ಕ್ರೋಧಂ ಮೋಹಂ ಲೋಭಂ
ತ್ಯಕ್ತ್ವಾತ್ಮಾನಂ ಭಾವಯ ಕೋಽಹಮ್ ।
ಆತ್ಮಜ್ಞಾನವಿಹೀನಾ ಮೂಢಾ-
ಸ್ತೇ ಪಚ್ಯಂತೇ ನರಕನಿಗೂಢಾಃ ॥ ೫ ॥

# ದ್ವಾದಶಪಂಜರಿಕಾಸ್ತೋತ್ರ

೧. ಮೂಢ, ಧನಸಂಚಯದ ತೃಷ್ಣೆಯನ್ನು ತೊರೆ; ಮನಸ್ಸಿನಲ್ಲಿ ಸದ್ಬುದ್ಧಿಯನ್ನೂ ವೈರಾಗ್ಯವನ್ನೂ ಬೆಳೆಸು; ನಿನ್ನ ನಿಜಕರ್ಮದಿಂದ ಬರುವ ದ್ರವ್ಯದಿಂದ ಮನಸ್ಸನ್ನು ತೃಪ್ತಿಗೊಳಿಸು.

೨. ಯಾವಾಗಲೂ ಅರ್ಥವು ಅನರ್ಥವೆಂದು ಭಾವಿಸಿಕೊ; ಸತ್ಯವಾಗಿ ಅದರಲ್ಲಿ ಸ್ವಲ್ಪವೂ ಸುಖವಿಲ್ಲ. ಐಶ್ವರ್ಯವಂತರಿಗೆ ತಮ್ಮ ಮಕ್ಕಳಿಂದಲೇ ಭೀತಿ ತಪ್ಪಿದ್ದಲ್ಲ; ಸರ್ವತ್ರ ಕಾಣುವ ಸ್ಥಿತಿಯೇ ಇದು.

೩. ನಿನ್ನ ಕಾಂತೆ ಯಾರು? ಸುತನಾರು? ಈ ಸಂಸಾರ ಅತಿ ವಿಚಿತ್ರವಾಗಿದೆ. ನೀನು ಯಾರು? ಯಾರವನು? ಎಲ್ಲಿಂದ ಬಂದೆ? ಹೇ ಸೋದರನೇ, ಇದನ್ನು ಕುರಿತು ಯೋಚಿಸು.

೪. ಧನಜನಯೌವನಗಳಿಂದ ಗರ್ವಪಡಬೇಡ; ಕಾಲ ಇವೆಲ್ಲವನ್ನೂ ಕ್ಷಣದಲ್ಲಿ ನಾಶಮಾಡುವುದು; ಮಾಯಾಮಯವಾದ ಈ ಅಖಿಲ ಜಗತ್ತನ್ನೂ ತೊರೆದು, ಪರಬ್ರಹ್ಮಸ್ವರೂಪವನ್ನು ತಿಳಿದುಕೊಂಡು ಅದರಲ್ಲಿ ಪ್ರತಿಷ್ಠಿತನಾಗು.

೫. ಕಾಮಕ್ರೋಧಲೋಭಮೋಹಗಳನ್ನು ತ್ಯಜಿಸಿ, "ನಾನು ಯಾರು?" ಎಂದು ಆತ್ಮನನ್ನು ಕುರಿತು ವಿಚಾರಮಾಡು; ಆತ್ಮಜ್ಞಾನವಿಹೀನರಾದ ಮೂಢರು ನರಕಕ್ಕೆ ಹೋಗುವರು.

ಸುರಮಂದಿರತರುಮೂಲನಿವಾಸಃ
  ಶಯ್ಯಾ ಭೂತಲಮಜಿನಂ ವಾಸಃ ।
ಸರ್ವಪರಿಗ್ರಹಭೋಗತ್ಯಾಗಃ
  ಕಸ್ಯ ಸುಖಂ ನ ಕರೋತಿ ವಿರಾಗಃ ॥ ೬ ॥

ಶತ್ರೌ ಮಿತ್ರೇ ಪುತ್ರೇ ಬಂಧೌ
  ಮಾ ಕುರು ಯತ್ನಂ ವಿಗ್ರಹಸಂಧೌ ।
ಭವ ಸಮಚಿತ್ತಃ ಸರ್ವತ್ರ ತ್ವಂ
  ವಾಂಛಸ್ಯಚಿರಾದ್ ಯದಿ ವಿಷ್ಣುತ್ವಮ್ ॥ ೭ ॥

ತ್ವಯಿ ಮಯಿ ಚಾನ್ಯತ್ರೈಕೋ ವಿಷ್ಣು-
  ರ್ವ್ಯರ್ಥಂ ಕುಪ್ಯಸಿ ಮಯ್ಯಸಹಿಷ್ಣುಃ ।
ಸರ್ವಸ್ಮಿನ್ನಪಿ ಪಶ್ಯಾತ್ಮಾನಂ
  ಸರ್ವತ್ರೋತ್ಸೃಜ ಭೇದಜ್ಞಾನಮ್ ॥ ೮ ॥

ಪ್ರಾಣಾಯಾಮಂ ಪ್ರತ್ಯಾಹಾರಂ
  ನಿತ್ಯಾನಿತ್ಯವಿವೇಕವಿಚಾರಮ್ ।
ಜಾಪ್ಯಸಮೇತಸಮಾಧಿವಿಧಾನಂ
  ಕುರ್ವವಧಾನಂ ಮಹದವಧಾನಮ್ ॥ ೯ ॥

ನಲಿನೀದಲಗತಸಲಿಲಂ ತರಲಂ
  ತದ್ವಜ್ಜೀವಿತಮತಿಶಯಚಪಲಮ್ ।
ವಿದ್ಧಿ ವ್ಯಾಧ್ಯಭಿಮಾನಗ್ರಸ್ತಂ
  ಲೋಕಂ ಶೋಕಹತಂ ಚ ಸಮಸ್ತಮ್ ॥ ೧೦ ॥

ಕಾ ತೇಽಷ್ಟಾದಶದೇಶೇ ಚಿಂತಾ
  ವಾತುಲ ತವ ಕಿಂ ನಾಸ್ತಿ ನಿಯಂತಾ ।
ಯಸ್ತ್ವಾಂ ಹಸ್ತೇ ಸುದೃಢನಿಬದ್ಧಂ
  ಬೋಧಯತಿ ಪ್ರಭವಾದಿವಿರುದ್ಧಮ್ ॥ ೧೧ ॥

೬. ದೇವಾಲಯದಲ್ಲೋ ಮರದ ಕೆಳಗೋ ವಾಸ, ಭೂಮಿಯ ಮೇಲೆ ಮಲಗುವುದು, ಕೃಷ್ಣಾಜಿನವೇ ವಸನ, ಯಾವ ದಾನಗಳನ್ನೂ ಸ್ವೀಕರಿಸದೆ ಭೋಗವನ್ನು ತ್ಯಜಿಸುವುದು – ಇಂತಹ ವೈರಾಗ್ಯ ಯಾರಿಗೆ ಸುಖವನ್ನು ಕೊಡಲಾರದು?

೭. ಶತ್ರು, ಮಿತ್ರ, ಪುತ್ರ, ಬಂಧುವರ್ಗ, ಯುದ್ಧ ಮತ್ತು ಸಂಧಿ–ಇವುಗಳಾವುದರಲ್ಲಿಯೂ ಆಸಕ್ತನಾಗಬೇಡ; ವಿಷ್ಣುತ್ವವನ್ನು ನೀನು ಶೀಘ್ರವಾಗಿ ಪಡೆಯಬೇಕಾದರೆ ಸರ್ವತ್ರ ಸಮಬುದ್ಧಿಯಿರಲಿ.

೮. ಒಬ್ಬನೇ ವಿಷ್ಣುವು, ನಿನ್ನಲ್ಲಿ ನನ್ನಲ್ಲಿ ಮತ್ತು ಇತರರಲ್ಲಿ ಇರುವನು; ನನ್ನ ಮೇಲೆ ಸಹನೆಯಿಲ್ಲದೆ ಸುಮ್ಮನೆ ಕೋಪಗೊಳ್ಳುವಿ; ಎಲ್ಲರಲ್ಲಿಯೂ ಆತ್ಮನನ್ನು ನೋಡು, ಭೇದಬುದ್ಧಿಯನ್ನು ಬಿಡು.

೯. ಪ್ರಾಣಾಯಾಮ, ಪ್ರತ್ಯಾಹಾರ, ನಿತ್ಯಾನಿತ್ಯವಸ್ತುವಿಚಾರ, ಮಂತ್ರಜಪದೊಂದಿಗೆ ಸಮಾಧಿ–ಇವುಗಳನ್ನು ಅಭ್ಯಾಸಮಾಡು; ಇವುಗಳ ವಿಚಾರದಲ್ಲಿ ಗಮನವಿರಲಿ, ಹೆಚ್ಚು ಗಮನವಿರಲಿ.

೧೦. ಕಮಲಪತ್ರದ ಮೇಲೆ ಇರುವ ಜಲಬಿಂದುವು ಚಂಚಲವಾಗಿರುವ ಹಾಗೆ ಜೀವನವೂ ಅತ್ಯಂತ ಚಂಚಲವಾದದ್ದು; ವ್ಯಾಧಿ ಮತ್ತು ಅಭಿಮಾನಗಳಿಂದ ಜನರೆಲ್ಲಾ ಗ್ರಸ್ತರಾಗಿ, ಶೋಕದಿಂದ ಹತರಾಗಿದ್ದಾರೆಂದು ತಿಳಿದುಕೊ.

೧೧. ಎಲೈ ಚಂಚಲಚಿತ್ತನೆ, ನಿನ್ನ ಮನಸ್ಸೇಕೆ ಹದಿನೆಂಟು ಕಡೆ ಓಡುತ್ತಿದೆ? ನಿನ್ನ ಕೈಗಳನ್ನು ದೃಢವಾಗಿ ಹಿಡಿದುಕೊಂಡು, ಉತ್ಪತ್ತಿ, ಲಯ ಮುಂತಾದುವುಗಳ ಪರಸ್ಪರವಿರೋಧವನ್ನು ತಿಳಿಸುವ ಮಾರ್ಗದರ್ಶಕ ಯಾರೂ ಇಲ್ಲವೆ?

ಗುರುಚರಣಾಂಬುಜನಿರ್ಭರಭಕ್ತಃ
ಸಂಸಾರಾದಚಿರಾದ್ಭವ ಮುಕ್ತಃ ।
ಸೇಂದ್ರಿಯಮಾನಸನಿಯಮಾದೇವಂ
ದ್ರಕ್ಷ್ಯಸಿ ನಿಜಹೃದಯಸ್ಥಂ ದೇವಮ್ ॥ ೧೨ ॥

ದ್ವಾದಶಪಂಜರಿಕಾಮಯ ಏಷ
ಶಿಷ್ಯಾಣಾಂ ಕಥಿತೋ ಹ್ಯುಪದೇಶಃ ।
ಯೇಷಾಂ ಚಿತ್ತೇ ನೈವ ವಿವೇಕಸ್ತೇ
ಪಚ್ಯಂತೇ ನರಕಮನೇಕಮ್ ॥ ೧೩ ॥

೧೨. ಗುರುಚರಣಾಂಬುಜದಲ್ಲಿ ಪೂರ್ಣಭಕ್ತಿಯುಳ್ಳವನಾಗಿ ಸಂಸಾರದಿಂದ ಶೀಘ್ರವಾಗಿ ಮುಕ್ತನಾಗು; ಇಂದ್ರಿಯಗಳೊಂದಿಗೆ ಮನಸ್ಸನ್ನು ನಿಗ್ರಹಿಸಿದರೆ ನಿನ್ನ ಹೃದಯಸ್ಥನಾದ ಈಶ್ವರನನ್ನು ನೋಡುವೆ.

೧೩. ಈ ದ್ವಾದಶಶ್ಲೋಕಾತ್ಮಕವಾದ ಉಪದೇಶವು ಶಿಷ್ಯರಿಗಾಗಿ ಹೇಳಲ್ಪಟ್ಟಿದೆ; ಯಾರ ಚಿತ್ತದಲ್ಲಿ ವಿವೇಕವಿಲ್ಲವೋ ಅವರು ನರಕದಲ್ಲಿ ಅನೇಕ ಪ್ರಕಾರ ಕ್ಲೇಶವನ್ನು ಅನುಭವಿಸಬೇಕಾಗುವುದು.

# ಚರ್ಪಟಪಂಜರಿಕಾಸ್ತೋತ್ರಮ್

ದಿನಮಪಿ ರಜನೀ ಸಾಯಂಪ್ರಾತಃ
ಶಿಶಿರವಸಂತೌ ಪುನರಾಯಾತಃ ।
ಕಾಲಃ ಕ್ರೀಡತಿ ಗಚ್ಛತ್ಯಾಯು-
ಸ್ತದಪಿ ನ ಮುಂಚತ್ಯಾಶಾವಾಯುಃ ॥ ೧ ॥

ಭಜ ಗೋವಿಂದಂ ಭಜ ಗೋವಿಂದಂ ಭಜ ಗೋವಿಂದಂ ಮೂಢಮತೇ
ಸಂಪ್ರಾಪ್ತೇ ಸನ್ನಿಹಿತೇ ಕಾಲೇ ನಹಿ ನಹಿ ರಕ್ಷತಿ ಡುಕೃಞ್ಕರಣೇ
(ಧ್ರುವಪದಮ್)

ಅಗ್ರೇ ವಹ್ನಿಃ ಪೃಷ್ಠೇ ಭಾನೂ ರಾತ್ರೌ ಚುಬುಕಸಮರ್ಪಿತಜಾನುಃ
ಕರತಲಭಿಕ್ಷಾ ತರುತಲವಾಸಸ್ತದಪಿ ನ ಮುಂಚತ್ಯಾಶಾಪಾಶಃ ॥ ೨ ॥

ಯಾವದ್ವಿತ್ತೋಪಾರ್ಜನಸಕ್ತಸ್ತಾವನ್ನಿಜಪರಿವಾರೋ ರಕ್ತಃ ।
ಪಶ್ಚಾದ್ಧಾವತಿ ಜರ್ಜರದೇಹೇ ವಾರ್ತಾಂ ಪೃಚ್ಛತಿ ಕೋಽಪಿ ನ ಗೇಹೇ ॥ ೩ ॥

ಜಟಿಲೋ ಮುಂಡೀ ಲುಂಚಿತಕೇಶಃ ಕಾಷಾಯಾಂಬರಬಹುಕೃತವೇಷಃ ।
ಪಶ್ಯನ್ನಪಿ ಚ ನ ಪಶ್ಯತಿ ಮೂಢ ಉದರನಿಮಿತ್ತಂ ಬಹುಕೃತವೇಷಃ ॥ ೪ ॥

ಭಗವದ್ಗೀತಾ ಕಿಂಚಿದಧೀತಾ ಗಂಗಾಜಲಲವಕಣಿಕಾ ಪೀತಾ ।
ಸಕೃದಪಿ ಯಸ್ಯ ಮುರಾರಿಸಮರ್ಚಾ ತಸ್ಯ ಯಮಃ ಕಿಂ ಕುರುತೇ
ಚರ್ಚಾಮ್ ॥ ೫ ॥

# ಚರ್ಪಟಪಂಜರಿಕಾಸ್ತೋತ್ರ

೧. ದಿನರಾತ್ರಿಗಳು, ಅರುಣಸಂಧ್ಯೆಗಳು, ಶಿಶಿರವಸಂತಋತುಗಳು ಪುನಃ ಪುನಃ ಬರುತ್ತವೆ; ಕಾಲ ಆಟವಾಡುತ್ತಿದೆ, ಆಯುಸ್ಸು ಸವೆಯುತ್ತಿದೆ; ಆದರೂ ವ್ಯರ್ಥವಾದ ಆಸೆ ಬಿಡುವುದಿಲ್ಲ. ಹೇ ಮೂಢಬುದ್ಧಿ, ಗೋವಿಂದ ನನ್ನು ಭಜಿಸು, ಸಾಯುವ ಕಾಲ ಬಂದಾಗ ವ್ಯಾಕರಣವು ನಿನ್ನನ್ನು ರಕ್ಷಿಸಲಾರದು–ಖಂಡಿತವಾಗಿ ರಕ್ಷಿಸಲಾರದು.

೨. ಮುಂದೆ ಬೆಂಕಿ, ಹಿಂದೆ ಸೂರ್ಯ, ರಾತ್ರಿ ಮಡಿಚಿದ ಮೊಣಕಾಲುಗಳ ಮಧ್ಯದಲ್ಲಿ ಕುತ್ತಿಗೆಯನ್ನು ಇಡುವುದು; ಕೈಗಳಲ್ಲಿ ಭಿಕ್ಷೆ ಸ್ವೀಕರಿಸುವುದು; ಮರದ ಕೆಳಗೆ ವಾಸಿಸುವುದು – ಹೀಗಿದ್ದರೂ ಆಶಾಪಾಶವು ಯಾರನ್ನೂ ಬಿಡುವುದಿಲ್ಲ.

೩. ಹಣವನ್ನು ಸಂಪಾದಿಸುತ್ತಿರುವವರೆಗೆ ನಂಟರಿಷ್ಟರು ಅವನಲ್ಲಿ ಆಸಕ್ತರಾಗಿರುವರು; ಆ ಮೇಲೆ ಇವನು ವೃದ್ಧನಾದರೆ ಇವನ ಮನೆಯಲ್ಲೇ ಇವನನ್ನು ಯಾರೂ ವಿಚಾರಿಸುವವರು ಇರುವುದಿಲ್ಲ.

೪. ಜಟೆಯನ್ನು ಧರಿಸುವುದು, ತಲೆ ಬೋಳಿಸುವುದು, ಕೂದಲುಗಳನ್ನು ಕಿತ್ತುಹಾಕುವುದು, ಕಾವಿಯ ವಸ್ತ್ರಗಳ ದ್ವಾರಾ ಬಹುವಿಧವೇಷಗಳನ್ನು ಧರಿಸುವುದು: ಉದರಪೋಷಣೆಗಾಗಿ ನಾನಾವಿಧವೇಷಗಳನ್ನು ಧರಿಸಿದ ಮೂಢನು (ಸತ್ಯವನ್ನು) ನೋಡಿದರೂ ನೋಡುವುದಿಲ್ಲ.

೫. ಯಾವನು ಭಗವದ್ಗೀತೆಯನ್ನು ಕಿಂಚಿತ್ತಾದರೂ ಓದಿದ್ದಾನೋ, ಗಂಗಾಜಲದ ಒಂದು ಬಿಂದುವಾದರೂ ಪಾನಮಾಡಿದ್ದಾನೋ, ಮುರಾರಿಯನ್ನು ಒಂದು ಸಲವಾದರೂ ಅರ್ಚಿಸಿದ್ದಾನೋ, ಮೃತ್ಯು ಅವನನ್ನು ಏನು ತಾನೇ ಮಾಡಬಲ್ಲದು?

ಅಂಗಂ ಗಲಿತಂ ಪಲಿತಂ ಮುಂಡಂ ದಶನವಿಹೀನಂ ಜಾತಂ ತುಂಡಮ್ ।
ವೃದ್ಧೋ ಯಾತಿ ಗೃಹೀತ್ವಾ ದಂಡಂ ತದಪಿ ನ ಮುಂಚತ್ಯಾಶಾಪಿಂಡಮ್ ॥೬॥

ಬಾಲಸ್ತಾವತ್ಕ್ರೀಡಾಸಕ್ತಸ್ತರುಣಸ್ತಾವತ್ ತರುಣೀಸಕ್ತಃ ।
ವೃದ್ಧಸ್ತಾವಚ್ಚಿಂತಾಮಗ್ನಃ ಪರೇ ಬ್ರಹ್ಮಣಿ ಕೋಽಪಿ ನ ಲಗ್ನಃ ॥ ೭ ॥

ಪುನರಪಿ ಜನನಂ ಪುನರಪಿ ಮರಣಂ ಪುನರಪಿ ಜನನೀಜಠರೇ ಶಯನಮ್ ।
ಇಹ ಸಂಸಾರೇ ಖಲು ದುಸ್ತಾರೇ ಕೃಪಯಾಽಪಾರೇ ಪಾಹಿ ಮುರಾರೇ ॥ ೮ ॥

ಪುನರಪಿ ರಜನೀ ಪುನರಪಿ ದಿವಸಃ ಪುನರಪಿ ಪಕ್ಷಃ ಪುನರಪಿ ಮಾಸಃ ।
ಪುನರಪ್ಯಯನಂ ಪುನರಪಿ ವರ್ಷಂ ತದಪಿ ನ ಮುಂಚತ್ಯಾಶಾಮರ್ಷಮ್ ॥೯॥

ವಯಸಿ ಗತೇ ಕಃ ಕಾಮವಿಕಾರಃ ಶುಷ್ಕೇ ನೀರೇ ಕಃ ಕಾಸಾರಃ ।
ನಷ್ಟೇ ದ್ರವ್ಯೇ ಕಃ ಪರಿವಾರೋ ಜ್ಞಾತೇ ತತ್ತ್ವೇ ಕಃ ಸಂಸಾರಃ ॥ ೧೦ ॥

ನಾರೀಸ್ತನಭರಣಾಭಿನಿವೇಶಂ ಮಿಥ್ಯಾಮಾಯಾಮೋಹಾವೇಶಮ್ ।
ಏತನ್ಮಾಂಸವಸಾದಿವಿಕಾರಂ ಮನಸಿ ವಿಚಾರಯ ವಾರಂವಾರಮ್ ॥ ೧೧ ॥

ಕಸ್ತ್ವಂ ಕೋಽಹಂ ಕುತಃ ಆಯಾತಃ ಕಾ ಮೇ ಜನನೀ ಕೋ ಮೇ ತಾತಃ ।
ಇತಿ ಪರಿಭಾವಯ ಸರ್ವಮಸಾರಂ ವಿಶ್ವಂ ತ್ಯಕ್ತ್ವಾ ಸ್ವಪ್ನವಿಕಾರಮ್ ॥ ೧೨ ॥

೬. ಅಂಗ ಜರ್ಜರಿತವಾಗಿದೆ, ತಲೆ ಹಣ್ಣಾಗಿದೆ, ಬಾಯಲ್ಲಿ ಹಲ್ಲುಗಳೆಲ್ಲ ಬಿದ್ದುಹೋಗಿವೆ; ವೃದ್ಧ ಊರುಗೋಲನ್ನು ಹಿಡಿದುಕೊಂಡು ತತ್ತರಿಸುವನು; ಆದರೂ ಆಸೆ ಇವನನ್ನು ಬಿಟ್ಟಿಲ್ಲ.

೭. ಬಾಲಕ ಯಾವಾಗಲೂ ಕ್ರೀಡೆಯಲ್ಲಿ ಆಸಕ್ತನಾಗಿರುವನು; ತರುಣ ಯಾವಾಗಲೂ ತರುಣಿಯಲ್ಲಿ ಆಸಕ್ತನಾಗಿರುವನು; ವೃದ್ಧ ಯಾವಾಗಲೂ ಚಿಂತೆಯಲ್ಲಿ ಮಗ್ನನಾಗಿರುವನು; ಆದರೆ ಯಾವನೂ ಪರಬ್ರಹ್ಮನಲ್ಲಿ ಅನುರಕ್ತನಾಗಿರುವುದಿಲ್ಲ.

೮. ಜನನ, ಮರಣ, ತಾಯಿಯ ಉದರದಲ್ಲಿ ವಾಸ–ಇವು ಪುನಃ ಪುನಃ ಬರುತ್ತಿರುತ್ತವೆ; ಹೇ ಮುರಾರಿ, ಕೃಪೆದೋರಿ ನನ್ನನ್ನು ದುಸ್ತರವಾದ ಮತ್ತು ಪಾರವಿಲ್ಲದ ಸಂಸಾರಸಾಗರದಿಂದ ರಕ್ಷಿಸು.

೯. ಹಗಲುರಾತ್ರಿಗಳು, ಪಕ್ಷಮಾಸಗಳು, ಅಯನವರ್ಷಗಳು ಪುನಃ ಪುನಃ ಬಂದು ಹೋಗುತ್ತಿರುತ್ತವೆ; ಆದರೂ ಯಾರೂ ಆಸೆಯ ಪ್ರೇರಣೆಯನ್ನು ಬಿಡುವುದಿಲ್ಲ.

೧೦. ವೃದ್ಧನಾದ ಮೇಲೆ ಕಾಮವಿಕಾರವೆಲ್ಲಿ? ನೀರೇ ಒಣಗಿಹೋದರೆ ಸರೋವರವೆಲ್ಲಿ? ದ್ರವ್ಯ ನಷ್ಟವಾದರೆ ನಂಟರಿಷ್ಟರೆಲ್ಲಿ? ತತ್ತ್ವವು ಗೊತ್ತಾದ ಮೇಲೆ ಸಂಸಾರವೆಲ್ಲಿ?

೧೧. ನಾರಿಯ ಸ್ತನದಲ್ಲಿರುವ ಕಾಮದೃಷ್ಟಿಯು ಮಿಥ್ಯೆಯ ಮೋಹಾವೇಶದಿಂದ ಉಂಟಾಗಿದೆ; ಈ ಸ್ತನ ಮಾಂಸಮೇದಸ್ಸುಗಳ ಒಂದು ವಿಕಾರ; ಇದನ್ನು ಮನಸ್ಸಿನಲ್ಲಿ ಪುನಃ ಪುನಃ ವಿಚಾರಮಾಡು.

೧೨. ನೀನು ಯಾರು? ನಾನು ಯಾರು? ನಾನು ಎಲ್ಲಿಂದ ಬಂದೆ? ನನ್ನ ತಂದೆ ಯಾರು? ನನ್ನ ತಾಯಿ ಯಾರು? ಈ ಪ್ರಕಾರ ವಿಚಾರಮಾಡಿ ಸ್ವಪ್ನದಂತೆ ವಿಕಾರರೂಪವಾದ ಜಗತ್ತನ್ನು ತ್ಯಜಿಸಿ ಇವೆಲ್ಲಾ ಅಸಾರವೆಂದು ಭಾವಿಸು.

ಗೇಯಂ ಗೀತಾನಾಮಸಹಸ್ರಂ ಧ್ಯೇಯಂ ಶ್ರೀಪತಿರೂಪಮಜಸ್ರಮ್ ।
ನೇಯಂ ಸಜ್ಜನಸಂಗೇ ಚಿತ್ತಂ ದೇಯಂ ದೀನಜನಾಯ ಚ ವಿತ್ತಮ್ ॥೧೩॥

ಯಾವಜ್ಜೀವೋ ನಿವಸತಿ ದೇಹೇ ಕುಶಲಂ ತಾವತ್ಪೃಚ್ಛತಿ ಗೇಹೇ ।
ಗತವತಿ ವಾಯೌ ದೇಹಾಪಾಯೇ ಭಾರ್ಯಾ ಬಿಭ್ಯತಿ ತಸ್ಮಿನ್ಕಾಯೇ ॥೧೪॥

ಸುಖತಃ ಕ್ರಿಯತೇ ರಾಮಾಭೋಗಃ ಪಶ್ಚಾದ್ಧಂತ ಶರೀರೇ ರೋಗಃ ।
ಯದ್ಯಪಿ ಲೋಕೇ ಮರಣಂ ಶರಣಂ ತದಪಿ ನ ಮುಂಚತಿ
ಪಾಪಾಚರಣಮ್ ॥ ೧೫ ॥

ರಥ್ಯಾಚರ್ಪಟವಿರಚಿತಕಂಥಃ ಪುಣ್ಯಾಪುಣ್ಯವಿವರ್ಜಿತಪಂಥಃ ।
ನಾಹಂ ನ ತ್ವಂ ನಾಯಂ ಲೋಕಸ್ತದಪಿ ಕಿಮರ್ಥಂ ಕ್ರಿಯತೇ
ಶೋಕಃ ॥ ೧೬ ॥

ಕುರುತೇ ಗಂಗಾಸಾಗರಗಮನಂ ವ್ರತಪರಿಪಾಲನಮಥವಾ ದಾನಮ್ ।
ಜ್ಞಾನವಿಹೀನಃ ಸರ್ವಮತೇನ ಮುಕ್ತಿಂ ನ ಭಜತಿ ಜನ್ಮಶತೇನ ॥ ೧೭ ॥

೧೩. ಗೀತೆ ಮತ್ತು ಸಹಸ್ರನಾಮಗಳನ್ನು ಹಾಡಬೇಕು, ಶ್ರೀಪತಿಯ ರೂಪವನ್ನು ನಿರಂತರ ಧ್ಯಾನಿಸಬೇಕು, ಸಜ್ಜನರ ಸಂಗದಲ್ಲಿ ಮನಸ್ಸನ್ನು ಇಡಬೇಕು ಮತ್ತು ದೀನರಿಗೆ ಹಣವನ್ನು ಕೊಡಬೇಕು.

೧೪. ಎಲ್ಲಿಯವರೆಗೆ ಜೀವ ದೇಹದಲ್ಲಿ ವಾಸಿಸುತ್ತಿರುವುದೋ ಅಲ್ಲಿಯವರೆಗೆ ಮನೆಯವರೆಲ್ಲಾ ಅವನ ಕುಶಲವನ್ನು ಕುರಿತು ವಿಚಾರಿಸುವರು; ಪ್ರಾಣವಾಯು ಹೊರಗೆ ಬಂದು ದೇಹವನ್ನು ಬಿಟ್ಟ ಮೇಲೆ ಅವನ ಹೆಂಡತಿ ಕೂಡಾ ಆ ದೇಹವನ್ನು ನೋಡಿ ಭಯಪಡುವಳು.

೧೫. ಸುಖಕ್ಕಾಗಿ ಪುರುಷನು ಸ್ತ್ರೀಯೊಡನೆ ವಿಹರಿಸುವನು. ಅನಂತರ ಅಯ್ಯೋ, ಶರೀರದಲ್ಲಿ ರೋಗವುಂಟಾಗುವುದು; ಜಗತ್ತಿನಲ್ಲಿ ಎಲ್ಲರಿಗೂ ಮೃತ್ಯುವೇ ಚರಮಗತಿಯಾಗಿದ್ದರೂ, ಪಾಪಕಾರ್ಯವನ್ನು ಜನರು ತ್ಯಜಿಸುವುದಿಲ್ಲ.

೧೬. ದಾರಿಯಲ್ಲಿ ಸಿಕ್ಕಿದ ಚೂರು ಬಟ್ಟೆಯಿಂದ ನೀನು ವಸನವನ್ನು ಮಾಡಿಕೊಂಡಿರುವೆ; ನೀನು ಪುಣ್ಯಾಪುಣ್ಯಗಳನ್ನು ತ್ಯಜಿಸಿರುವೆ; ನಾನಿಲ್ಲ, ನೀನಿಲ್ಲ, ಪ್ರಪಂಚವೂ ಇಲ್ಲ (ಎಂದು ಚಿಂತಿಸುವೆ); ಹೀಗಿದ್ದರೂ ಏಕೆ ಶೋಕಪಡುತ್ತೀಯೆ?

೧೭. ಗಂಗಾಸಾಗರಕ್ಕೆ ಯಾತ್ರೆ ಹೋಗಲಿ, ಎಷ್ಟೇ ವ್ರತಗಳನ್ನು ಪರಿಪಾಲಿಸಲಿ, ದಾನಧರ್ಮಗಳನ್ನು ಮಾಡಲಿ, ಯಾವ ಮತವೇ ಆಗಲಿ, ಜ್ಞಾನವಿಲ್ಲದವನಿಗೆ ನೂರು ಜನ್ಮಗಳು ಕಳೆದರೂ ಮುಕ್ತಿಯಿಲ್ಲ.

# ಲಕ್ಷ್ಮೀನೃಸಿಂಹಸ್ತೋತ್ರಮ್

ಶ್ರೀಮತ್ಪಯೋನಿಧಿನಿಕೇತನ ಚಕ್ರಪಾಣೇ
ಭೋಗೀಂದ್ರಭೋಗಮಣಿರಂಜಿತಪುಣ್ಯಮೂರ್ತೇ ।
ಯೋಗೀಶ ಶಾಶ್ವತ ಶರಣ್ಯ ಭವಾಬ್ಧಿಪೋತ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೧ ॥

ಬ್ರಹ್ಮೇಂದ್ರರುದ್ರಮರುದರ್ಕಕಿರೀಟಕೋಟಿ-
ಸಂಘಟ್ಟಿತಾಂಘ್ರಿಕಮಲಾಮಲಕಾಂತಿಕಾಂತ ।
ಲಕ್ಷ್ಮೀಲಸತ್ಕುಚಸರೋರುಹರಾಜಹಂಸ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೨ ॥

ಸಂಸಾರದಾವದಹನಾತುರಭೀಕರೋರು-
ಜ್ವಾಲಾವಲೀಭಿರತಿದಗ್ಧತನೂರುಹಸ್ಯ ।
ತ್ವತ್ಪಾದಪದ್ಮಸರಸೀರುಹಮಾಗತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೩ ॥

ಸಂಸಾರಜಾಲಪತಿತಸ್ಯ ಜಗನ್ನಿವಾಸ
ಸರ್ವೇಂದ್ರಿಯಾರ್ಥಬಡಿಶಾಗ್ರಝಷೋಪಮಸ್ಯ ।
ಪ್ರೋತ್ಕಂಪಿತಪ್ರಚುರತಾಲುಕಮಸ್ತಕಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೪ ॥

ಸಂಸಾರಕೂಪಮತಿಘೋರಮಗಾಧಮೂಲಂ
ಸಂಪ್ರಾಪ್ಯ ದುಃಖಶತಸರ್ಪಸಮಾಕುಲಸ್ಯ ।
ದೀನಸ್ಯ ದೇವ ಕೃಪಯಾ ಪದಮಾಗತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೫ ॥

# ಲಕ್ಷ್ಮೀನೃಸಿಂಹಸ್ತೋತ್ರ

೧. ಹೇ ಕ್ಷೀರಸಾಗರವಾಸಿ, ಚಕ್ರಪಾಣಿ, ಆದಿಶೇಷನ ಫಣಾಮಣಿಗಳಿಂದ ರಂಜಿತನಾದ ಪುಣ್ಯಮೂರ್ತಿ, ಯೋಗೀಶ, ಶಾಶ್ವತ, ಶರಣ್ಯ, ಸಂಸಾರ ಸಾಗರವನ್ನು ದಾಟಲು ನಾವೆಯಂತಿರುವವನೇ, ಲಕ್ಷ್ಮೀನೃಸಿಂಹ, ನನಗೆ ನಿನ್ನ ಕರಗಳ ಆಸರೆಯನ್ನು ನೀಡು.

೨. ಬ್ರಹ್ಮ, ಇಂದ್ರ, ರುದ್ರ, ವಾಯು, ಸೂರ್ಯ ಮೊದಲಾದ ದೇವತೆಗಳ ಕಿರೀಟಗಳ ತುದಿಗಳು (ಅವರು ಬಗ್ಗಿ ನಮಸ್ಕರಿಸುತ್ತಿರುವಾಗ) ತಾಗಿ ನಾಚುವಂತಹ ಅಮಲಕಾಂತಿಯುಕ್ತವಾದ ಚರಣಕಮಲಗಳುಳ್ಳವನೇ, ಶ್ರೀಲಕ್ಷ್ಮೀದೇವಿಯ ಉರಸರೋಜದಲ್ಲಿ ನಲಿಯುವ ರಾಜಹಂಸನೇ, ಹೇ ಲಕ್ಷ್ಮೀನೃಸಿಂಹ, ನನಗೆ ನಿನ್ನ ಕರಗಳ ಆಸರೆಯನ್ನು ನೀಡು.

೩. ಸಂಸಾರವೆಂಬ ಕಾಡ್ಗಿಚ್ಚಿನ ಭಯಂಕರವಾದ ಜ್ವಾಲೆಗಳಿಂದ ಬೆಂದು ನೊಂದವನಾಗಿ ತಂಪಾದ ಸರಸ್ಸಿನಂತಿರುವ ನಿನ್ನ ಚರಣಗಳಡಿಗೆ ಶರಣು ಹೋಗಲು ಬಂದಿರುವೆ; ಹೇ ಲಕ್ಷ್ಮೀನೃಸಿಂಹ, ನನಗೆ ನಿನ್ನ ಕರಗಳ ಆಸರೆಯನ್ನು ನೀಡು.

೪. ಹೇ ಜಗನ್ನಿವಾಸ, ಇಂದ್ರಿಯವಿಷಯಗಳೆಂಬ ಗಾಳಕ್ಕೆ ಸಿಕ್ಕಿದ ಮೀನಿನಂತೆ ಸಂಸಾರದ ಬಲೆಯಲ್ಲಿ ಬಿದ್ದು ತೊಳಲುತ್ತಿರುವ ನನಗೆ ಹೇ ಲಕ್ಷ್ಮೀನೃಸಿಂಹ, ನನಗೆ ನಿನ್ನ ಕರಗಳ ಆಸರೆಯನ್ನು ನೀಡು.

೫. ಅತಿ ಘೋರವೂ ಅತ್ಯಂತ ಅಗಾಧವೂ ಆದ ಸಂಸಾರವೆಂಬ ಬಾವಿಯಲ್ಲಿ ಬಿದ್ದು ನೂರಾರು ದುಃಖಗಳೆಂಬ ಸರ್ಪಗಳಿಂದ ಕಚ್ಚಿಸಿಕೊಂಡು, ದೀನನಾಗಿ ನಿನ್ನಡಿಗೆ ಬಂದಿರುವೆ; ನನ್ನ ಮೇಲೆ ಕೃಪೆಯಿಟ್ಟು ಹೇ ದೇವ, ಲಕ್ಷ್ಮೀನೃಸಿಂಹ, ನನಗೆ ನಿನ್ನ ಕರಗಳ ಆಸರೆಯನ್ನು ನೀಡು.

ಸಂಸಾರಭೀಕರಕರೀಂದ್ರಕರಾಭಿಘಾತ-
ನಿಷ್ಪಿಷ್ಟಮರ್ಮವಪುಷಃ ಸಕಲಾರ್ತಿನಾಶ ।
ಪ್ರಾಣಪ್ರಯಾಣಭವಭೀತಿಸಮಾಕುಲಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೬ ॥

ಸಂಸಾರಸರ್ಪಘನವಕ್ತ್ರಭಯೋಗ್ರತೀವ್ರ-
ದಂಷ್ಟ್ರಾಕರಾಲವಿಷದಗ್ಧವಿನಷ್ಟಮೂರ್ತೇಃ ।
ನಾಗಾರಿವಾಹನ ಸುಧಾಬ್ಧಿನಿವಾಸ ಶೌರೇ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೭ ॥

ಸಂಸಾರವೃಕ್ಷಮಘಬೀಜಮನಂತಕರ್ಮ-
ಶಾಖಾಶತಂ ಕರಣಪತ್ರಮನಂಗಪುಷ್ಪಮ್ ।
ಆರುಹ್ಯ ದುಃಖಫಲಿತಂ ಪತತೋ ದಯಾಲೋ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೮ ॥

ಸಂಸಾರಸಾಗರವಿಶಾಲಕರಾಲಕಾಲ-
ನಕ್ರಗ್ರಹಗ್ರಸನನಿಗ್ರಹವಿಗ್ರಹಸ್ಯ ।
ವ್ಯಗ್ರಸ್ಯ ರಾಗನಿಚಯೋರ್ಮಿನಿಪೀಡಿತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೯ ॥

ಸಂಸಾರಸಾಗರನಿಮಜ್ಜನಮುಹ್ಯಮಾನಂ
ದೀನಂ ವಿಲೋಕಯ ವಿಭೋ ಕರುಣಾನಿಧೇ ಮಾಮ್ ।
ಪ್ರಹ್ಲಾದಖೇದಪರಿಹಾರಪರಾವತಾರ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೧೦ ॥

## ಲಕ್ಷ್ಮೀನೃಸಿಂಹಸ್ತೋತ್ರ

೬. ಸಂಸಾರವೆಂಬ ಭಯಂಕರ ಸಲಗನ ಸೊಂಡಿಲಿನ ಹೊಡೆತಕ್ಕೆ ಸಿಕ್ಕಿ, ಮರ್ಮಸ್ಥಾನಗಳಲ್ಲಿ ಉಂಟಾದ ಗಾಯಗಳಿಂದ ಅತಿನೊಂದು, ಜನ್ಮ ಮೃತ್ಯುಗಳ ಸಂಸಾರಭಯದಿಂದ ಕಂಗೆಟ್ಟಿರುವ ನನಗೆ, ಸಕಲದುಃಖ ಗಳನ್ನು ನಾಶಮಾಡುವವನೇ, ಹೇ ಲಕ್ಷ್ಮೀನೃಸಿಂಹ, ನಿನ್ನ ಕರಗಳ ಆಸರೆಯನ್ನು ನೀಡು.

೭. ಸಂಸಾರಸರ್ಪದ ಭೀಕರವದನದಲ್ಲಿರುವ ಭಯಂಕರವೂ ತೀವ್ರವೂ ಆದ ಕರಾಳ ದಂತಗಳ ವಿಷದಿಂದ ದಗ್ಧನಾಗಿ ವಿನಷ್ಟಕಾಯನಾದ ನನಗೆ ಹೇ ಗರುಡವಾಹನ, ಕ್ಷೀರಸಾಗರಶಯನ, ಹೇ ಲಕ್ಷ್ಮೀನೃಸಿಂಹ, ನಿನ್ನ ಕರಗಳ ಆಸರೆಯನ್ನು ನೀಡು.

೮. ಪಾಪಬೀಜದಿಂದ ಜನಿಸಿ, ಎಣೆಯಿಲ್ಲದ ಕರ್ಮಗಳೇ ರೆಂಬೆಗಳಾಗಿ, ಇಂದ್ರಿಯಗಳೇ ಎಲೆಗಳಾಗಿ, ಕಾಮಪ್ರವೃತ್ತಿಯೇ ಹೂವಾಗಿ, ದುಃಖವೇ ಫಲವಾಗಿರುವ ಈ ಸಂಸಾರವೃಕ್ಷವನ್ನೇರಿ ಕೆಳಗೆ ಬೀಳುತ್ತಿರುವ ನನಗೆ ದಯಾಳುವಾದ ಹೇ ಲಕ್ಷ್ಮೀನೃಸಿಂಹ, ನಿನ್ನ ಕರಗಳ ಆಸರೆಯನ್ನು ನೀಡು.

೯. ಈ ಸಂಸಾರವೆಂಬ ವಿಶಾಲವಾದ ಸಾಗರದಲ್ಲಿ ಬಿದ್ದು, ಘೋರ ಮತ್ತು ಕ್ರೂರವಾದ ಮೀನುಮೊಸಳೆಗಳಿಂದ ನುಂಗಲ್ಪಟ್ಟ ಶರೀರವುಳ್ಳವನಾಗಿ, ವಿಷಯಸಮೂಹವೆಂಬ ಅಲೆಗಳ ಹೊಡೆತದಿಂದ ಪೀಡಿತನಾಗಿ, ದಿಗ್ಭ್ರಮೆ ಹೊಂದಿರುವ ನನಗೆ ಹೇ ಲಕ್ಷ್ಮೀನೃಸಿಂಹ, ನಿನ್ನ ಕರಗಳ ಆಸರೆಯನ್ನು ನೀಡು.

೧೦. ಭಕ್ತ ಪ್ರಹ್ಲಾದನ ದುಃಖಪರಿಹಾರಕ್ಕಾಗಿ ಶ್ರೇಷ್ಠ ಅವತಾರವನ್ನು ತಳೆದ ಹೇ ಸರ್ವವ್ಯಾಪಿ, ಕರುಣಾನಿಧಿ, ಲಕ್ಷ್ಮೀನೃಸಿಂಹ, ಸಂಸಾರಸಾಗರದಲ್ಲಿ ಮುಳುಗಿ ದಿಗ್ಭ್ರಮೆಯಿಂದ ದೀನನಾದ ನನ್ನೆಡಗೆ ನಿನ್ನ ಕೃಪಾದೃಷ್ಟಿಯನ್ನು ಬೀರಿ ನನಗೆ ನಿನ್ನ ಕರಗಳ ಆಸರೆಯನ್ನು ನೀಡು.

ಸಂಸಾರಘೋರಗಹನೇ ಚರತೋ ಮುರಾರೇ
ಮಾರೋಗ್ರಭೀಕರಮೃಗಪ್ರಚುರಾರ್ದಿತಸ್ಯ ।
ಆರ್ತಸ್ಯ ಮತ್ಸರನಿದಾಘಸುದುಃಖಿತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೧೧ ॥

ಬದ್ಧ್ವಾ ಗಲೇ ಯಮಭಟಾ ಬಹುತರ್ಜಯಂತಃ
ಕರ್ಷಂತಿ ಯತ್ರ ಭವಪಾಶಶತೈರ್ಯುತಂ ಮಾಮ್ ।
ಏಕಾಕಿನಂ ಪರವಶಂ ಚಕಿತಂ ದಯಾಲೋ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೧೨ ॥

ಲಕ್ಷ್ಮೀಪತೇ ಕಮಲನಾಭ ಸುರೇಶ ವಿಷ್ಣೋ
ಯಜ್ಞೇಶ ಯಜ್ಞ ಮಧುಸೂದನ ವಿಶ್ವರೂಪ ।
ಬ್ರಹ್ಮಣ್ಯ ಕೇಶವ ಜನಾರ್ದನ ವಾಸುದೇವ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೧೩ ॥

ಏಕೇನ ಚಕ್ರಮಪರೇಣ ಕರೇಣ ಶಂಖ-
ಮನ್ಯೇನ ಸಿಂಧುತನಯಾಮವಲಂಬ್ಯ ತಿಷ್ಠನ್ ।
ವಾಮೇ ಕರೇಣ ವರದಾಭಯಪದ್ಮಚಿಹ್ನಂ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೧೪ ॥

ಅಂಧಸ್ಯ ಮೇ ಹೃತವಿವೇಕಮಹಾಧನಸ್ಯ
ಚೋರೈಃ ಪ್ರಭೋ ಬಲಿಭಿರಿಂದ್ರಿಯನಾಮಧೇಯೈಃ ।
ಮೋಹಾಂಧಕೂಪಕುಹರೇ ವಿನಿಪಾತಿತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೧೫ ॥

೧೧. ಸಂಸಾರವೆಂಬ ಘೋರಾರಣ್ಯದಲ್ಲಿ ಸಂಚರಿಸುತ್ತ, ಭಯಂಕರವಾದ ಕಾಮಮೃಗದ ಹಿಂಸೆಯಿಂದ ಕಾಡಲ್ಪಟ್ಟು, ಮತ್ಸರವೆಂಬ ಬಿಸಿಲ ಬೇಗೆಯಲ್ಲಿ ಬೆಂದು ಬಹು ಬಳಲಿರುವ ನನಗೆ ಹೇ ಮುರಾರಿ, ಲಕ್ಷ್ಮೀ ನೃಸಿಂಹ, ನಿನ್ನ ಕರಗಳ ಆಸರೆಯನ್ನು ನೀಡು.

೧೨. ಆಗಲೇ ನೂರಾರು ಭವಪಾಶಗಳಲ್ಲಿ ಸಿಲುಕಿ ಪರವಶನಾಗಿ ದಿಕ್ಕೆಟ್ಟು ಏಕಾಕಿಯಾದ ನನ್ನನ್ನು ಯಮಭಟರು ಕಂಠಪಾಶದಿಂದ ಹೆದರಿಸುತ್ತ ಎಳೆದಾಡುತ್ತಿರುವರು; ಹೇ ದಯಾಳುವಾದ ಲಕ್ಷ್ಮೀನೃಸಿಂಹ, ನಿನ್ನ ಕರಗಳ ಆಸರೆಯನ್ನು ನನಗೆ ನೀಡು.

೧೩. ಹೇ ಲಕ್ಷ್ಮೀಪತಿ, ಪದ್ಮನಾಭ, ಸುರೇಶ, ವಿಷ್ಣು, ಯಜ್ಞೇಶ, ಯಜ್ಞ ಸ್ವರೂಪ, ಮಧುಸೂದನ, ವಿಶ್ವರೂಪ, ಬ್ರಹ್ಮಣ್ಯ, ಕೇಶವ, ಜನಾ ರ್ದನ, ವಾಸುದೇವ, ಲಕ್ಷ್ಮೀನೃಸಿಂಹ ನನಗೆ ನಿನ್ನ ಕರಗಳ ಆಸರೆ ಯನ್ನು ನೀಡು.

೧೪. ಒಂದು ಕೈಯ್ಯಲ್ಲಿ ಚಕ್ರಾಯುಧವನ್ನೂ, ಮತ್ತೊಂದು ಕೈಯ್ಯಲ್ಲಿ ಶಂಖ ವನ್ನೂ ಹಿಡಿದು, ಇನ್ನೊಂದರಿಂದ ಕ್ಷೀರಸಾಗರಕನ್ನಿಕೆಯಾದ ಶ್ರೀ ಮಹಾಲಕ್ಷ್ಮಿಯನ್ನು ಆಶ್ರಯಿಸಿ, ಉಳಿದ ವಾಮಹಸ್ತದಿಂದ ವರಾ ಭಯಪದ್ಮಮುದ್ರೆಯನ್ನು ಸೂಚಿಸುತ್ತಿರುವ ಹೇ ಲಕ್ಷ್ಮೀನೃಸಿಂಹ, ನಿನ್ನ ಕರಗಳ ಆಸರೆಯನ್ನು ನನಗೆ ನೀಡು.

೧೫. ಮಹಾಬಲಿಷ್ಠರಾದ ಇಂದ್ರಿಯಗಳೆಂಬ ಚೋರರು ನನ್ನ ವಿವೇಕವೆಂಬ ಮಹಾಧನವನ್ನು ಅಪಹರಿಸಿರುವರು; ಕುರುಡನಾಗಿ ಮೋಹವೆಂಬ ಆಳ ವಾದ ಅಂಧಕೂಪದಲ್ಲಿ ಬಿದ್ದಿರುವ ನನಗೆ, ಹೇ ಪ್ರಭು, ಹೇ ಲಕ್ಷ್ಮೀ ನೃಸಿಂಹ, ನಿನ್ನ ಕರಗಳ ಆಸರೆಯನ್ನು ನೀಡು.

ಪ್ರಹ್ಲಾದನಾರದಪರಾಶರಪುಂಡರೀಕ-
ವ್ಯಾಸಾದಿಭಾಗವತಪುಂಗವಹೃನ್ನಿವಾಸ ।
ಭಕ್ತಾನುರಕ್ತಪರಿಪಾಲನಪಾರಿಜಾತ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೧೬ ॥

ಲಕ್ಷ್ಮೀನೃಸಿಂಹಚರಣಾಬ್ಜಮಧುವ್ರತೇನ
ಸ್ತೋತ್ರಂ ಕೃತಂ ಶುಭಕರಂ ಭುವಿ ಶಂಕರೇಣ ।
ಯೇ ತತ್ಪಠಂತಿ ಮನುಜಾ ಹರಿಭಕ್ತಿಯುಕ್ತಾ-
ಸ್ತೇ ಯಾಂತಿ ತತ್ಪದಸರೋಜಮಖಂಡರೂಪಮ್ ॥ ೧೭ ॥

೧೬. ಪ್ರಹ್ಲಾದ, ನಾರದ, ಪರಾಶರ, ಪುಂಡರೀಕ, ವ್ಯಾಸ ಮೊದಲಾದ ಭಾಗವತೋತ್ತಮರ ಹೃದಯದಲ್ಲಿ ವಾಸಿಸುವವನೇ, ಅನುರಾಗಯುಕ್ತ ರಾದ ಭಕ್ತರನ್ನು ಕಾಪಾಡುವುದರಲ್ಲಿ ಕಲ್ಪವೃಕ್ಷದಂತೆ ಇರುವವನೇ, ಹೇ ಲಕ್ಷ್ಮೀನೃಸಿಂಹ, ನಿನ್ನ ಕರಗಳ ಆಸರೆಯನ್ನು ನನಗೆ ನೀಡು.

೧೭. ಶ್ರೀಲಕ್ಷ್ಮೀನೃಸಿಂಹನ ಚರಣಕಮಲಗಳ ಜೇನನ್ನು ಸವಿಯುವ ಭ್ರಮರ ದಂತಿರುವ ಶಂಕರನಿಂದ ಈ ಶುಭಕರವಾದ ಸ್ತೋತ್ರ ರಚಿಸಲ್ಪಟ್ಟಿದೆ; ಈ ಜಗತ್ತಿನಲ್ಲಿ ಯಾರು ಇದನ್ನು ಹರಿಭಕ್ತಿಯಿಂದ ಪಠಿಸುತ್ತಾರೋ ಅವರು ಅಖಂಡರೂಪವಾದ ಆ ಪರಮಾತ್ಮನ ಪಾದಪದ್ಮಗಳನ್ನು ಸೇರುತ್ತಾರೆ.

# ಮುಕುಂದಮಾಲಾ

ಘುಷ್ಯತೇ ಯಸ್ಯ ನಗರೇ ರಂಗಯಾತ್ರಾ ದಿನೇದಿನೇ ।
ತಮಹಂ ಶಿರಸಾ ವಂದೇ ರಾಜಾನಾಂ ಕುಲಶೇಖರಮ್ ॥

ಶ್ರೀವಲ್ಲಭೇತಿ ವರದೇತಿ ದಯಾಪರೇತಿ
ಭಕ್ತಪ್ರಿಯೇತಿ ಭವಲುಂಠನಕೋವಿದೇತಿ ।
ನಾಥೇತಿ ನಾಗಶಯನೇತಿ ಜಗನ್ನಿವಾಸೇ-
ತ್ಯಾಲಾಪಿನಂ ಪ್ರತಿಪದಂ ಕುರು ಮಾಂ ಮುಕುಂದ ॥ ೧ ॥

ಜಯತು ಜಯತು ದೇವೋ ದೇವಕೀನಂದನೋಽಯಂ
ಜಯತು ಜಯತು ಕೃಷ್ಣೋ ವೃಷ್ಣಿವಂಶಪ್ರದೀಪಃ ।
ಜಯತು ಜಯತು ಮೇಘಶ್ಯಾಮಲಃ ಕೋಮಲಾಂಗೋ
ಜಯತು ಜಯತು ಪೃಥ್ವೀಭಾರನಾಶೋ ಮುಕುಂದಃ ॥ ೨ ॥

ಮುಕುಂದ ಮೂರ್ಧ್ನಾ ಪ್ರಣಿಪತ್ಯ ಯಾಚೇ
ಭವಂತಮೇಕಾಂತಮಿಯಂತಮರ್ಥಮ್ ।
ಅವಿಸ್ಮೃತಿಸ್ತ್ವಚ್ಚರಣಾರವಿಂದೇ
ಭವೇಭವೇ ಮೇಽಸ್ತು ಭವತ್ಪ್ರಸಾದಾತ್ ॥ ೩ ॥

ನಾಹಂ ವಂದೇ ತವಚರಣಯೋರ್ದ್ವಂದ್ವಮದ್ವಂದ್ವಹೇತೋಃ
ಕುಂಭೀಪಾಕಂ ಗುರುಮಪಿ ಹರೇ ನಾರಕಂ ನಾಪನೇತುಮ್ ।
ರಮ್ಯಾ ರಾಮಾ ಮೃದುತನುಲತಾ ನಂದನೇ ನಾಪಿ ರಂತುಂ
ಭಾವೇಭಾವೇ ಹೃದಯಭವನೇ ಭಾವಯೇಯಂ ಭವಂತಮ್ ॥ ೪ ॥

# ಮುಕುಂದಮಾಲೆ

ಯಾವ ಮಹನೀಯನ ದಿವ್ಯನಗರದಲ್ಲಿ ಶ್ರೀರಂಗಕ್ಷೇತ್ರದ ಯಾತ್ರೆಯು ಪ್ರತಿದಿನವೂ ಘೋಷಿಸಲ್ಪಡುವುದೋ ಅಂತಹ ಕುಲಶೇಖರರಾಜನಿಗೆ ನಾನು ಶಿರಸಾ ವಂದಿಸುತ್ತೇನೆ.

೧. ಹೇ ಮುಕುಂದ, ನೀನು ಶ್ರೀವಲ್ಲಭನೆಂದೂ, ವರದನೆಂದೂ, ದಯಾಪರನೆಂದೂ, ಭಕ್ತಪ್ರಿಯನೆಂದೂ, ಸಂಸಾರನಾಶಮಾಡುವುದರಲ್ಲಿ ನಿಪುಣನೆಂದೂ, ನಾಥನೆಂದೂ, ನಾಗಶಯನನೆಂದೂ, ಜಗನ್ನಿವಾಸನೆಂದೂ, ನಾನು ಪ್ರತಿಕ್ಷಣವೂ ಕೊಂಡಾಡುವ ಹಾಗೆ ಮಾಡು.

೨. ದೇವಕೀನಂದನನಾದ ಈ ದೇವನಿಗೆ ಜಯವಾಗಲಿ, ವೃಷ್ಣಿವಂಶಪ್ರದೀಪನಾದ ಶ್ರೀಕೃಷ್ಣನಿಗೆ ಜಯವಾಗಲಿ, ಮೇಘದಂತೆ ಶ್ಯಾಮಲವರ್ಣನೂ ಕೋಮಲಾಂಗನೂ ಆದ (ನನ್ನ ಸ್ವಾಮಿಗೆ) ಜಯವಾಗಲಿ; ಭೂಭಾರವನ್ನು ಪರಿಹರಿಸುವವನಾದ ಮುಕುಂದನಿಗೆ ಜಯವಾಗಲಿ.

೩. ಹೇ ಮುಕುಂದ, ನಿನಗೆ ತಲೆಬಾಗಿ ನಮಸ್ಕರಿಸಿ, ಇಷ್ಟೊಂದನ್ನು ಏಕಾಂತವಾಗಿ ಪ್ರಾರ್ಥಿಸುತ್ತೇನೆ: ನಿನ್ನ ಅನುಗ್ರಹದಿಂದ ನನಗೆ ಜನ್ಮಜನ್ಮದಲ್ಲಿಯೂ ನಿನ್ನ ಚರಣಾರವಿಂದಗಳ ಮರೆವು ಇರದಂತೆ ಆಗಲಿ.

೪. ಹೇ ಹರಿ, (ಸುಖದುಃಖಾದಿ) ದ್ವಂದ್ವರಹಿತವಾದ ಸ್ಥಿತಿಯನ್ನು ಪಡೆಯಬೇಕೆಂಬ ಕಾರಣದಿಂದ ನಿನ್ನ ಚರಣಯುಗಲವನ್ನು ವಂದಿಸುತ್ತಿಲ್ಲ; ಘೋರವಾದ ಕುಂಭೀಪಾಕವೆಂಬ ನರಕವನ್ನು ತಪ್ಪಿಸಿಕೊಳ್ಳಬೇಕೆಂಬ ಕಾರಣದಿಂದಲೂ ಅಲ್ಲ; ರಮಣೀಯರಾದ ಸುಂದರಿಯರ ಕೋಮಲವಾದ ಶರೀರಲತೆಯ ನಂದನೋದ್ಯಾನದಲ್ಲಿ ಕ್ರೀಡಿಸುವುದಕ್ಕಾಗಿಯೂ ಅಲ್ಲ; ಆದರೆ ಹೃದಯಮಂದಿರದ ಪ್ರತಿಯೊಂದು ಭಾವದಲ್ಲಿಯೂ ನಿನ್ನನ್ನು ಧ್ಯಾನಮಾಡಬೇಕೆಂಬ ಬಯಕೆಯಿಂದ (ನಿನ್ನನ್ನು ವಂದಿಸುತ್ತೇನೆ).

ನಾಸ್ಥಾ ಧರ್ಮೇ ನ ವಸುನಿಚಯೇ ನೈವ ಕಾಮೋಪಭೋಗೇ
ಯದ್ಯದ್ಭವ್ಯಂ ಭವತು ಭಗವನ್ ಪೂರ್ವಕರ್ಮಾನುರೂಪಮ್ ।
ಏತತ್ಪ್ರಾರ್ಥ್ಯಂ ಮಮ ಬಹುಮತಂ ಜನ್ಮಜನ್ಮಾಂತರೇಽಪಿ
ತ್ವತ್ಪಾದಾಂಭೋರುಹಯುಗಗತಾ ನಿಶ್ಚಲಾ ಭಕ್ತಿರಸ್ತು ॥ ೫ ॥

ದಿವಿ ವಾ ಭುವಿ ವಾ ಮಮಾಸ್ತು ವಾಸೋ
ನರಕೇ ವಾ ನರಕಾಂತಕ ಪ್ರಕಾಮಮ್ ।
ಅವಧೀರಿತಶಾರದಾರವಿಂದೌ
ಚರಣೌ ತೇ ಮರಣೇಽಪಿ ಚಿಂತಯಾಮಿ ॥ ೬ ॥

ಕೃಷ್ಣ ತ್ವದೀಯಪದಪಂಕಜಪಂಜರಾಂತಃ
ಅದ್ಯೈವ ಮೇ ವಿಶತು ಮಾನಸರಾಜಹಂಸಃ ।
ಪ್ರಾಣಪ್ರಯಾಣಸಮಯೇ ಕಫವಾತಪಿತ್ತೈಃ
ಕಂಠಾವರೋಧನವಿಧೌ ಸ್ಮರಣಂ ಕುತಸ್ತೇ ॥ ೭ ॥

ಚಿಂತಯಾಮಿ ಹರಿಮೇವ ಸಂತತಂ
ಮಂದಮಂದಹಸಿತಾನನಾಂಬುಜಮ್ ।
ನಂದಗೋಪತನಯಂ ಪರಾತ್ಪರಂ
ನಾರದಾದಿಮುನಿಬೃಂದವಂದಿತಮ್ ॥ ೮ ॥

ಕರಚರಣಸರೋಜೇ ಕಾಂತಿಮನ್ನೇತ್ರಮೀನೇ
ಶ್ರಮಮುಷಿ ಭುಜವೀಚಿವ್ಯಾಕುಲೇಽಗಾಧಮಾರ್ಗೇ ।
ಹರಿಸರಸಿ ವಿಗಾಹ್ಯಾಪೀಯ ತೇಜೋಜಲೌಘಂ
ಭವಮರುಪರಿಖಿನ್ನಃ ಖೇದಮದ್ಯ ತ್ಯಜಾಮಿ ॥ ೯ ॥

೫. ಹೇ ಭಗವಂತನೇ, ನನಗೆ ಧರ್ಮದಲ್ಲಾಗಲೀ, ದ್ರವ್ಯಸಂಚಯದಲ್ಲಾಗಲೀ, ವಿಷಯಸುಖಗಳ ಭೋಗದಲ್ಲಾಗಲೀ ಆಸಕ್ತಿಯಿಲ್ಲ; ಪೂರ್ವಕರ್ಮಾನುಸಾರವಾಗಿ ಯಾವುದು ಹೇಗೆ ನಡೆಯಬೇಕೋ ಅದು ಹಾಗೆಯೇ ನಡೆಯಲಿ; ಆದರೆ ನಾನು ಅತಿಮುಖ್ಯವೆಂದು ಭಾವಿಸಿರುವ ಇದೊಂದು ಪ್ರಾರ್ಥನೆಯುಂಟು: ಈ ಜನ್ಮದಲ್ಲಿಯೂ ಮತ್ತು ಮುಂದೆ ಬರಬಹುದಾದ ಇತರ ಜನ್ಮಗಳಲ್ಲಿಯೂ ಕೂಡ ನಿನ್ನ ಅಡಿದಾವರೆಗಳ ಭಕ್ತಿಯು ನಿಶ್ಚಲವಾಗಿರಲಿ.

೬. ಹೇ ನರಕಾಂತಕ, ನನ್ನ ವಸತಿಯು ಸ್ವರ್ಗದಲ್ಲಿಯೋ, ಭೂಮಿಯಲ್ಲಿಯೋ, ನರಕದಲ್ಲಿಯೋ ನಿನ್ನ ಇಷ್ಟಬಂದಂತೆ ಆಗಲಿ; ಆದರೆ ಶರತ್ಕಾಲದ ಕಮಲದ ಕಾಂತಿಯನ್ನು ಮೀರಿದ ನಿನ್ನ ಚರಣಗಳನ್ನು ಮರಣಕಾಲದಲ್ಲಿಯೂ ಕೂಡ ಚಿಂತಿಸಲು ಇಚ್ಛಿಸುತ್ತೇನೆ.

೭. ಹೇ ಕೃಷ್ಣ, ನನ್ನ ಮನಸ್ಸೆಂಬ ರಾಜಹಂಸವು ನಿನ್ನ ಪಾದಕಮಲಗಳೆಂಬ ಪಂಜರದಲ್ಲಿ ಈಗಲೇ ಸೇರಿಕೊಳ್ಳಲಿ; (ಏಕೆಂದರೆ) ಪ್ರಾಣೋತ್ಕ್ರಮಣ ಕಾಲದಲ್ಲಿ ಕಫವಾತಪಿತ್ತಗಳಿಂದ ಕಂಠವು ಕಟ್ಟಿರುವಾಗ ನಿನ್ನ ಸ್ಮರಣೆ ಹೇಗೆ ಸಾಧ್ಯವಾದೀತು?

೮. ಮಂದಹಾಸದಿಂದ ಕೂಡಿದ ವದನಾರವಿಂದವುಳ್ಳ, ನಾರದಾದಿಮುನಿಗಳಿಂದ ವಂದಿಸಲ್ಪಡುವ, ನಂದಗೋಪನ ಮಗನಾದ ಪರಮೇಶ್ವರನಾದ ಶ್ರೀಹರಿಯನ್ನೇ ಧ್ಯಾನಿಸುತ್ತೇನೆ.

೯. ಸಂಸಾರವೆಂಬ ಮರುಭೂಮಿಯಲ್ಲಿ ನೊಂದ ನಾನು ಕರಚರಣಗಳೆಂಬ ಕಮಲಗಳುಳ್ಳ, ಕಾಂತಿಯುಕ್ತವಾದ ನೇತ್ರಗಳೆಂಬ ಮೀನುಗಳಿಂದ ಕೂಡಿದ, ಬಾಹುಗಳೆಂಬ ಅಲೆಗಳಿಂದ ತುಂಬಿದ, ಅಗಾಧವಾದ ಗತಿಯುಳ್ಳ, ಶ್ರಮಪರಿಹಾರಕವಾದ 'ಹರಿ' ಎಂಬ ಸರೋವರದಲ್ಲಿ ಮುಳುಗಿ ತೇಜಸ್ಸೆಂಬ ನೀರನ್ನು ಕುಡಿದು ದುಃಖವನ್ನೆಲ್ಲಾ ಈಗ ಬಿಡುತ್ತೇನೆ.

ಸರಸಿಜನಯನೇ ಸಶಂಖಚಕ್ರೇ
ಮುರಭಿದಿ ಮಾ ವಿರಮಸ್ವ ಚಿತ್ತ ರಂತುಮ್ ।
ಸುಖತರಮಪರಂ ನ ಜಾತು ಜಾನೇ
ಹರಿಚರಣಸ್ಮರಣಾಮೃತೇನ ತುಲ್ಯಮ್ ॥ ೧೦ ॥

ಮಾಭೀರ್ಮಂದಮನೋ ವಿಚಿಂತ್ಯ ಬಹುಧಾ ಯಾಮೀಶ್ಚಿರಂ
ಯಾತನಾಃ
ನಾಮೀ ನಃ ಪ್ರಭವಂತಿ ಪಾಪರಿಪವಃ ಸ್ವಾಮೀ ನನು ಶ್ರೀಧರಃ ।
ಆಲಸ್ಯಂ ವ್ಯಪನೀಯ ಭಕ್ತಿಸುಲಭಂ ಧ್ಯಾಯಸ್ವ ನಾರಾಯಣಂ
ಲೋಕಸ್ಯ ವ್ಯಸನಾಪನೋದನಕರೋ ದಾಸಸ್ಯ ಕಿಂ ನ ಕ್ಷಮಃ ॥ ೧೧ ॥

ಭವಜಲಧಿಗತಾನಾಂ ದ್ವಂದ್ವವಾತಾಹತಾನಾಂ
ಸುತದುಹಿತೃಕಳತ್ರತ್ರಾಣಭಾರಾರ್ದಿತಾನಾಮ್ ।
ವಿಷಮವಿಷಯತೋಯೇ ಮಜ್ಜತಾಮಪ್ಲವಾನಾಂ
ಭವತು ಶರಣಮೇಕೋ ವಿಷ್ಣುಪೋತೋ ನರಾಣಾಮ್ ॥ ೧೨ ॥

ಭವಜಲಧಿಮಗಾಧಂ ದುಸ್ತರಂ ನಿಸ್ತರೇಯಂ
ಕಥಮಹಮಿತಿ ಚೇತೋ ಮಾಸ್ಮಗಾಃ ಕಾತರತ್ವಮ್ ।
ಸರಸಿಜದೃಶಿ ದೇವೇ ತಾವಕೀ ಭಕ್ತಿರೇಕಾ
ನರಕಭಿದಿ ನಿಷಣ್ಣಾ ತಾರಯಿಷ್ಯತ್ಯವಶ್ಯಮ್ ॥ ೧೩ ॥

ಕೃಷ್ಣಾತೋಯೇ ಮದನಪವನೋದ್ಧೂತಮೋಹೋರ್ಮಿಮಾಲೇ
ದಾರಾವರ್ತೇ ತನಯಸಹಜಗ್ರಾಹಸಂಘಾಕುಲೇ ಚ ।
ಸಂಸಾರಾಖ್ಯೇ ಮಹತಿ ಜಲಧೌ ಮಜ್ಜತಾಂ ನಸ್ತ್ರಿಧಾಮನ್
ಪಾದಾಂಭೋಜೇ ವರದ ಭವತೋ ಭಕ್ತಿನಾವಂ ಪ್ರಯಚ್ಛ ॥ ೧೪ ॥

೧೦. ಎಲೈ ಮನಸ್ಸೇ, ಕಮಲನಯನನಾದ, ಶಂಖಚಕ್ರಧಾರಿಯಾದ ಮುರವೈರಿಯಲ್ಲಿ ವಿಹರಿಸುವುದನ್ನು ಬಿಡಬೇಡ; ಶ್ರೀಹರಿಚರಣಾರವಿಂದದ ಸ್ಮರಣೆಯೆಂಬ ಅಮೃತಕ್ಕೆ ಸಮಾನವಾದ ಸುಖಕರವಾದುದನ್ನು ನಾನು ಅರಿಯೆನು.

೧೧. ಎಲೈ ಮೂಢಮನಸ್ಸೇ, ಬಹುಕಾಲದಿಂದ ಈ ಯಾತನೆಗಳನ್ನು ಅನೇಕ ವಿಧವಾಗಿ ನೆನೆದು ಭಯಪಡಬೇಡ; ಈ ಪಾಪಿಷ್ಠರಾದ (ದುಃಖಗಳೆಂಬ) ಶತ್ರುಗಳು ನಮ್ಮನ್ನು ಜಯಿಸಲಾರವು; ಶ್ರೀಧರನು ನಮ್ಮ ಸ್ವಾಮಿಯಲ್ಲವೆ? ಆದ್ದರಿಂದ ಆಲಸ್ಯವನ್ನು ಬಿಟ್ಟು ಭಕ್ತಿಯ ದ್ವಾರಾ ಸುಲಭನಾದ ನಾರಾಯಣನನ್ನು ಧ್ಯಾನಿಸು; ಜಗತ್ತಿನ ವ್ಯಸನವನ್ನು ಹೋಗಲಾಡಿಸುವ ಆತನು ತನ್ನ ದಾಸನ ವ್ಯಸನವನ್ನು ನೀಗಲು ಶಕ್ತನಲ್ಲವೆ?

೧೨. ಸಂಸಾರಸಾಗರದಲ್ಲಿ ಬಿದ್ದು, (ಸುಖದುಃಖಗಳೆಂಬ) ದ್ವಂದ್ವರೂಪಗಳಾದ ಗಾಳಿಯ ಹೊಡೆತಕ್ಕೆ ಸಿಕ್ಕಿ, ಮಡದಿ ಮಗ ಮಗಳು ಇವರನ್ನು ಸಾಕುವ ಭಾರದಿಂದ ಕುಗ್ಗಿ, ವಿಷಮವಾದ ವಿಷಯವೆಂಬ ನೀರಿನಲ್ಲಿ ದೋಣಿಯಿಲ್ಲದೆ ಮುಳುಗುತ್ತಿರುವ ಮನುಷ್ಯರಿಗೆ ಅದ್ವಿತೀಯವಾದ ವಿಷ್ಣುವೆಂಬ ನಾವೆಯೇ ಶರಣುವಾಗಿರಲಿ.

೧೩. ಎಲೈ ಮನಸ್ಸೇ, "ಅಗಾಧವಾದ ದಾಟಲನದಳವಾದ ಸಂಸಾರಸಾಗರವನ್ನು ನಾನು ಹೇಗೆ ದಾಟಬಲ್ಲೆನು?" ಎಂದು ಚಿಂತಿಸಿ ಕಾತರಿಸಬೇಡ; ಕಮಲನಯನನಾದ ನರಕವಿನಾಶಿಯಾದ ನಮ್ಮ ದೇವನಲ್ಲಿ ಇಟ್ಟಿರುವ ಅನನ್ಯವಾದ ನಿನ್ನ ಭಕ್ತಿಯು ಅವಶ್ಯಕವಾಗಿ ನಿನ್ನನ್ನು ಉದ್ಧರಿಸುವುದು.

೧೪. ಹೇ ತ್ರಿಲೋಕವ್ಯಾಪಿ, ವರದರಾಜ, ವಿಷಯತೃಷ್ಣೆಯೆಂಬ ನೀರಿನಲ್ಲಿ ಕಾಮವಾಯುವಿನಿಂದ ಎಬ್ಬಿಸಲ್ಪಟ್ಟ ಮೋಹವೆಂಬ ತೆರೆಗಳ ಸಾಲುಗಳುಳ್ಳ, ಸತಿಯೆಂಬ ಸುಳಿಯಿರುವ, ಸುತಸಹೋದರರೆಂಬ ಮೊಸಳೆಗಳಿಂದ ಕ್ಷುಬ್ಧವಾದ ಸಂಸಾರವೆಂಬ ಮಹಾಸಾಗರದಲ್ಲಿ ಮುಳುಗಿ ತೊಳಲುತ್ತಿರುವ ನಮಗೆ ನಿನ್ನ ಚರಣಾರವಿಂದದ ಭಕ್ತಿಯೆಂಬ ನಾವೆಯನ್ನು ಅನುಗ್ರಹಿಸಿಕೊಡು.

ಮಾ ದ್ರಾಕ್ಷಂ ಕ್ಷೀಣಪುಣ್ಯಾನ್ ಕ್ಷಣಮಪಿ ಭವತೋ
ಭಕ್ತಿಹೀನಾನ್ ಪದಾಬ್ಜೇ
ಮಾ ಶ್ರೌಷಂ ಶ್ರಾವ್ಯಬನ್ಧಂ ತವ ಚರಿತಮಪಾ-
ಸ್ಯಾನ್ಯದಾಖ್ಯಾನಜಾತಮ್ ।
ಮಾ ಸ್ಮಾರ್ಷಂ ಮಾಧವ ತ್ವಾಮಪಿ ಭುವನಪತೇ
ಚೇತಸಾಽಪಹ್ನುವಾನಾನ್
ಮಾ ಭೂವಂ ತ್ವತ್ಸಪರ್ಯಾವ್ಯತಿಕರರಹಿತೋ
ಜನ್ಮಜನ್ಮಾಂತರೇಽಪಿ ॥ ೧೫ ॥

ಜಿಹ್ವೇ ಕೀರ್ತಯ ಕೇಶವಂ ಮುರರಿಪುಂ
ಚೇತೋ ಭಜ ಶ್ರೀಧರಂ
ಪಾಣಿದ್ವಂದ್ವ ಸಮರ್ಚಯಾಚ್ಯುತಕಥಾಃ
ಶ್ರೋತ್ರದ್ವಯ ತ್ವಂ ಶೃಣು ।
ಕೃಷ್ಣಂ ಲೋಕಯ ಲೋಚನದ್ವಯ ಹರೇ-
ರ್ಗಚ್ಛಾಂಘ್ರಿಯುಗ್ಮಾಲಯಮ್
ಜಿಘ್ರ ಘ್ರಾಣ ಮುಕುಂದಪಾದತುಲಸೀಂ
ಮೂರ್ಧನ್ನಮಾಧೋಕ್ಷಜಮ್ ॥ ೧೬ ॥

ಹೇ ಲೋಕಾಃ ಶೃಣುತ ಪ್ರಸೂತಿಮರಣ-
ವ್ಯಾಧೇಶ್ಚಿಕಿತ್ಸಾಮಿಮಾಂ
ಯೋಗಜ್ಞಾಸ್ಸಮುದಾಹರಂತಿ ಮುನಯೋ
ಯಾಂ ಯಾಜ್ಞವಲ್ಕ್ಯಾದಯಃ ।
ಅಂತರ್ಜ್ಯೋತಿರಮೇಯಮೇಕಮಮೃತಂ
ಕೃಷ್ಣಾಖ್ಯಮಾಪೀಯತಾಂ
ತತ್ಪೀತಂ ಪರಮೌಷಧಂ ವಿತನುತೇ
ನಿರ್ವಾಣಮಾತ್ಯಂತಿಕಮ್ ॥ ೧೭ ॥

೧೫. ಹೇ ಲೋಕನಾಥ, ನಿನ್ನ ಪಾದಾರವಿಂದದಲ್ಲಿ ಭಕ್ತಿಯಿಲ್ಲದ ಪುಣ್ಯಹೀನರನ್ನು ಕ್ಷಣಮಾತ್ರವೂ ನಾನು ನೋಡದಿರಲಿ; ಶ್ರಾವ್ಯಬದ್ಧವಾದ ನಿನ್ನ ದಿವ್ಯಚರಿತವನ್ನುಳಿದು ಬೇರೆ ಯಾವ ಕಥೆಗಳನ್ನೂ ನಾನು ಕೇಳದಿರಲಿ; ಹೇ ಮಾಧವ, ನಿನ್ನನ್ನು ನಿರಾಕರಿಸುವವರನ್ನು ನಾನು ಸ್ಮರಿಸದೇ ಇರಲಿ; ಮತ್ತು ಜನ್ಮಜನ್ಮಾಂತರದಲ್ಲಿಯೂ ನಿನ್ನನ್ನು ಪೂಜಿಸುವ ಸುಯೋಗವು ತಪ್ಪದೇ ಇರಲಿ.

೧೬. ಎಲೈ ನಾಲಗೆ, ಕೇಶವನ ಗುಣಗಳನ್ನು ಗಾನಮಾಡು; ಎಲೈ ಮನಸ್ಸೇ, ಮುರಹರನನ್ನು ಭಜಿಸು; ಎರಡು ಕೈಗಳೇ, ಶ್ರೀಧರನನ್ನು ಅರ್ಚನೆ ಮಾಡಿ; ಕಿವಿಗಳೇ, ಅಚ್ಯುತನ ದಿವ್ಯಚರಿತ್ರವನ್ನು ಶ್ರವಣಮಾಡಿ; ಕಣ್ಣುಗಳೇ, ಶ್ರೀಕೃಷ್ಣನನ್ನು ನೋಡಿ; ಕಾಲುಗಳೇ, ಹರಿಯ ಆಲಯಕ್ಕೆ ನಡೆಯಿರಿ; ನಾಸಿಕವೇ, ಮುಕುಂದನ ಪಾದಕ್ಕೆ ಅರ್ಪಿಸಿದ ತುಲಸಿಯನ್ನು ಆಘ್ರಾಣಿಸು; ತಲೆಯೇ ಅಧೋಕ್ಷಜನನ್ನು ನಮಿಸು.

೧೭. ಎಲೈ ಜನರೇ, ಯೋಗಜ್ಞರಾದ ಯಾಜ್ಞವಲ್ಕ್ಯರೇ ಮೊದಲಾದ ಮುನಿಗಳು ಜನನಮರಣವೆಂಬ ವ್ಯಾಧಿಗೆ ವಿಧಿಸಿರುವ ಈ ಚಿಕಿತ್ಸೆಯನ್ನು ಕೇಳಿರಿ: ಅಮೇಯವೂ ಅಂತರ್ಜ್ಯೋತಿಯೂ ಅದ್ವಿತೀಯವೂ ಆದ ಕೃಷ್ಣನೆಂಬ ಔಷಧವನ್ನು ಸೇವಿಸಿರಿ; ಆ ಪರಮೌಷಧವನ್ನು ಸೇವಿಸಿದೊಡನೆ ಶಾಶ್ವತವಾದ ಶಾಂತಿಯು ಉಂಟಾಗುತ್ತದೆ.

ಹೇ ಮರ್ತ್ಯಾಃ ಪರಮಂ ಹಿತಂ ಶೃಣುತ ವೋ ವಕ್ಷ್ಯಾಮಿ ಸಂಕ್ಷೇಪತಃ
ಸಂಸಾರಾರ್ಣವಮಾಪದೂರ್ಮಿಬಹುಳಂ ಸಮ್ಯಕ್ಪ್ರವಿಶ್ಯ ಸ್ಥಿತಾಃ ।
ನಾನಾಜ್ಞಾನಮಪಾಸ್ಯ ಚೇತಸಿ ನಮೋ ನಾರಾಯಣಾಯೇತ್ಯಮುಂ
ಮಂತ್ರಂ ಸಪ್ರಣವಂ ಪ್ರಣಾಮಸಹಿತಂ ಪ್ರಾವರ್ತಯಧ್ವಂ
ಮುಹುಃ ॥ ೧೮ ॥

ಪೃಥ್ವೀರೇಣುರಣುಃ ಪಯಾಂಸಿ ಕಣಿಕಾಃ ಫಲ್ಗುಃ ಸ್ಫುಲಿಂಗೋ ಲಘು-
ಸ್ತೇಜೋ ನಿಃಶ್ವಸನಂ ಮರುತ್ತನುತರಂ ರಂಧ್ರಂ ಸುಸೂಕ್ಷ್ಮಂ ನಭಃ ।
ಕ್ಷುದ್ರಾ ರುದ್ರಪಿತಾಮಹಪ್ರಭೃತಯಃ ಕೀಟಾಸ್ಸಮಸ್ತಾಸ್ಸುರಾಃ
ದೃಷ್ಟೇ ಯತ್ರ ಸ ತಾವಕೋ ವಿಜಯತೇ ಭೂಮಾವ-
ಧೂತಾವಧಿಃ ॥ ೧೯ ॥

ಬದ್ಧೇನಾಂಜಲಿನಾ ನತೇನ ಶಿರಸಾ ಗಾತ್ರೈಸ್ಸರೋಮೋದ್ಗಮೈಃ
ಕಂಠೇನ ಸ್ವರಗದ್ಗದೇನ ನಯನೇನೋದ್ಗೀರ್ಣಬಾಷ್ಪಾಂಬುನಾ ।
ನಿತ್ಯಂ ತ್ವಚ್ಚರಣಾರವಿಂದಯುಗಳಧ್ಯಾನಾಮೃತಾಸ್ವಾದಿನಾ-
ಮಸ್ಮಾಕಂ ಸರಸೀರುಹಾಕ್ಷ ಸತತಂ ಸಂಪದ್ಯತಾಂ ಜೀವಿತಮ್ ॥೨೦॥

ಹೇ ಗೋಪಾಲಕ ಹೇ ಕೃಪಾಜಲನಿಧೇ ಹೇ ಸಿಂಧುಕನ್ಯಾಪತೇ
ಹೇ ಕಂಸಾಂತಕ ಹೇ ಗಜೇಂದ್ರಕರುಣಾಪಾರೀಣ ಹೇ ಮಾಧವ ।
ಹೇ ರಾಮಾನುಜ ಹೇ ಜಗತ್ರಯಗುರೋ ಹೇ ಪುಂಡರೀಕಾಕ್ಷ ಮಾಂ
ಹೇ ಗೋಪೀಜನನಾಥ ಪಾಲಯ ಪರಂ ಜಾನಾಮಿ
ನ ತ್ವಾಂ ವಿನಾ ॥ ೨೧ ॥

೧೮. ಆಪತ್ತುಗಳೆಂಬ ಬಹು ತೆರೆಗಳಿಂದ ತುಂಬಿದ ಸಂಸಾರಸಮುದ್ರದ ನಟ್ಟನಡುವೆ ಸಿಕ್ಕಿಬಿದ್ದು ತೊಳಲುವ ಎಲೈ ಮಾನವರೆ, ನಿಮಗೆ ಪರಮ ಹಿತವಾದುದನ್ನು ಸಂಗ್ರಹವಾಗಿ ಹೇಳುತ್ತೇನೆ ಕೇಳಿರಿ: ನಿಮ್ಮ ಬಗೆ ಬಗೆಯ ಚಿಂತೆಗಳನ್ನು ದೂರಮಾಡಿ ಪ್ರಣವದಿಂದ ಕೂಡಿದ "ನಮೋ ನಾರಾಯಣ" ಎಂಬ ಮಂತ್ರವನ್ನು ಮನಸ್ಸಿನಲ್ಲಿಯೇ ಜಪಿಸಿರಿ.

೧೯. ಭೂಮಿಯೆಲ್ಲವೂ ಒಂದು ಪರಮಾಣುವಿನಂತೆಯೂ, ಜಲರಾಶಿಗಳೆಲ್ಲವೂ ಒಂದು ಕಣದಂತೆಯೂ, ಅಗ್ನಿಯು ತುಚ್ಛವಾದ ಒಂದು ನಣ್ಣ ಕಿಡಿಯಂತೆಯೂ, ವಾಯುವು ಮೆಲ್ಲಗೆ ಬಿಟ್ಟ ಉಸಿರಿನಂತೆಯೂ, ಆಕಾಶವು ಸೂಕ್ಷ್ಮವಾದ ರಂಧ್ರದಂತೆಯೂ, ಬ್ರಹ್ಮರುದ್ರಾದಿಗಳು ಕ್ಷುದ್ರರಂತೆಯೂ, ಇತರ ದೇವತೆಗಳು ಕೀಟಗಳಂತೆಯೂ ಎಲ್ಲಿ ಕಂಡುಬರುವರೋ ಆ ಎಲ್ಲೆಯನ್ನು ಮೀರಿದ ನಿನ್ನ ಮಹತ್ತ್ವವು ಸರ್ವೋತ್ಕೃಷ್ಟವಾಗಿದೆ.

೨೦. ಹೇ ಪುಂಡರೀಕಾಕ್ಷನೇ, ನಿನ್ನ ಅಡಿದಾವರೆಗಳ ಧ್ಯಾನವೆಂಬ ಅಮೃತವನ್ನು ನಿತ್ಯವೂ ಸೇವಿಸುತ್ತಿರುವ ನಮ್ಮ ಜೀವಿತವು (ಭಕ್ತಿಯಿಂದ) ಮುಗಿದ ಕೈಗಳಿಂದಲೂ, (ವಿನಯದಿಂದ) ಬಾಗಿದ ತಲೆಯಿಂದಲೂ, (ಹರ್ಷದಿಂದ) ರೋಮಾಂಚಿತವಾದ ಶರೀರದಿಂದಲೂ, (ಭಾವೋದ್ರೇಕದಿಂದ) ಗದ್ಗದಸ್ವರವುಳ್ಳ ಕಂಠದಿಂದಲೂ, ಆನಂದಬಾಷ್ಪಗಳು ಹೊರಹೊಮ್ಮುತ್ತಿರುವ ಕಣ್ಣುಗಳಿಂದಲೂ ಸಾರ್ಥಕವಾಗಲಿ.

೨೧. ಹೇ ಗೋಪಾಲಕನೇ, ಕೃಪಾಜಲನಿಧಿಯೇ, ಲಕ್ಷ್ಮೀಪತಿಯೇ, ಕಂಸಾಂತಕನೇ, ಗಜೇಂದ್ರನಲ್ಲಿ ದಯೆಮಾಡಿದವನೇ, ಮಾಧವನೇ, ಬಲರಾಮನ ಸಹೋದರನೇ, ಜಗತ್ರಯಕ್ಕೆ ಗುರುವೇ, ಪುಂಡರೀಕಾಕ್ಷನೇ, ಗೋಪೀಜನನಾಥನೇ ನನ್ನನ್ನು ಪಾಲಿಸು; ನಿನ್ನನ್ನು ಬಿಟ್ಟರೆ ಬೇರೆ ಯಾರನ್ನೂ ನಾನು ಕಾಣೆ.

ಭಕ್ತಾಪಾಯಭುಜಂಗಗಾರುಡಮಣಿಸ್ತ್ರೈಲೋಕ್ಯರಕ್ಷಾಮಣಿಃ
ಗೋಪೀಲೋಚನಚಾತಕಾಂಬುಜಮಣಿಸ್ಸೌಂದರ್ಯಮುದ್ರಾಮಣಿಃ ।
ಯಃ ಕಾಂತಾಮಣಿರುಕ್ಮಿಣೀಘನಕುಚದ್ವಂದ್ವೈಕಭೂಷಾಮಣಿಃ
ಶ್ರೇಯೋ ದೇವಶಿಖಾಮಣಿರ್ದಿಶತು ನೋ ಗೋಪಾಲ-
ಚೂಡಾಮಣಿಃ ॥ ೨೨ ॥

ಶತ್ರುಚ್ಛೇದೈಕಮಂತ್ರಂ ಸಕಲಮುಪನಿಷದ್-
ವಾಕ್ಯಸಂಪೂಜ್ಯಮಂತ್ರಂ
ಸಂಸಾರೋತ್ತಾರಮಂತ್ರಂ ಸಮುಪಚಿತತಮ-
ಸ್ಸಂಘನಿರ್ಯಾಣಮಂತ್ರಮ್ ।
ಸರ್ವೈಶ್ವರ್ಯೈಕಮಂತ್ರಂ ವ್ಯಸನಭುಜಗಸಂ-
ದಷ್ಟಸಂತ್ರಾಣಮಂತ್ರಂ
ಜಿಹ್ವೇ ಶ್ರೀಕೃಷ್ಣಮಂತ್ರಂ ಜಪ ಜಪ ಸತತಂ
ಜನ್ಮಸಾಫಲ್ಯಮಂತ್ರಮ್ ॥ ೨೩ ॥

ವ್ಯಾಮೋಹಪ್ರಶಮೌಷಧಂ ಮುನಿಮನೋವೃತ್ತಿಪ್ರವೃತ್ತ್ಯೌಷಧಂ
ದೈತ್ಯೇಂದ್ರಾರ್ತಿಕರೌಷಧಂ ತ್ರಿಭುವನೇ ಸಂಜೀವನೈಕೌಷಧಮ್ ।
ಭಕ್ತಾತ್ಯಂತಹಿತೌಷಧಂ ಭವಭಯಪ್ರಧ್ವಂಸನೈಕೌಷಧಂ
ಶ್ರೇಯಃಪ್ರಾಪ್ತಿಕರೌಷಧಂ ಪಿಬ ಮನಃ
ಶ್ರೀಕೃಷ್ಣದಿವ್ಯೌಷಧಮ್ ॥ ೨೪ ॥

ಆಮ್ನಾಯಾಭ್ಯಸನಾನ್ಯರಣ್ಯರುದಿತಂ ವೇದವ್ರತಾನ್ಯನ್ವಹಂ
ಮೇದಶ್ಛೇದಫಲಾನಿ ಪೂರ್ತವಿಧಯಸ್ಸರ್ವೇ ಹುತಂ ಭಸ್ಮನಿ ।
ತೀರ್ಥಾನಾಮವಗಾಹನಾನಿ ಚ ಗಜಸ್ನಾನಂ ವಿನಾ ಯತ್ಪದ-
ದ್ವಂದ್ವಾಂಭೋರುಹಸಂಸ್ಮೃತೀರ್ವಿಜಯತೇ
ದೇವಸ್ಸ ನಾರಾಯಣಃ ॥ ೨೫ ॥

೨೨. ಭಕ್ತರ ಅಪಾಯವೆಂಬ ಸರ್ಪಕ್ಕೆ ಗರುಡಮಣಿಯೂ, ಮೂರು ಲೋಕಗಳ ರಕ್ಷಣೆಯಲ್ಲಿ ಸಮರ್ಥನೂ, ಗೋಪಿಯರ ಕಣ್ಣುಗಳೆಂಬ ಚಾತಕ ಪಕ್ಷಿಗಳಿಗೆ ಮೇಘದಂತೆ ಸಂತಾಪಹರನೂ, ಸೌಂದರ್ಯಾತಿಶಯಕ್ಕೆ ಮುದ್ರಾಮಣಿಯೂ, ಕಾಂತಾಮಣಿಯಾದ ರುಕ್ಮಿಣೀದೇವಿಯ ಘನವಾದ ಕುಚಯುಗ್ಮಕ್ಕೆ ಭೂಷಣಸದೃಶನೂ, ದೇವತೆಗಳ ಶಿಖಾಮಣಿಯೂ ಆದ ಗೋಪಾಲಚೂಡಾಮಣಿಯು ನಮಗೆ ಶ್ರೇಯಸ್ಸನ್ನು ನೀಡಲಿ.

೨೩. ಎಲೈ ನಾಲಗೆ, ಶತ್ರುಗಳ ನಾಶಕ್ಕೆ ಏಕಮಾತ್ರ ಮಂತ್ರವೂ, ಸಕಲ ಉಪನಿಷದ್ವಾಕ್ಯಗಳ ಹೊಗಳಿಕೆಗೆ ತಕ್ಕ ಮಂತ್ರವೂ, ಸಂಸಾರದಿಂದ ಪಾರುಮಾಡುವ ಮಂತ್ರವೂ, ಅನಾದಿಕಾಲದಿಂದ ಕೂಡಿಬಂದ ತಮಸ್ಸನ್ನು ನಿರ್ಮೂಲಮಾಡುವ ಮಂತ್ರವೂ, ಸರ್ವೈಶ್ವರ್ಯಗಳನ್ನು ಸಾಧಿಸುವ ಮಂತ್ರವೂ, ವ್ಯಸನವೆಂಬ ಸರ್ಪದಿಂದ ಕಚ್ಚಲ್ಪಟ್ಟವನನ್ನು ಉದ್ಧರಿಸಬಲ್ಲ ಮಂತ್ರವೂ, ಜನ್ಮವನ್ನು ಸಾಫಲ್ಯಮಾಡುವ ಮಂತ್ರವೂ ಆದ ಮಂತ್ರವನ್ನು ಯಾವಾಗಲೂ ಜಪಿಸು, ಜಪಿಸು.

೨೪. ಎಲೈ ಮನಸ್ಸೇ, ವ್ಯಾಮೋಹವೆಂಬ ರೋಗವನ್ನು ಗುಣಮಾಡುವ ಔಷಧವೂ, ಮುನಿಗಳ ಮನೋವೃತ್ತಿಗಳನ್ನು ಪ್ರವೃತ್ತಿಸುವ ಔಷಧವೂ, ದೈತ್ಯರನ್ನು ಆರ್ತರನ್ನಾಗಿ ಮಾಡಬಲ್ಲ ಔಷಧವೂ, ತ್ರಿಭುವನಕ್ಕೆ ಸಂಜೀವನೌಷಧವೂ, ಭಕ್ತರಿಗೆ ಅತ್ಯಂತ ಹಿತಕರವಾದ ಔಷಧವೂ, ಸಂಸಾರಭಯವನ್ನು ನಾಶಮಾಡಬಲ್ಲ ಒಂದೇ ಔಷಧವೂ, ಶ್ರೇಯಸ್ಸನ್ನು ನೀಡಬಲ್ಲ ಔಷಧವೂ ಆದ ಶ್ರೀಕೃಷ್ಣನೆಂಬ ದಿವ್ಯೌಷಧವನ್ನು ಸೇವಿಸು.

೨೫. ಯಾರ ಅಡಿದಾವರೆಗಳ ಸ್ಮರಣೆಯಿಲ್ಲದಿದ್ದರೆ ವೇದಾಧ್ಯಯನವು ಅರಣ್ಯರೋದನದಂತಿರುವುದೋ, ದಾನಧರ್ಮಗಳು ಬೂದಿಯಲ್ಲಿ ಮಾಡಿದ ಹೋಮಕ್ಕೆ ಸಮಾನವೋ, ತೀರ್ಥಗಳಲ್ಲಿ ಮಾಡಿದ ಸ್ನಾನಗಳು ಆನೆಯನ್ನು ತೊಳೆದಂತೆ ನಿರರ್ಥಕವೋ ಅಂತಹ ದೇವನಾದ ಶ್ರೀಮನ್ನಾರಾಯಣನು ಸರ್ವೋತ್ಕೃಷ್ಟನಾಗಿದ್ದಾನೆ.

ಶ್ರೀಮನ್ನಾಮ ಪ್ರೋಚ್ಯ ನಾರಾಯಣಾಖ್ಯಂ
ಕೇ ನ ಪ್ರಾಪುರ್ವಾಂಛಿತಂ ಪಾಪಿನೋಽಪಿ ।
ಹಾ ನಃ ಪೂರ್ವಂ ವಾಕ್ಪ್ರವೃತ್ತಾ ನ ತಸ್ಮಿನ್
ತೇನ ಪ್ರಾಪ್ತಂ ಗರ್ಭವಾಸಾದಿದುಃಖಮ್ ॥ ೨೬ ॥

ಮಜ್ಜನ್ಮನಃ ಫಲಮಿದಂ ಮಧುಕೈಟಭಾರೇ
ಮತ್ಪ್ರಾರ್ಥನೀಯಮದನುಗ್ರಹ ಏಷ ಏವ ।
ತ್ವದ್ಭೃತ್ಯಭೃತ್ಯಪರಿಚಾರಕಭೃತ್ಯಭೃತ್ಯ-
ಭೃತ್ಯಸ್ಯ ಭೃತ್ಯ ಇತಿ ಮಾಂ ಸ್ಮರ ಲೋಕನಾಥ ॥ ೨೭ ॥

ನಾಥೇ ನಃ ಪುರುಷೋತ್ತಮೇ ತ್ರಿಜಗತಾಮೇಕಾಧಿಪೇ ಚೇತಸಾ
ಸೇವ್ಯೇ ಸ್ವಸ್ಯ ಪದಸ್ಯ ದಾತರಿ ಸುರೇ ನಾರಾಯಣೇ ತಿಷ್ಠತಿ ।
ಯಂ ಕಂಚಿತ್ಪುರುಷಾಧಮಂ ಕತಿಪಯಗ್ರಾಮೇಶಮಲ್ಪಾರ್ಥದಂ
ಸೇವಾಯೈ ಮೃಗಯಾಮಹೇ ನರಮಹೋ ಮೂಕಾ
ವರಾಕಾ ವಯಮ್ ॥ ೨೮ ॥

ಮದನ ಪರಿಹರ ಸ್ಥಿತಿಂ ಮದೀಯೇ
ಮನಸಿ ಮುಕುಂದಪದಾರವಿಂದಧಾಮ್ನಿ ।
ಹರನಯನಕೃಶಾನುನಾ ಕೃಶೋಽಸಿ
ಸ್ಮರಸಿ ನ ಚಕ್ರಪರಾಕ್ರಮಂ ಮುರಾರೇಃ ॥ ೨೯ ॥

ತತ್ತ್ವಂ ಬ್ರುವಾಣಾನಿ ಪರಂ ಪರಸ್ಮಾತ್
ಮಧು ಕ್ಷರಂತೀವ ಸತಾಂ ಫಲಾನಿ ।
ಪ್ರಾವರ್ತಯ ಪ್ರಾಂಜಲಿರಸ್ಮಿ ಜಿಹ್ವೇ
ನಾಮಾನಿ ನಾರಾಯಣಗೋಚರಾಣಿ ॥ ೩೦ ॥

೨೬. ಶ್ರೀಮನ್ನಾರಾಯಣ ಎಂಬ ನಾಮವನ್ನು ಉಚ್ಚಾರಮಾಡಿ ಪಾಪಿಗಳಾದವರೂ ಕೂಡ ತಮ್ಮ ಇಷ್ಟಾರ್ಥವನ್ನು ಯಾರು ಪಡೆಯಲಿಲ್ಲ? ಅಯ್ಯೋ, ಹಿಂದೆ ಅದರಲ್ಲಿ ನಮ್ಮ ಮಾತು ತೊಡಗಲಿಲ್ಲ; ಅದರಿಂದಲೇ ಗರ್ಭವಾಸ ಮುಂತಾದ ದುಃಖಗಳು ಉಂಟಾದುವು.

೨೭. ಹೇ ಮಧುಕೈಟಭಾರಿ, ನಾನು ಜನ್ಮವೆತ್ತಿದುದಕ್ಕೆ ಆಗಬೇಕಾದ ಫಲ ಬಂದಿದೆ; ನಾನು ನಿನ್ನನ್ನು ಬೇಡುವುದು, ನೀನು ನನಗೆ ಅನುಗ್ರಹಿಸುವುದು ಇದು ಮಾತ್ರ: ಹೇ ಲೋಕನಾಥ, ನಿನಗೆ ದಾಸಾನುದಾಸರಾದ ಭಕ್ತರ ಸೇವೆಯನ್ನು ಮಾಡಿಕೊಂಡಿರುವ ಭೃತ್ಯರಿಗೆ ನಾನು ಭೃತ್ಯನೆಂದು ನೀನು ನನ್ನನ್ನು ಎಣಿಸು.

೨೮. ನಮ್ಮ ಒಡೆಯನೂ, ಪುರುಷೋತ್ತಮನೂ, ಮೂರು ಲೋಕಗಳಿಗೆ ಏಕಾಧಿಪತಿಯೂ, ಮನಸ್ಸಿನಿಂದಲೇ ಸೇವಿಸಲ್ಪಡುವವನೂ, ತನ್ನ ದಿವ್ಯ ಪದವಿಯನ್ನು ಕೊಡತಕ್ಕವನೂ, ಸುರೇಶ್ವರನೂ ಆದ ಶ್ರೀಮನ್ನಾರಾಯಣನು ಇರುವಾಗ, ಅವನನ್ನು ಬಿಟ್ಟು ಕೆಲವು ಗ್ರಾಮಗಳಿಗೆ ಮಾತ್ರ ಒಡೆಯನೂ, ಅಲ್ಪಪ್ರಯೋಜನವನ್ನು ಕೊಡುವವನೂ ಆದ ಪುರುಷಾಧಮನನ್ನು ಸೇವಿಸಲು ಹುಡುಕುತ್ತಿದ್ದೇವೆಯಲ್ಲವೆ? ಅಯ್ಯೋ, ನಾವು ಎಂತಹ ನೀಚರು!

೨೯. ಎಲೈ ಮನ್ಮಥ, ಮುಕುಂದನ ಪಾದಾರವಿಂದದಲ್ಲಿ ನೆಲೆಸಿದ ನನ್ನ ಮನಸ್ಸಿನಿಂದ ನೀನು ತೊಲಗು; ನೀನು ಮೊದಲೇ ರುದ್ರನ ನೇತ್ರಾಗ್ನಿಯಿಂದ ಉರಿದು ಕೃಶನಾಗಿರುವೆ; ಮುರಾರಿಯ ಚಕ್ರಾಯುಧದ ಪರಾಕ್ರಮದ ನೆನಪು ನಿನಗೆ ಇಲ್ಲವೇನು?

೩೦. ಎಲೈ ನಾಲಗೆ, ಕೈಜೋಡಿಸಿ ನಿನ್ನನ್ನು ಬೇಡುತ್ತೇನೆ: ಪರಾತ್ಪರತತ್ತ್ವವನ್ನು ಬೋಧಿಸುವ, ಸಾಧುಗಳ ಸತ್ಕರ್ಮಫಲರೂಪವಾದ ಆನಂದವನ್ನು ಸೂಸುತ್ತಿರುವಂತಿರುವ ಶ್ರೀಮನ್ನಾರಾಯಣನ ದಿವ್ಯನಾಮಗಳನ್ನು ಉಚ್ಚರಿಸು.

ಇದಂ ಶರೀರಂ ಪರಿಣಾಮಪೇಶಲಂ
ಪತತ್ಯವಶ್ಯಂ ಶ್ಲಥಸಂಧಿಜರ್ಝರಮ್ ।
ಕಿಮೌಷಧ್ಯೈಃ ಕ್ಲಿಶ್ಯಸಿ ಮೂಢ ದುರ್ಮತೇ
ನಿರಾಮಯಂ ಕೃಷ್ಣರಸಾಯನಂ ಪಿಬ ॥ ೩೧ ॥

ದಾರಾ ವಾರಾಕರವರಸುತಾ ತೇ ತನೂಜೋ ವಿರಿಂಚಃ
ಸ್ತೋತಾ ವೇದಸ್ತವ ಸುರಗಣೋ ಭೃತ್ಯವರ್ಗಃ ಪ್ರಸಾದಃ ।
ಮುಕ್ತಿರ್ಮಾಯಾ ಜಗದವಿಕಲಂ ತಾವಕೀ ದೇವಕೀ ತೇ
ಮಾತಾ ಮಿತ್ರಂ ವಲರಿಪುಸುತಸ್ತ್ವಯ್ಯತೋಽನ್ಯನ್ನ ಜಾನೇ ॥ ೩೨ ॥

ಕೃಷ್ಣೋ ರಕ್ಷತು ನೋ ಜಗತ್ರಯಗುರುಃ ಕೃಷ್ಣಂ ನಮಸ್ಯಾಮ್ಯಹಂ
ಕೃಷ್ಣೇನಾಮರಶತ್ರವೋ ವಿನಿಹತಾಃ ಕೃಷ್ಣಾಯ ತಸ್ಮೈನಮಃ ।
ಕೃಷ್ಣಾದೇವ ಸಮುತ್ಥಿತಂ ಜಗದಿದಂ ಕೃಷ್ಣಸ್ಯ ದಾಸೋಽಸ್ಮ್ಯಹಂ
ಕೃಷ್ಣೇ ತಿಷ್ಠತಿ ಸರ್ವಮೇತದಖಿಲಂ ಹೇ ಕೃಷ್ಣ ರಕ್ಷಸ್ವ ಮಾಮ್॥ ೩೩ ॥

ಸ ತ್ವಂ ಪ್ರಸೀದ ಭಗವನ್ ಕುರುಮಯ್ಯನಾಥೇ
ವಿಷ್ಣೋ ಕೃಪಾಂ ಪರಮಕಾರುಣಿಕಃ ಕಿಲ ತ್ವಮ್ ।
ಸಂಸಾರಸಾಗರನಿಮಗ್ನಮನಂತ ದೀನಂ
ಉದ್ಧರ್ತುಮರ್ಹಸಿ ಹರೇ ಪುರುಷೋತ್ತಮೋಽಸಿ ॥ ೩೪ ॥

ನಮಾಮಿ ನಾರಾಯಣಪಾದಪಂಕಜಂ
ಕರೋಮಿ ನಾರಾಯಣಪೂಜನಂ ಸದಾ ।
ವದಾಮಿ ನಾರಾಯಣನಾಮ ನಿರ್ಮಲಂ
ಸ್ಮರಾಮಿ ನಾರಾಯಣತತ್ತ್ವಮವ್ಯಯಮ್ ॥ ೩೫ ॥

೩೧. ದುರ್ಮತಿಯಾದ ಮೂಢನೇ, ಮುಪ್ಪಿನಿಂದ ಕೃಶವೂ, ಸಡಿಲವಾದ ಕೀಲುಗಳಿಂದ ಜರ್ಝರಿತವೂ ಆದ ಈ ಶರೀರವು ಅವಶ್ಯಕವಾಗಿಯೂ ಒಂದು ದಿನ ಬಿದ್ದುಹೋಗತಕ್ಕದ್ದು; ಸುಮ್ಮನೆ ಔಷಧಗಳಿಂದ ಏತಕ್ಕೆ ಕ್ಲೇಶಗೊಳ್ಳುವೆ? ರೋಗನಾಶಕವಾದ ಕೃಷ್ಣರಸಾಯನವನ್ನು ಸೇವಿಸು.

೩೨. ನಿನ್ನ ಪತ್ನಿ ಸಮುದ್ರರಾಜನ ಮಗಳಾದ ಶ್ರೀಮಹಾಲಕ್ಷ್ಮೀ, ನಿನ್ನ ಪುತ್ರನೇ ಬ್ರಹ್ಮ, ನಿನ್ನನ್ನು ಸ್ತೋತ್ರಮಾಡುವವನು ವೇದಪುರುಷ, ಸುರಗಣವು ನಿನ್ನ ಭೃತ್ಯವರ್ಗ, ನಿನ್ನ ಅನುಗ್ರಹವೇ ಮುಕ್ತಿ, ಅಖಂಡ ಜಗತ್ತು ನಿನ್ನ ಮಾಯೆ, ನಿನ್ನ ತಾಯಿ ದೇವಕೀ, ಅರ್ಜುನನು ನಿನ್ನ ಗೆಳೆಯ; ನಿನ್ನಲ್ಲಿ ಬೇರೆ ಯಾವುದನ್ನೂ ನಾನು ಅರಿಯೆನು.

೩೩. ಮೂರು ಲೋಕಗಳಿಗೂ ಗುರುವಾದ ಶ್ರೀಕೃಷ್ಣನು ನಮ್ಮನ್ನು ಕಾಪಾಡಲಿ; ನಾನು ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ; ಶ್ರೀಕೃಷ್ಣನಿಂದ ಅಮರಶತ್ರುಗಳು ನಾಶವಾದರು; ಅಂತಹ ಶ್ರೀಕೃಷ್ಣನಿಗೆ ನಾನು ನಮಸ್ಕರಿಸುತ್ತೇನೆ. ಈ ಜಗತ್ತು ಕೃಷ್ಣನಿಂದಲೇ ಉದ್ಭವಿಸಿತು; ನಾನು ಶ್ರೀಕೃಷ್ಣನ ದಾಸನು; ಈ ಸಮಸ್ತ ವಿಶ್ವವೂ ಶ್ರೀಕೃಷ್ಣನಲ್ಲಿಯೇ ನಿಂತಿದೆ; ಎಲೈ ಕೃಷ್ಣ, ನನ್ನನ್ನು ರಕ್ಷಿಸು.

೩೪. ಹೇ ಭಗವಂತ, ಅಂತಹ ನೀನು ಪ್ರಸನ್ನನಾಗು, ಹೇ ವಿಷ್ಣು, ಅನಾಥನಾದ ನನ್ನಲ್ಲಿ ಕೃಪೆಯನ್ನು ತೋರು; ನೀನು ಪರಮಕಾರುಣಿಕನಲ್ಲವೆ? ಅನಂತ, ಸಂಸಾರಸಾಗರದಲ್ಲಿ ತೊಳಲುತ್ತಿರುವ ಈ ದೀನನನ್ನು ಉದ್ಧರಿಸಲು ನೀನು ಅರ್ಹನಾಗಿರುವೆ; ಹೇ ಹರಿ, ನೀನೇ ಪುರುಷೋತ್ತಮನೆನಿಸಿರುವೆ.

೩೫. ನಾನು ಯಾವಾಗಲೂ ಶ್ರೀಮನ್ನಾರಾಯಣನ ಅಡಿದಾವರೆಗಳಿಗೆ ನಮಸ್ಕರಿಸುತ್ತೇನೆ, ನಾರಾಯಣನ ಪಾದಪೂಜೆಯನ್ನು ಮಾಡುತ್ತೇನೆ, ನಾರಾಯಣನ ನಿರ್ಮಲನಾಮವನ್ನು ಹೇಳುತ್ತೇನೆ, ಅವ್ಯಯನಾದ ನಾರಾಯಣನ ತತ್ತ್ವವನ್ನು ಸ್ಮರಿಸುತ್ತೇನೆ.

ಶ್ರೀನಾಥ ನಾರಾಯಣ ವಾಸುದೇವ
ಶ್ರೀಕೃಷ್ಣ ಭಕ್ತಪ್ರಿಯ ಚಕ್ರಪಾಣೇ ।
ಶ್ರೀಪದ್ಮನಾಭಾಚ್ಯುತ ಕೈಟಭಾರೇ
ಶ್ರೀರಾಮ ಪದ್ಮಾಕ್ಷ ಹರೇ ಮುರಾರೇ ॥ ೩೬ ॥

ಅನಂತ ವೈಕುಂಠ ಮುಕುಂದ ಕೃಷ್ಣ
ಗೋವಿಂದ ದಾಮೋದರ ಮಾಧವೇತಿ ।
ವಕ್ತುಂ ಸಮರ್ಥೋಽಪಿ ನ ವಕ್ತಿ ಕಶ್ಚಿತ್
ಅಹೋ ಜನಾನಾಂ ವ್ಯಸನಾಭಿಮುಖ್ಯಮ್ ॥ ೩೭ ॥

ಧ್ಯಾಯಂತಿ ಯೇ ವಿಷ್ಣುಮನಂತಮವ್ಯಯಂ
ಹೃತ್ಪದ್ಮಮಧ್ಯೇ ಸತತಂ ವ್ಯವಸ್ಥಿತಮ್ ।
ಸಮಾಹಿತಾನಾಂ ಸತತಾಭಯಪ್ರದಂ
ತೇ ಯಾಂತಿ ಸಿದ್ಧಿಂ ಪರಮಾಂ ಚ ವೈಷ್ಣವೀಮ್ ॥ ೩೮ ॥

ಕ್ಷೀರಸಾಗರತರಂಗಶೀಕರಾ-
ಸಾರತಾರಕಿತಚಾರುಮೂರ್ತಯೇ ।
ಭೋಗಿಭೋಗಶಯನೀಯಶಾಯಿನೇ
ಮಾಧವಾಯ ಮಧುವಿದ್ವಿಷೇ ನಮಃ ॥ ೩೯ ॥

ಯಸ್ಯ ಪ್ರಿಯೌ ಶ್ರುತಿಧರೌ ಕವಿಲೋಕವೀರೌ
ಮಿತ್ರೇ ದ್ವಿಜನ್ಮವರಪದ್ಮಶರಾವಭೂತಾಮ್ ।
ತೇನಾಂಬುಜಾಕ್ಷಚರಣಾಂಬುಜಷಟ್ಪದೇನ
ರಾಜ್ಞಾ ಕೃತಾ ಕೃತಿರಿಯಂ ಕುಲಶೇಖರೇಣ ॥ ೪೦ ॥

೩೬. ಶ್ರೀನಾಥ, ನಾರಾಯಣ, ವಾಸುದೇವ, ಶ್ರೀಕೃಷ್ಣ, ಭಕ್ತಪ್ರಿಯ, ಚಕ್ರಪಾಣಿ, ಪದ್ಮನಾಭ, ಅಚ್ಯುತ, ಕೈಟಭಾರಿ, ಶ್ರೀರಾಮ, ಪದ್ಮಾಕ್ಷ, ಹರಿ, ಮುರಾರಿ.

೩೭. ಅನಂತ, ವೈಕುಂಠ, ಮುಕುಂದ, ಕೃಷ್ಣ, ಗೋವಿಂದ, ದಾಮೋದರ, ಮಾಧವ ಎಂಬ ನಾಮಗಳನ್ನು ನುಡಿಯಲು ಎಲ್ಲರಿಗೂ ಸಾಧ್ಯವಾದರೂ ಯಾರೂ ನುಡಿಯುವುದಿಲ್ಲ; ಅಯ್ಯೋ, ಜನರು ದುರಾಚಾರಗಳಲ್ಲೇ ಆಸಕ್ತರಾಗಿರುವರಲ್ಲಾ!

೩೮. ಅನಂತನೂ, ಅವ್ಯಯನೂ, ಹೃದಯಪದ್ಮದಲ್ಲಿ ಯಾವಾಗಲೂ ನೆಲೆಸಿರುವವನೂ, ಸಮಾಹಿತಚಿತ್ತರಿಗೆ ಸದಾ ಅಭಯಪ್ರದನೂ ಆದ ವಿಷ್ಣುವನ್ನು ಯಾರು ಧ್ಯಾನಮಾಡುತ್ತಾರೋ, ಅಂತಹ ಭಕ್ತರು ವಿಷ್ಣುಸಂಬಂಧವಾದ ಪರಮಪದವನ್ನು ಪಡೆಯುತ್ತಾರೆ.

೩೯. ಕ್ಷೀರಸಾಗರದ ಅಲೆಗಳ ತುಂತುರುಗಳು ಯಾರ ಸುಂದರವಾದ ಶರೀರದ ಮೇಲೆ ನಕ್ಷತ್ರಗಳಂತೆ ಶೋಭಿಸುವುವೋ, ಯಾರು ಆದಿಶೇಷನ ಕುಂಡಲರೂಪವಾದ ಹಾಸಿಗೆಯ ಮೇಲೆ ಯೋಗನಿದ್ರೆಯಲ್ಲಿರುವನೋ ಆ ಮಧುಸೂದನನಾದ ಮಾಧವನಿಗೆ ನಮಸ್ಕಾರ.

೪೦. ವೇದಪಾರಂಗತರೂ, ಕವಿಶ್ರೇಷ್ಠರೂ, ದ್ವಿಜೋತ್ತಮರೂ ಆದ ಪದ್ಮ, ಶರ ಎಂಬ ಇಬ್ಬರು ಯಾರಿಗೆ ಪ್ರಿಯಮಿತ್ರರೆನಿಸಿದರೋ, ಅಂತಹ ಅರವಿಂದಾಕ್ಷನ ಪಾದಾರವಿಂದಭ್ರಮರನಾದ ಕುಲಶೇಖರರಾಜನಿಂದ ಈ ಕೃತಿಯು ರಚಿಸಲ್ಪಟ್ಟಿತು.

# ಸ್ತೋತ್ರರತ್ನಮ್

ನಮೋಽಚಿಂತ್ಯಾದ್ಭುತಾಕ್ಲಿಷ್ಟ-ಜ್ಞಾನ-ವೈರಾಗ್ಯ-ರಾಶಯೇ ।
ನಾಥಾಯ ಮುನಯೇಽಗಾಧ-ಭಗವದ್ಭಕ್ತಿ-ಸಿಂಧವೇ ॥ ೧ ॥

ತಸ್ಮೈ ನಮೋ ಮಧುಜಿದಂಘ್ರಿಸರೋಜ-ತತ್ತ್ವ-
ಜ್ಞಾನಾನುರಾಗ-ಮಹಿಮಾತಿಶಯಾಂತ-ಸೀಮ್ನೇ ।
ನಾಥಾಯ ನಾಥಮುನಯೇಽತ್ರ ಪರತ್ರ ಚಾಪಿ
ನಿತ್ಯಂ ಯದೀಯಚರಣೌ ಶರಣಂ ಮದೀಯಮ್ ॥ ೨ ॥

ಭೂಯೋ ನಮೋಽಪರಿಮಿತಾಚ್ಯುತ-ಭಕ್ತಿ-ತತ್ತ್ವ-
ಜ್ಞಾನಾಮೃತಾಬ್ಧಿ-ಪರಿವಾಹ-ಶುಭೈರ್ವಚೋಭಿಃ ।
ಲೋಕೇಽವತೀರ್ಣ-ಪರಮಾರ್ಥ-ಸಮಗ್ರ-ಭಕ್ತಿ-
ಯೋಗಾಯ ನಾಥಮುನಯೇ ಯಮಿನಾಂ ವರಾಯ ॥ ೩ ॥

ತತ್ತ್ವೇನ ಯಶ್ಚಿದಚಿದೀಶ್ವರ-ತತ್-ಸ್ವಭಾವ-
ಭೋಗಾಪವರ್ಗ-ತದುಪಾಯ-ಗತೀರುದಾರಃ ।
ಸಂದರ್ಶಯನ್ನಿರಮಿಮೀತ ಪುರಾಣರತ್ನಂ
ತಸ್ಮೈ ನಮೋ ಮುನಿವರಾಯ ಪರಾಶರಾಯ ॥ ೪ ॥

ಮಾತಾ ಪಿತಾ ಯುವತಯಸ್ತನಯಾ ವಿಭೂತಿ-
ಸ್ಸರ್ವಂ ಯದೇವ ನಿಯಮೇನ ಮದನ್ವಯಾನಾಮ್ ।
ಆದ್ಯಸ್ಯ ನಃ ಕುಲಪತೇರ್ಬಕುಲಾಭಿರಾಮಂ
ಶ್ರೀಮತ್ತದಂಘ್ರಿಯುಗಳಂ ಪ್ರಣಮಾಮಿ ಮೂರ್ಧ್ನಾ ॥ ೫ ॥

# ಸ್ತೋತ್ರರತ್ನ

೧. ಮನಸ್ಸಿಗೆ ನಿಲುಕದ, ಅದ್ಭುತವಾದ, ಸ್ವಾಭಾವಿಕವಾದ ಜ್ಞಾನವೈರಾಗ್ಯ ಗಳ ರಾಶಿಯಾದ, ಭಗವದ್ಭಕ್ತಿಯ ಅಗಾಧವಾದ ಸಮುದ್ರದಂತಿರುವ ಶ್ರೀನಾಥಮುನಿಗಳಿಗೆ ನಮಸ್ಕಾರ.

೨. ಮಧುಸೂದನನ ಪಾದಪದ್ಮಗಳ ತತ್ತ್ವಜ್ಞಾನ, ಅನುರಾಗ ಮತ್ತು ಮಹಿಮೆಗಳ ಅತಿಶಯಕ್ಕೆ ಕೊನೆಯ ಎಲ್ಲೆಯಾದ, ಇಲ್ಲಿ ಮತ್ತು ಪರದಲ್ಲಿ ಯಾರ ಚರಣಗಳು ನಿತ್ಯವೂ ನನಗೆ ಶರಣುವಾಗಿವೆಯೋ ಅಂತಹ ನಾಥ ರೆನಿಸಿದ ಶ್ರೀನಾಥಮುನಿಗಳಿಗೆ ನಮಸ್ಕಾರ.

೩. ಅಚ್ಯುತನಲ್ಲಿ ಅಪರಿಮಿತವಾದ ಭಕ್ತಿ ಮತ್ತು ತತ್ತ್ವಜ್ಞಾನವೆಂಬ ಅಮೃ ತಾಬ್ಧಿಯ ಕೋಡಿಗಳಂತಿರುವ ಯಾರ ಶುಭೋಕ್ತಿಯಿಂದ ಪರಮಾರ್ಥ ರೂಪವಾದ, ಪರಿಪೂರ್ಣವಾದ ಭಕ್ತಿಯೋಗವು ಈ ಲೋಕದಲ್ಲಿ ಅವ ತರಿಸಿತೋ ಅಂತಹ ಸಂಯಮಿಶ್ರೇಷ್ಠರಾದ ಶ್ರೀನಾಥಮುನಿಗಳಿಗೆ ಪುನಃ ನಮಸ್ಕಾರ.

೪. ಜೀವಾತ್ಮ, ಪ್ರಕೃತಿ, ಪರಮಾತ್ಮ, ಅವುಗಳ ಸ್ವಭಾವ, ಭೋಗ, ಮೋಕ್ಷ ಅವುಗಳನ್ನು ಹೊಂದಲು ಸಾಧನ ಮತ್ತು ಅರ್ಚಿರಾದಿ (ಗತಿಗಳು)– ಇವುಗಳನ್ನು ತೋರಿಸಲು ಉದಾರಬುದ್ಧಿಯಿಂದ "ಪುರಾಣರತ್ನವನ್ನು" ನಿರ್ಮಿಸಿದ ಮುನಿವರರಾದ ಶ್ರೀಪರಾಶರರಿಗೆ ನಮಸ್ಕಾರ.

೫. ನಮ್ಮ ಮೊದಲನೆಯ ಕುಲಪತಿಯಾದ (ಶ್ರೀಪರಾಂಕುಶ ಮುನಿಗಳ) ಬಕುಲಕುಸುಮಗಳಿಂದ ರಂಜಿತವಾದ ಶ್ರೀಚರಣಗಳು ನಮ್ಮ ವಂಶ ದವರಿಗೆಲ್ಲಾ ಯಾವಾಗಲೂ ತಾಯಿ ತಂದೆ ಹೆಂಗಸರು ಮಕ್ಕಳು ಐಶ್ವರ್ಯ ಇವೆಲ್ಲಾ ಆಗಿವೆ; ಅಂತಹ ಚರಣಗಳಿಗೆ ಶಿರಸಾ ಪ್ರಣಾಮ ವನ್ನು ಮಾಡುತ್ತೇನೆ.

ಯನ್ಮೂರ್ಧ್ನಿ ಮೇ ಶ್ರುತಿಶಿರಸ್ಸು ಚ ಭಾತಿ ಯಸ್ಮಿ-
ನ್ನಸ್ಮನ್ಮನೋರಥ-ಪಥಸ್ಸಕಲಸ್ಸಮೇತಿ ।
ಸ್ತೋಷ್ಯಾಮಿ ನಃ ಕುಲಧನಂ ಕುಲದೈವತಂ ತ-
ತ್ಪಾದಾರವಿಂದಮರವಿಂದ-ವಿಲೋಚನಸ್ಯ ॥ ೬ ॥

ತತ್ತ್ವೇನ ಯಸ್ಯ ಮಹಿಮಾರ್ಣವ-ಶೀಕರಾಣು-
ಶ್ಶಕ್ಯೋ ನ ಮಾತುಮಪಿ ಶರ್ವಪಿತಾಮಹಾದ್ಯೈಃ ।
ಕರ್ತುಂ ತದೀಯ-ಮಹಿಮ-ಸ್ತುತಿಮುದ್ಯತಾಯ
ಮಹ್ಯಂ ನಮೋಽಸ್ತು ಕವಯೇ ನಿರಪತ್ರಪಾಯ ॥ ೭ ॥

ಯದ್ವಾ ಶ್ರಮಾವಧಿ ಯಥಾಮತಿ ವಾಪ್ಯಶಕ್ತ-
ಸ್ಸ್ತೌತ್ಯೇವಮೇವ ಖಲು ತೇಽಪಿ ಸದಾ ಸ್ತುವಂತಃ ।
ವೇದಾಶ್ಚತುರ್ಮುಖಮುಖಾಶ್ಚ ಮಹಾರ್ಣವಾಂತಃ
ಕೋ ಮಜ್ಜತೋರಣುಕುಲಾಚಲಯೋರ್ವಿಶೇಷಃ ॥ ೮ ॥

ಕಿಂ ಚೈಷ ಶಕ್ತ್ಯತಿಶಯೇನ ನ ತೇಽನುಕಂಪ್ಯ-
ಸ್ಸ್ತೋತಾಽಪಿ ತು ಸ್ತುತಿಕೃತೇನ ಪರಿಶ್ರಮೇಣ ।
ತತ್ರ ಶ್ರಮಸ್ತು ಸುಲಭೋ ಮಮ ಮಂದಬುದ್ಧೇ-
ರಿತ್ಯುದ್ಯಮೋಽಯಮುಚಿತೋ ಮಮ ಚಾಬ್ಜನೇತ್ರ ॥ ೯ ॥

ನಾವೇಕ್ಷಸೇ ಯದಿ ತತೋ ಭುವನಾನ್ಯಮೂನಿ
ನಾಲಂ ಪ್ರಭೋ ಭವಿತುಮೇವ ಕುತಃ ಪ್ರವೃತ್ತಿಃ ।
ಏವಂ ನಿಸರ್ಗ-ಸುಹೃದಿ ತ್ವಯಿ ಸರ್ವಜಂತೋ-
ಸ್ಸ್ವಾಮಿನ್ನ ಚಿತ್ರಮಿದಮಾಶ್ರಿತ-ವತ್ಸಲತ್ವಮ್ ॥ ೧೦ ॥

ಸ್ವಾಭಾವಿಕಾನವಧಿಕಾತಿಶಯೇಶಿತೃತ್ವಂ
ನಾರಾಯಣ ತ್ವಯಿ ನ ಮೃಷ್ಯತಿ ವೈದಿಕಃ ಕಃ ।
ಬ್ರಹ್ಮಾ ಶಿವಶ್ಶತಮಖಃ ಪರಮಸ್ಸ್ವರಾಡಿ-
ತ್ಯೇತೇಽಪಿ ಯಸ್ಯ ಮಹಿಮಾರ್ಣವ-ವಿಪ್ರುಷಸ್ತೇ ॥ ೧೧ ॥

೬. ಯಾವುದು ನನ್ನ ತಲೆಯ ಮೇಲೂ ಮತ್ತು ಶ್ರುತಿಶಿರಸ್ಸಿನಲ್ಲಿಯೂ ಪ್ರಕಾಶಿಸುತ್ತಿರುವುದೋ, ಯಾವುದರಲ್ಲಿ ನಮ್ಮ ಮನೋರಥಪಥಗಳೆಲ್ಲವೂ ಒಂದಾಗುತ್ತಿವೆಯೋ, ಅಂತಹ ಅರವಿಂದಲೋಚನನ ಪಾದಾರವಿಂದವನ್ನು ಸ್ತುತಿಸುತ್ತೇನೆ.

೭. ಯಾವನ ಮಹಿಮಾರ್ಣವದ ಶೀಕರದ ಒಂದು ಕಣವನ್ನು ಯಥಾರ್ಥವಾಗಿ ಅಳೆಯಲು ಶರ್ವಪಿತಾಮಹರಿಗೆ ಸಾಧ್ಯವಿಲ್ಲವೋ ಅಂತಹವನ ಮಹಿಮೆಯ ಸ್ತುತಿಯನ್ನು ಮಾಡಲು ತೊಡಗಿರುವ ನನ್ನಂತಹ ನಿರ್ಲಜ್ಜನಾದ ಕವಿಗೂ ನಮಸ್ಕಾರವಿರಲಿ.

೮. ಅಥವಾ ನಾನು ಅಶಕ್ತನಾಗಿದ್ದರೂ ನನಗೆ ಶ್ರಮವಾಗುವವರೆಗೆ ನನಗೆ ತಿಳಿದಷ್ಟು ಸ್ತುತಿಸುತ್ತೇನೆ; ಏಕೆಂದರೆ ವೇದಗಳು ಮತ್ತು ಚತುರ್ಮುಖನಾದ ಬ್ರಹ್ಮನು ಯಾವಾಗಲೂ ಹೀಗೆಯೇ ಸ್ತುತಿಸುವರು. ದೊಡ್ಡ ಸಮುದ್ರದಲ್ಲಿ ಮುಳುಗಿಹೋಗುತ್ತಿರುವ ಅಣುವಿಗೂ ಕುಲಾಚಲಕ್ಕೂ ಏನು ವ್ಯತ್ಯಾಸವುಂಟು?

೯. ಸ್ತೋತ್ರಕರ್ತೃವು ತನ್ನ ಅತಿಶಯವಾದ ಶಕ್ತಿಯಿಂದ ನಿನ್ನ ಕರುಣಕ್ಕೆ ಪಾತ್ರನಾಗಿಲ್ಲ; ಸ್ತುತಿಮಾಡುವ ಪರಿಶ್ರಮದಿಂದ (ನಿನ್ನ ದಯೆಗೆ ಪಾತ್ರನಾಗಿದ್ದಾನೆ); ಮಂದಬುದ್ಧಿಯಾದ ನನಗೆ ಶ್ರಮವು ಸುಲಭವಾಗಿದೆ; ಆದುದರಿಂದ ಕಮಲಾಕ್ಷನೇ, ನನಗೆ ಈ ಉದ್ಯಮವು ಉಚಿತವಾಗಿದೆ.

೧೦. ಪ್ರಭು, ನೀನು ನೋಡದಿದ್ದರೆ ಈ ಭುವನಗಳು ಇರುವುದಿಲ್ಲ; ಹೀಗಿರುವಾಗ ಪ್ರವೃತ್ತಿ ಎಲ್ಲಿಂದ ಉಂಟಾಗಬೇಕು? ಸ್ವಾಮಿ, ಸರ್ವಜಂತುಗಳ ಸಹಜ ಸ್ನೇಹಿತನಾಗಿರುವ ನಿನ್ನಲ್ಲಿ ಆಶ್ರಿತವಾತ್ಸಲ್ಯತೆಯು ವಿಚಿತ್ರವಾಗಿ ಕಾಣುವದಿಲ್ಲ.

೧೧. ನಾರಾಯಣ, ಯಾವ ವೈದಿಕನು ನಿನ್ನ ಸ್ವಾಭಾವಿಕವೂ, ಎಲ್ಲೆ ಇಲ್ಲದಿರುವುದೂ, ಅತಿಶಯವೂ ಆದ ಈಶ್ವರತ್ವವನ್ನು ಒಪ್ಪಿಕೊಳ್ಳದೆ ಇರುವನು? ಬ್ರಹ್ಮಾದಿದೇವತೆಗಳೂ ಮತ್ತು ಮುಕ್ತರಾದ ಜೀವರೂ ನಿನ್ನ ಮಹಿಮೆಯೆಂಬ ಸಮುದ್ರದಲ್ಲಿ ಹನಿಗಳಾಗಿರುವರು.

ಕಶ್ಶ್ರೀಃ ಶ್ರಿಯಃ ಪರಮ-ಸತ್ತ್ವ-ಸಮಾಶ್ರಯಃ ಕಃ
ಕಃ ಪುಂಡರೀಕ-ನಯನಃ ಪುರುಷೋತ್ತಮಃ ಕಃ ।
ಕಸ್ಯಾಯುತಾಯುತ- ಶತೈಕ-ಕಲಾಂಶಕಾಂಶೇ
ವಿಶ್ವಂ ವಿಚಿತ್ರ-ಚಿದಚಿತ್ಪ್ರವಿಭಾಗ-ವೃತ್ತಮ್ ॥ ೧೨ ॥

ವೇದಾಪಹಾರ-ಗುರುಪಾತಕ-ದೈತ್ಯಪೀಡಾ-
ದ್ಯಾಪದ್ವಿಮೋಚನ-ಮಹಿಷ್ಠಫಲ-ಪ್ರದಾನೈಃ ।
ಕೋಽನ್ಯಃ ಪ್ರಜಾಪಶುಪತೀ ಪರಿಪಾತಿ ಕಸ್ಯ
ಪಾದೋದಕೇನ ಸ ಶಿವಸ್ಸ್ವಶಿರೋಧೃತೇನ ॥ ೧೩ ॥

ಕಸ್ಯೋದರೇ ಹರ-ವಿರಿಂಚ-ಮುಖಃ ಪ್ರಪಂಚಃ
ಕೋ ರಕ್ಷತೀಮಮಜನಿಷ್ಟ ಚ ಕಸ್ಯ ನಾಭೇಃ ।
ಕ್ರಾಂತ್ವಾ ನಿಗೀರ್ಯ ಪುನರುದ್ಗಿರತಿ ತ್ವದನ್ಯಃ
ಕಃ ಕೇನ ವೈಷ ಪರವಾನಿತಿ ಶಕ್ಯಶಂಕಃ ॥ ೧೪ ॥

ತ್ವಾಂ ಶೀಲ-ರೂಪ-ಚರಿತೈಃ ಪರಮಪ್ರಕೃಷ್ಟ-
ಸತ್ತ್ವೇನ ಸಾತ್ತ್ವಿಕತಯಾ ಪ್ರಬಲೈಶ್ಚ ಶಾಸ್ತ್ರೈಃ ।
ಪ್ರಖ್ಯಾತ-ದೈವ-ಪರಮಾರ್ಥವಿದಾಂ ಮತೈಶ್ಚ
ನೈವಾಸುರ-ಪ್ರಕೃತಯಃ ಪ್ರಭವಂತಿ ಬೋದ್ಧುಮ್ ॥ ೧೫ ॥

ಉಲ್ಲಂಘಿತ-ತ್ರಿವಿಧ-ಸೀಮ-ಸಮಾತಿಶಾಯಿ-
ಸಂಭಾವನಂ ತವ ಪರಿಬ್ರಢಿಮ-ಸ್ವಭಾವಮ್ ।
ಮಾಯಾಬಲೇನ ಭವತಾಽಪಿ ನಿಗುಹ್ಯಮಾನಂ
ಪಶ್ಯಂತಿ ಕೇಚಿದನಿಶಂ ತ್ವದನನ್ಯಭಾವಾಃ ॥ ೧೬ ॥

೧೨. ಶ್ರೀದೇವಿಗೂ ಶ್ರೀಯಾಗಿರುವವನು ನೀನಲ್ಲದೆ ಬೇರೆ ಯಾರು? ಯಾವನು ಪರಮಸತ್ತ್ವಕ್ಕೆ ಆಶ್ರಯನು? ಯಾವನು ಪುಂಡರೀಕಾಕ್ಷನು? ಯಾವನು ಪುರುಷೋತ್ತಮನು? ನಿನ್ನ ಕೋಟ್ಯಾನುಕೋಟಿ ಅಂಶದ ಒಂದುಭಾಗ ದಲ್ಲಿ ಅಲ್ಲದೆ ಬೇರೆ ಎಲ್ಲಿ ಚೇತನಾಚೇತನಗಳೆಂಬ ಭಾಗಗಳಿಂದ ಕೂಡಿದ ವಿಶ್ವವು ಅಡಗಿದೆ?

೧೩. ವೇದಾಪಹಾರ, ಮಹಾಪಾತಕ, ದೈತ್ಯಪೀಡೆ ಮುಂತಾದ ಆಪತ್ತು ಗಳಿಂದ ಬಿಡುಗಡೆಮಾಡಿ, ಉತ್ತಮಫಲಗಳನ್ನು ಅನುಗ್ರಹಿಸಿ, ಪ್ರಜಾ ಪತಿ–ಪಶುಪತಿಗಳನ್ನು ಕಾಪಾಡಿದವನು ನೀನಲ್ಲದೆ ಬೇರೆ ಯಾರು? ಯಾರ ಪಾದೋದಕವನ್ನು ತಲೆಯ ಮೇಲೆ ಧರಿಸಿ ಶಿವತ್ವವುಂಟಾ ಯಿತು?

೧೪. ಹರಿವಿರಿಂಚಿಗಳಿಂದ ಕೂಡಿದ ಪ್ರಪಂಚವು ಯಾರ ಉದರದಲ್ಲಿ ಅಡ ಗಿದೆ? ಯಾರು ಅದನ್ನು ರಕ್ಷಿಸುತ್ತಾರೆ? ಯಾರ ನಾಭಿಯಿಂದ ಅದು ಉತ್ಪನ್ನವಾಯಿತು? ಎಲ್ಲವನ್ನೂ ದಾಟಿ, ನುಂಗಿ ಪುನಃ ವ್ಯಕ್ತಪಡಿಸು ವವನು ನೀನಲ್ಲದೆ ಬೇರೆ ಯಾರು? ಯಾರ ವಿಷಯದಲ್ಲಿ 'ಈತನೇ ಪರಮಶ್ರೇಷ್ಠ' ಎಂಬ ಶಂಕೆ ಉಂಟಾಗಲು ಸಾಧ್ಯ?

೧೫. ನಿನ್ನ ಶೀಲ ರೂಪ ಚರಿತ್ರೆ ಇವುಗಳಿಂದಾಗಲೀ, ಅತ್ಯುತ್ಕೃಷ್ಟವಾದ ಸತ್ತ್ವದಿಂದಾಗಲೀ, ಸತ್ತ್ವಪ್ರಚುರದಿಂದ ಪ್ರಬಲವಾದ ಶಾಸ್ತ್ರಗಳಿಂದಾ ಗಲೀ, ಪರಮಾರ್ಥವನ್ನು ಬಲ್ಲ ಪ್ರಖ್ಯಾತರಾದ ತತ್ತ್ವಜ್ಞರ ಮತಗ ಳಿಂದಾಗಲೀ ಅಸುರೀಸ್ವಭಾವದ ಜನರು ನಿನ್ನನ್ನು ತಿಳಿದುಕೊಳ್ಳ ಲಾರರು.

೧೬. ದೇಶ ಕಾಲ ವಿಷಯ–ಎಂಬ ತ್ರಿವಿಧವಾದ ಕಲ್ಪನೆಗಳನ್ನೂ, ಸಮ ಅಥವಾ ಅಧಿಕ ಎಂಬ ಭಾವನೆಗಳನ್ನೂ ಮೀರಿರುವ ನಿನ್ನ ಪ್ರಭುತ್ವ ರೂಪವನ್ನು– ನೀನು ಮಾಯಾಶಕ್ತಿಯಿಂದ ಮರೆಮಾಡುತ್ತಿದ್ದರೂ– ಅನನ್ಯಭಾವವುಳ್ಳ ಕೆಲವು ಭಕ್ತರು ಯಾವಾಗಲೂ ನೋಡುತ್ತಾರೆ.

ಯದಂಡಮಂಡಾಂತರ-ಗೋಚರಂ ಚ ಯ-
ದ್ದಶೋತ್ತರಾಣ್ಯಾವರಣಾನಿ ಯಾನಿ ಚ ।
ಗುಣಾಃ ಪ್ರಧಾನಂ ಪುರುಷಃ ಪರಂ ಪದಂ
ಪರಾತ್ಪರಂ ಬ್ರಹ್ಮ ಚ ತೇ ವಿಭೂತಯಃ ॥ ೧೭ ॥

ವಶೀ ವದಾನ್ಯೋ ಗುಣವಾನೃಜುಶ್ಶುಚಿ-
ರ್ಮೃದುರ್ದಯಾಳುರ್ಮಧುರಃ ಸ್ಥಿರಸ್ಸಮಃ ।
ಕೃತೀ ಕೃತಜ್ಞಸ್ತ್ವಮಸಿ ಸ್ವಭಾವತ-
ಸ್ಸಮಸ್ತ-ಕಲ್ಯಾಣ-ಗುಣಾಮೃತೋದಧಿಃ ॥ ೧೮ ॥

ಉಪರ್ಯ್ಯುಪರ್ಯಬ್ಜಭುವೋಽಪಿ ಪೂರುಷಾನ್
ಪ್ರಕಲ್ಪ್ಯ ತೇ ಯೇ ಶತಮಿತ್ಯನುಕ್ರಮಾತ್ ।
ಗಿರಸ್ತ್ವದೇಕೈಕ-ಗುಣಾವಧೀಪ್ಸಯಾ
ಸದಾ ಸ್ಥಿತಾ ನೋದ್ಯಮತೋಽತಿಶೇರತೇ ॥ ೧೯ ॥

ತ್ವದಾಶ್ರಿತಾನಾಂ ಜಗದುದ್ಭವ-ಸ್ಥಿತಿ-
ಪ್ರಣಾಶ-ಸಂಸಾರ-ವಿಮೋಚನಾದಯಃ ।
ಭವಂತಿ ಲೀಲಾ ವಿಧಯಶ್ಚ ವೈದಿಕಾ-
ಸ್ತ್ವದೀಯ-ಗಂಭೀರ-ಮನೋಽನುಸಾರಿಣಃ ॥ ೨೦ ॥

ನಮೋ ನಮೋ ವಾಙ್ಮನಸಾತಿಭೂಮಯೇ
ನಮೋ ನಮೋ ವಾಙ್ಮನಸೈಕ-ಭೂಮಯೇ ।
ನಮೋ ನಮೋಽನಂತ-ಮಹಾ-ವಿಭೂತಯೇ
ನಮೋ ನಮೋಽನಂತ-ದಯೈಕ-ಸಿಂಧವೇ ॥ ೨೧ ॥

೧೭. ಬ್ರಹ್ಮಾಂಡ, ಅದರಲ್ಲಿರುವ ಇತರ ಪ್ರದೇಶಗಳು, ಹತ್ತು ಹತ್ತರಷ್ಟು ಹೆಚ್ಚಾದ ಹೊರಗಿನ ಆವರಣಗಳು, ಪ್ರಕೃತಿ, ಜೀವಾತ್ಮರುಗಳು, ಪರಮ ಪದ, ಜೀವವರ್ಗಕ್ಕಿಂತ ಶ್ರೇಷ್ಠರಾದ ಮುಕ್ತರುಗಳು ಮತ್ತು ಶುಭಾ ಶ್ರಯವಾದ ದಿವ್ಯಮಂಗಳವಿಗ್ರಹ–ಇವೆಲ್ಲವೂ ನಿನ್ನ ವಿಭೂತಿಗಳು.

೧೮. ನೀನು ಪ್ರಭು, ಉದಾರಿ, ಗುಣವಂತನು, ಮನೋವಾಕ್ಕಾಯಗಳಲ್ಲಿ ಏಕರೂಪವಾಗಿರುವವನು, ಶುದ್ಧನು, ಮೃದುಸ್ವಭಾವವುಳ್ಳವನು, ದಯಾಳು, ಆನಂದರೂಪನು, ಸ್ಥಿರನು, ಎಲ್ಲರನ್ನೂ ಸಮದೃಷ್ಟಿಯಿಂದ ನೋಡುವವನು, ಸ್ವಾರ್ಥಕರ್ತವ್ಯರಹಿತನು, ಕೃತಜ್ಞನು ಮತ್ತು ಸಮಸ್ತ ಕಲ್ಯಾಣಗುಣಗಳ ಅಮೃತೋದಧಿ.

೧೯. ಅಖಿಲಾಂಡಕೋಟಿ-ಬ್ರಹ್ಮಾಂಡ-ನಾಯಕನ ನಾಭೀಕಮಲದಲ್ಲಿ ಉತ್ಪ ನ್ನರಾದ ಪುರುಷರನ್ನೂ (ಎಂದರೆ ಪ್ರಜಾಪತಿಗಳನ್ನು) ಕೂಡ ಮನುಷ್ಯ ಸ್ಥಾನದಲ್ಲಿ ಕಲ್ಪಿಸಿ, ಅಲ್ಲಿಂದ ಮೇಲೆ ಮೇಲೆ (ಆನಂದವನ್ನು ಗುಣಿ ಸುತ್ತಾ ಪ್ರಜಾಪತಿಯ ಪರ್ಯಂತ ಹೋಗಿ), "ಆ ಪ್ರಜಾಪತಿಯ ನೂರು ಆನಂದಗಳು ಬ್ರಹ್ಮನ ಒಂದು ಆನಂದ" ಎಂದು ಕ್ರಮವಾಗಿ ಹೇಳಿರುವುದರಿಂದ, ಶ್ರುತಿಯ ವಾಕ್ಯಗಳು ನಿನ್ನ ಒಂದೊಂದು ಗುಣದ ಎಲ್ಲೆಯನ್ನಾದರೂ ವರ್ಣಿಸಬೇಕೆಂಬ ಇಚ್ಛೆಯಿಂದ (ಆ ಆನಂದಗುಣ ದಲ್ಲೇ) ನಿಂತುಬಿಟ್ಟಿವೆ; ಆದರೆ ಅವು ತಮ್ಮ ಕೆಲಸವನ್ನು ಇನ್ನೂ ಮುಗಿಸಲಿಲ್ಲ.

೨೦. ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರಗಳು, ಸಂಸಾರ-ಮೋಕ್ಷಗಳು, ನಿನ್ನ ಗಂಭೀರವಾದ ಮನಸ್ಸನ್ನು ಅನುಸರಿಸಿರುವ ವೇದದಲ್ಲಿರುವ ವಿಧಿಗಳು– ಇವೆಲ್ಲವೂ ನಿನ್ನನ್ನು ಆಶ್ರಯಿಸಿರುವವರ ಪ್ರಯೋಜನಕ್ಕಾಗಿಯೇ ಇವೆ.

೨೧. ವಾಕ್ಕು ಮತ್ತು ಮನಸ್ಸನ್ನು ಮೀರಿದ ನಿನಗೆ ನಮಸ್ಕಾರ; ವಾಕ್ಕಿಗೂ ಮತ್ತು ಮನಸ್ಸಿಗೂ ಏಕವಿಷಯನಾದ ನಿನಗೆ ನಮಸ್ಕಾರ, ಅನಂತ- ಮಹಾವಿಭೂತಿಯಾದ ನಿನಗೆ ನಮಸ್ಕಾರ, ಅನಂತ-ದಯಾಸಾಗರನಾದ ನಿನಗೆ ನಮಸ್ಕಾರ.

ನ ಧರ್ಮನಿಷ್ಠೋಽಸ್ಮಿ ನ ಚಾತ್ಮವೇದೀ
ನ ಭಕ್ತಿಮಾಂಸ್ತ್ವಚ್ಚರಣಾರವಿಂದೇ ।
ಅಕಿಂಚನೋಽನನ್ಯಗತಿಶ್ಶರಣ್ಯ
ತ್ವತ್ಪಾದಮೂಲಂ ಶರಣಂ ಪ್ರಪದ್ಯೇ ॥ ೨೨ ॥

ನ ನಿಂದಿತಂ ಕರ್ಮ ತದಸ್ತಿ ಲೋಕೇ
ಸಹಸ್ರಶೋ ಯನ್ನ ಮಯಾ ವ್ಯಧಾಯಿ ।
ಸೋಽಹಂ ವಿಪಾಕಾವಸರೇ ಮುಕುಂದ
ಕ್ರಂದಾಮಿ ಸಂಪ್ರತ್ಯಗತಿಸ್ತವಾಗ್ರೇ ॥ ೨೩ ॥

ನಿಮಜ್ಜತೋಽನಂತ ಭವಾರ್ಣವಾಂತ-
ಶ್ಚಿರಾಯ ಮೇ ಕೂಲಮಿವಾಸಿ ಲಬ್ಧಃ ।
ತ್ವಯಾಪಿ ಲಬ್ಧಂ ಭಗವನ್ನಿದಾನೀ-
ಮನುತ್ತಮಂ ಪಾತ್ರಮಿದಂ ದಯಾಯಾಃ ॥ ೨೪ ॥

ಅಭೂತಪೂರ್ವಂ ಮಮ ಭಾವಿ ಕಿಂ ವಾ
ಸರ್ವಂ ಸಹೇ ಮೇ ಸಹಜಂ ಹಿ ದುಃಖಮ್ ।
ಕಿಂತು ತ್ವದಗ್ರೇ ಶರಣಾಗತಾನಾಂ
ಪರಾಭವೋ ನಾಥ ನ ತೇಽನುರೂಪಃ ॥ ೨೫ ॥

ನಿರಾಸಕಸ್ಯಾಪಿ ನ ತಾವದುತ್ಸಹೇ
ಮಹೇಶ ಹಾತುಂ ತವ ಪಾದ-ಪಂಕಜಮ್ ।
ರುಷಾ ನಿರಸ್ತೋಽಪಿ ಶಿಶುಸ್ತನಂಧಯೋ
ನ ಜಾತು ಮಾತುಶ್ಚರಣೌಜಿಹಾಸತಿ ॥ ೨೬ ॥

ತವಾಮೃತ-ಸ್ಯಂದಿನಿ ಪಾದಪಂಕಜೇ
ನಿವೇಶಿತಾತ್ಮಾ ಕಥಮನ್ಯದಿಚ್ಛತಿ ।
ಸ್ಥಿತೇಽರವಿಂದೇ ಮಕರಂದ-ನಿರ್ಭರೇ
ಮಧುವ್ರತೋ ನೇಕ್ಷುರಕಂ ಹಿ ವೀಕ್ಷತೇ ॥ ೨೭ ॥

೨೨. ನಾನು ಧರ್ಮನಿಷ್ಠನಲ್ಲ, ಆತ್ಮಜ್ಞಾನಿಯಲ್ಲ ಮತ್ತು ನಿನ್ನ ಅಡಿದಾವರೆಗಳಲ್ಲಿ ನನಗೆ ಭಕ್ತಿಯೂ ಇಲ್ಲ; ಶರಣ್ಯನೆ, ಏನೂ ಇಲ್ಲದೆ, ಯಾವ ಗತಿಯೂ ಇಲ್ಲದೆ ನಿನ್ನ ಪಾದಮೂಲವನ್ನು ಮರೆಹೊಕ್ಕಿರುತ್ತೇನೆ.

೨೩. ನಾನು ಸಾವಿರಾರು ಸಲ ಮಾಡದಿರುವ ಹೇಯವಾದ ಕರ್ಮ ಯಾವುದೂ ಇಲ್ಲ; ಮುಕುಂದ, ಅಂತಹ ನಾನು ಆ ಕರ್ಮಗಳ ವಿಪಾಕದ ದೆಶೆಯಲ್ಲಿ ಗತಿಯಿಲ್ಲದೆ ನಿನ್ನ ಮುಂದೆ ಮೊರೆಯಿಡುತ್ತೇನೆ.

೨೪. ಅನಂತ, ಸಂಸಾರಸಾಗರದಲ್ಲಿ ಮುಳುಗುತ್ತಿರುವ ನನಗೆ ಬಹಳ ಕಾಲದ ಮೇಲೆ ನೀನು ದಡದ ಹಾಗೆ ಸಿಕ್ಕಿರುತ್ತೀಯೆ; ಭಗವಂತನೆ, ನಿನ್ನ ದಯೆಗೂ ಕೂಡ ಒಂದು ಅತ್ಯುತ್ತಮವಾದ ಪಾತ್ರವು ದೊರಕಿರುತ್ತದೆ.

೨೫. ನನಗೆ ಹಿಂದೆ ಉಂಟಾಗದ ದುಃಖವು ಮುಂದೆ ಬರುವುದೆ? ಎಲ್ಲವನ್ನೂ ನಾನು ಸಹಿಸುತ್ತೇನೆ; ದುಃಖವು ನನಗೆ ಸಹಜವಾಗಿದೆ; ಆದರೆ, ನಾಥ, ನಿನ್ನ ಮುಂದೆಯೇ ನಿನ್ನ ಶರಣಾಗತರ ಸೋಲು ನಿನಗೆ ಉಚಿತವಲ್ಲ.

೨೬. ಮಹೇಶ, ನೀನು ನನ್ನನ್ನು ತಿರಸ್ಕರಿಸಿದರೂ ನಿನ್ನ ಪಾದಪಂಕಜವನ್ನು ನಾನು ಬಿಡಲಾರೆ; ಹಾಲುಹಸುಳೆಯು ರೋಷದಿಂದ ತಳ್ಳಲ್ಪಟ್ಟರೂ ತಾಯಿಯ ಕಾಲನ್ನು ಎಂದಿಗೂ ಬಿಡಲಾರದು.

೨೭. ಅಮೃತವನ್ನು ಸೂಸುತ್ತಿರುವ ನಿನ್ನ ಪಾದಪಂಕಜದಲ್ಲಿ ಮನಸ್ಸಿಟ್ಟವನು ಬೇರೆ ಯಾವುದನ್ನು ತಾನೇ ಇಚ್ಛಿಸುತ್ತಾನೆ? ಮಕರಂದದಿಂದ ತುಂಬಿರುವ ಅರವಿಂದವು ಇರುವಾಗ ದುಂಬಿಯು ಕೊಳವಳಿಕೆ ಹೂವನ್ನು ನೋಡುವುದೇ ಇಲ್ಲ.

ತ್ವದಂಘ್ರಿಮುದ್ದಿಶ್ಯ ಕದಾಪಿ ಕೇನಚಿ-
ದ್ಯಥಾ ತಥಾ ವಾಪಿ ಸಕೃತ್ ಕೃತೋಽಂಜಲಿಃ ।
ತದೈವ ಮುಷ್ಣಾತ್ಯಶುಭಾನ್ಯಶೇಷತ-
ಶ್ಶುಭಾನಿ ಪುಷ್ಣಾತಿ ನ ಜಾತು ಹೀಯತೇ ॥ ೨೮ ॥

ಉದೀರ್ಣ-ಸಂಸಾರ-ದವಾಶುಶುಕ್ಷಣಿಂ
ಕ್ಷಣೇನ ನಿರ್ವಾಪ್ಯ ಪರಾಂ ಚ ನಿರ್ವೃತಿಮ್ ।
ಪ್ರಯಚ್ಛತಿ ತ್ವಚ್ಚರಣಾರುಣಾಂಬುಜ-
ದ್ವಯಾನುರಾಗಾಮೃತ-ಸಿಂಧುಶೀಕರಃ ॥ ೨೯ ॥

ವಿಲಾಸ-ವಿಕ್ರಾಂತ-ಪರಾವರಾಲಯಂ
ನಮಸ್ಯದಾರ್ತಿ-ಕ್ಷಪಣೇ ಕೃತಕ್ಷಣಮ್ ।
ಧನಂ ಮದೀಯಂ ತವ ಪಾದಪಂಕಜಂ
ಕದಾ ನು ಸಾಕ್ಷಾತ್ಕರವಾಣಿ ಚಕ್ಷುಷಾ ॥ ೩೦ ॥

ಕದಾ ಪುನಶ್ಶಂಖ-ರಥಾಂಗ-ಕಲ್ಪಕ-
ಧ್ವಜಾರವಿಂದಾಂಕುಶ-ವಜ್ರ-ಲಾಂಛನಂ ।
ತ್ರಿವಿಕ್ರಮ ತ್ವಚ್ಚರಣಾಂಬುಜ-ದ್ವಯಂ
ಮದೀಯಮೂರ್ಧಾನಮಲಂಕರಿಷ್ಯತಿ ॥ ೩೧ ॥

ವಿರಾಜಮಾನೋಜ್ಜ್ವಲ-ಪೀತವಾಸಸಂ
ಸ್ಮಿತಾತಸೀಸೂನ-ಸಮಾಮಲಚ್ಛವಿಮ್ ।
ನಿಮಗ್ನನಾಭಿಂ ತನುಮಧ್ಯಮುನ್ನತಂ
ವಿಶಾಲ-ವಕ್ಷಸ್ಸ್ಥಳ-ಶೋಭಿ-ಲಕ್ಷಣಮ್ ॥ ೩೨ ॥

ಚಕಾಸತಂ ಜ್ಯಾಕಿಣ-ಕರ್ಕಶೈಶ್ಶುಭೈ-
ಶ್ಚತುರ್ಭಿರಾಜಾನು-ವಿಲಂಬಿಭಿರ್ಭುಜೈಃ ।
ಪ್ರಿಯಾವತಂಸೋತ್ಪಲ-ಕರ್ಣಭೂಷಣ-
ಶ್ಲಥಾಲಕಾಬಂಧ-ವಿಮರ್ದ-ಶಂಸಿಭಿಃ ॥ ೩೩ ॥

೨೮. ಯಾವನೇ ಆಗಲಿ, ಯಾವಾಗಲೇ ಆಗಲಿ, ಯಾವ ರೀತಿಯಲ್ಲಾಗಲಿ, ನಿನ್ನ ಪಾದವನ್ನು ಉದ್ದೇಶಿಸಿ ಒಂದು ಸಲ ಕೈಜೋಡಿಸಿದರೆ, ತತ್ಕ್ಷಣವೇ ಅವನ ಅಶುಭಗಳು ನಿಶ್ಶೇಷವಾಗಿ ನಾಶವಾಗಿ, ಶುಭವು ಉಂಟಾಗುತ್ತದೆ; ಅದು ಎಂದಿಗೂ ವಿಫಲವಾಗುವುದಿಲ್ಲ.

೨೯. ನಿನ್ನ ಚರಣಾಂಬುಜಗಳೆರಡರ ಅನುರಾಗವೆಂಬ ಅಮೃತಸಿಂಧುವಿನ ಒಂದು ಹನಿಯು ಉರಿಯುತ್ತಿರುವ ಸಂಸಾರವೆಂಬ ಕಾಡ್ಗಿಚ್ಚನ್ನು ಒಂದೇ ಕ್ಷಣದಲ್ಲಿ ಆರಿಸಿ, ಪರಮಾನಂದವನ್ನು ಕೊಡುತ್ತದೆ.

೩೦. ಲೀಲೆಯಿಂದ ಲೋಕಗಳನ್ನೆಲ್ಲಾ ಆಕ್ರಮಿಸಿದ, ನಮಿಸಿದವರ ದುಃಖವನ್ನು ಉತ್ತರಕ್ಷಣದಲ್ಲೇ ನಾಶಮಾಡುವ ನಿನ್ನ ಪಾದಪಂಕಜವೆಂಬ ನನ್ನ ಧನವನ್ನು ಯಾವಾಗ ನಾನು ನನ್ನ ಕಣ್ಣಿನಿಂದ ಸಾಕ್ಷಾತ್ಕರಿಸಬಲ್ಲೆನು?

೩೧. ತ್ರಿವಿಕ್ರಮ, ಶಂಖ, ಚಕ್ರ, ಕಲ್ಪವೃಕ್ಷ, ಧ್ವಜ, ಪದ್ಮ, ಅಂಕುಶ, ವಜ್ರಾಯುಧ ಮೊದಲಾದ ಚಿಹ್ನೆಗಳಿಂದ ಶೋಭಿಸುತ್ತಿರುವ ನಿನ್ನ ಚರಣಾಂಬುಜವು ಎಂದು ನನ್ನ ತಲೆಯನ್ನು ಅಲಂಕರಿಸುವುದು?

೩೨. ವಿರಾಜಮಾನವಾಗಿ ಉಜ್ವಲಿಸುತ್ತಿರುವ ಪೀತಾಂಬರ, ಅರಳಿದ ಅತಸೀ ಪುಷ್ಪದ ಹಾಗೆ ಅಮಲವಾದ ಕಾಂತಿ, ಆಳವಾದ ನಾಭಿ, ಕೃಶವಾದ ನಡು, ಉನ್ನತವಾದ ಆಕೃತಿ, ಶ್ರೀವತ್ಸವೆಂಬ ಚಿಹ್ನೆಯಿಂದ ಶೋಭಿಸುತ್ತಿರುವ ವಿಶಾಲವಾದ ವಕ್ಷಸ್ಥಳ.

೩೩. ಬಿಲ್ಲಿನ ಹೆದೆಯು ಸೋಂಕಿನಿಂದ ಜಿಡ್ಡುಕಟ್ಟಿ ಒರಟಾದ ಮತ್ತು ಪ್ರಿಯೆಯ ಕರ್ಣಭೂಷಣವಾದ ಕನ್ನೈದಿಲೆ, ಓಲೆ ಮುಂತಾದ ಆಭರಣಗಳು, ಸಡಿಲವಾದ ಮುಂಗುರುಳುಗಳು-ಇವುಗಳ ಕೋಮಲ ಸ್ಪರ್ಶವನ್ನು ಸೂಚಿಸುವ ಆಜಾನುವಾದ ಭುಜಲಕ್ಷಣಗಳಿಂದ ಕೂಡಿದ ಚತುರ್ಭಾಹುಗಳು.

ಉದಗ್ರ-ಪೀನಾಂಸ-ವಿಲಂಬಿ-ಕುಂಡಲಾ-
ಲಕಾವಳೀ-ಬಂಧುರ-ಕಂಬು-ಕಂಧರಂ ॥
ಮುಖಶ್ರಿಯಾ ನ್ಯಕ್ಕೃತ-ಪೂರ್ಣ-ನಿರ್ಮಲಾ-
ಮೃತಾಂಶು-ಬಿಂಬಾಬುರುಹೋಜ್ಜ್ವಲ-ಶ್ರಿಯಮ್ ॥ ೩೪ ॥

ಪ್ರಬುದ್ಧ-ಮುಗ್ಧಾಂಬುಜ-ಚಾರುಲೋಚನಂ
ಸವಿಭ್ರಮ-ಭ್ರೂಲತಮುಜ್ಜ್ವಲಾಧರಮ್ ।
ಶುಚಿಸ್ಮಿತಂ ಕೋಮಲ-ಗಂಡಮುನ್ನಸಂ
ಲಲಾಟ-ಪರ್ಯಂತ-ವಿಲಂಬಿತಾಲಕಮ್ ॥ ೩೫ ॥

ಸ್ಫುರತ್-ಕಿರೀಟಾಂಗದ-ಹಾರ-ಕಂಠಿಕಾ-
ಮಣೀಂದ್ರ-ಕಾಂಚೀಗುಣ-ನೂಪುರಾದಿಭಿಃ ।
ರಥಾಂಗ-ಶಂಖಾಸಿ-ಗದಾ-ಧನುರ್ವರೈ-
ರ್ಲಸತ್ತುಲಸ್ಯಾ ವನಮಾಲಯೋಜ್ಜ್ವಲಮ್ ॥ ೩೬ ॥

ಚಕರ್ಥ ಯಸ್ಯಾ ಭವನಂ ಭುಜಾಂತರಂ
ತವ ಪ್ರಿಯಂ ಧಾಮ ಯದೀಯಜನ್ಮಭೂಃ ।
ಜಗತ್ಸಮಸ್ತಂ ಯದಪಾಂಗ-ಸಂಶ್ರಯಂ
ಯದರ್ಥಮಂಭೋಧಿರಮನ್ಥ್ಯಬಂಧಿ ಚ ॥ ೩೭ ॥

ಸ್ವವೈಶ್ವರೂಪ್ಯೇಣ ಸದಾನುಭೂತಯಾ-
ಪ್ಯಪೂರ್ವವದ್ವಿಸ್ಮಯಮಾದಧಾನಯಾ ।
ಗುಣೇನ ರೂಪೇಣ ವಿಲಾಸ-ಚೇಷ್ಟಿತೈ-
ಸ್ಸದಾ ತವೈವೋಚಿತಯಾ ತವ ಶ್ರಿಯಾ ॥ ೩೮ ॥

೩೪. ಎತ್ತರವಾದ ಮತ್ತು ಪುಷ್ಟವಾದ ಭುಜಗಳ ಮೇಲೆ ಜೋಲಾಡು ತ್ತಿರುವ ಮುಂಗುರುಳುಗಳು ಮತ್ತು ಕುಂಡಲಗಳು ಶಂಖದ ಹಾಗೆ ಇರುವ ನಿನ್ನ ಕುತ್ತಿಗೆಯನ್ನು ಅಲಂಕರಿಸಿವೆ; ನಿನ್ನ ಮುಖಕಾಂತಿಯು ನಿರ್ಮಲವಾದ ಚಂದ್ರಬಿಂಬದ ಮತ್ತು ಕಮಲದ ಉಜ್ವಲಕಾಂತಿ ಯನ್ನು ಧಿಕ್ಕರಿಸಿದೆ.

೩೫. ಅರಳಿದ ಕಮಲದಂತಿರುವ ಸುಂದರವಾದ ಕಣ್ಣುಗಳು, ವಿಭ್ರಮ ಯುಕ್ತವಾದ ಹುಬ್ಬಿನ ಲತೆ, ಉಜ್ವಲವಾದ ಕೆಳದುಟಿ, ಪವಿತ್ರವಾದ ನಗು, ಕೋಮಲವಾದ ಕೆನ್ನೆಗಳು, ಉನ್ನತವಾದ ಮೂಗು, ಲಲಾಟದ ವರೆಗೂ ಹರಡಿರುವ ಮುಂಗುರುಳು.

೩೬. ಹೊಳೆಯುತ್ತಿರುವ ಕಿರೀಟ, ತೋಳ್ಬಳೆಗಳು, ಮುತ್ತಿನಹಾರ, ಕಂರಿಕೆ, ಕೌಸ್ತುಭಮಣಿ, ನಡುಕಟ್ಟು, ನೂಪುರಗಳು ಮತ್ತು ಶಂಖ, ಚಕ್ರ, ಖಡ್ಗ, ಗದೆ, ಉತ್ತಮವಾದ ಶಾರ್ಙ್ಗವೆಂಬ ಬಿಲ್ಲು, ಪ್ರಕಾಶಮಾನ ವಾದ ತುಲಸಿಯಿಂದ ಕೂಡಿದ ವನಮಾಲೆ-ಇವುಗಳಿಂದ ಪ್ರಕಾಶಿಸು ತ್ತಿದ್ದೀಯೆ.

೩೭. ಯಾವ ಲಕ್ಷ್ಮೀದೇವಿಗೆ ನಿನ್ನ ವಕ್ಷಸ್ಥಳವನ್ನೇ ಮನೆಯಾಗಿ ಮಾಡಿ ದ್ದೀಯೋ, ಯಾರು ಹುಟ್ಟಿದ ಕಡಲು ನಿನ್ನ ಪ್ರಿಯಸ್ಥಾನವಾಗಿದೆಯೋ, ಯಾರ ಕುಡಿನೋಟವನ್ನೇ ಜಗತ್ತೆಲ್ಲಾ ಆಶ್ರಯಿಸಿದೆಯೋ, ಯಾರಿ ಗೋಸ್ಕರ ಕ್ಷೀರಸಮುದ್ರವು ಕಡೆಯಲ್ಪಟ್ಟಿತೋ ಮತ್ತು ಸಮುದ್ರದ ಮೇಲೆ ಸೇತುವೆ ಕಟ್ಟಲ್ಪಟ್ಟಿತೋ—

೩೮. ಯಾವ ಶ್ರೀದೇವಿಯು ತನ್ನ ವಿಶ್ವರೂಪದಿಂದ ನಿನ್ನಲ್ಲಿ ಯಾವಾಗಲೂ ಸೇರಿಕೊಂಡಿದ್ದರೂ ಪ್ರತಿಕ್ಷಣದಲ್ಲಿಯೂ ಹಿಂದೆಂದೂ ಕಂಡಿಲ್ಲದ ವಿಸ್ಮಯವನ್ನು ಉಂಟುಮಾಡುತ್ತಿರುವಳೋ, ಯಾರು ತನ್ನ ಗುಣ ರೂಪ ವಿಲಾಸ ಲೀಲೆಗಳಿಂದ ಯಾವಾಗಲೂ ನಿನಗೆ ಉಚಿತವಾಗಿರು ವಳೋ –

ತಯಾ ಸಹಾಸೀನಮನಂತಭೋಗಿನಿ
ಪ್ರಕೃಷ್ಟ-ವಿಜ್ಞಾನ-ಬಲೈಕಧಾಮನಿ ।
ಫಣಾಮಣಿ-ವ್ರಾತ-ಮಯೂಖ-ಮಂಡಲ-
ಪ್ರಕಾಶಮಾನೋದರ-ದಿವ್ಯ-ಧಾಮನಿ ॥ ೩೯ ॥

ನಿವಾಸ-ಶಯ್ಯಾಸನ-ಪಾದುಕಾಂಶು ಕೋ-
ಪಧಾನ-ವರ್ಷಾತಪ-ವಾರಣಾದಿಭಿಃ ।
ಶರೀರಭೇದೈಸ್ತವ ಶೇಷತಾಂ ಗತೈ-
ರ್ಯಥೋಚಿತಂ ಶೇಷ ಇತೀರಿತೇ ಜನೈಃ ॥ ೪೦ ॥

ದಾಸಸ್ಸಖಾ ವಾಹನಮಾಸನಂ ಧ್ವಜೋ
ಯಸ್ತೇ ವಿತಾನಂ ವ್ಯಜನಂ ತ್ರಯೀಮಯಃ ।
ಉಪಸ್ಥಿತಂ ತೇನ ಪುರೋ ಗರುತ್ಮತಾ
ತ್ವದಂಘ್ರಿ-ಸಂಮರ್ದ-ಕಿಣಾಂಕ-ಶೋಭಿನಾ ॥ ೪೧ ॥

ತ್ವದೀಯ-ಭುಕ್ತೋಜ್ಝಿತ-ಶೇಷಭೋಜಿನಾ
ತ್ವಯಾ ನಿಸೃಷ್ಟಾತ್ಮ-ಭರೇಣ ಯದ್ಯಥಾ ।
ಪ್ರಿಯೇಣ ಸೇನಾಪತಿನಾ ನ್ಯವೇದಿ ತ-
ತ್ತಥಾಽನುಜಾನಂತಮುದಾರ-ವೀಕ್ಷಣೈಃ ॥ ೪೨ ॥

ಹತಾಖಿಲ-ಕ್ಲೇಶ-ಮಲೈಃ ಸ್ವಭಾವತ-
ಸ್ತ್ವದಾನುಕೂಲ್ಯೈಕ-ರಸೈಸ್ತವೋಚಿತೈಃ ।
ಗೃಹೀತ-ತತ್ತತ್ಪರಿಚಾರ-ಸಾಧನೈ-
ರ್ನಿಷೇವ್ಯಮಾಣಂ ಸಚಿವೈರ್ಯಥೋಚಿತಮ್ ॥ ೪೩ ॥

ಅಪೂರ್ವ-ನಾನಾ-ರಸ-ಭಾವ-ನಿರ್ಭರ-
ಪ್ರಬದ್ಧಯಾ ಮುಗ್ಧ-ವಿದಗ್ಧ-ಲೀಲಯಾ ।
ಕ್ಷಣಾಣುವತ್ಕ್ಷಿಪ್ತಪರಾದಿ-ಕಾಲಯಾ
ಪ್ರಹರ್ಷಯಂತಂ ಮಹಿಷೀಂ ಮಹಾಭುಜಮ್ ॥ ೪೪ ॥

೩೯. ಅಂತಹ ಶ್ರೀದೇವಿಯೊಂದಿಗೆ ಶ್ರೇಷ್ಠವಾದ ಜ್ಞಾನಕ್ಕೂ ಮತ್ತು ಶಕ್ತಿಗೂ ಏಕಾಶ್ರಯನಾದ, ತನ್ನ ಫಣಾಮಣಿಸಮೂಹದ ಕಿರಣಗಳ ಮಂಡಲ ದಿಂದ ವೈಕುಂಠವನ್ನು ಪ್ರಕಾಶಿಸುತ್ತಿರುವ ಅನಂತನ ಮೇಲೆ ಆಸೀನ ನಾಗಿರುವೆ.

೪೦. ಅನಂತನು ತನ್ನ ಶರೀರಭೇದಗಳಿಂದ ನಿವಾಸ, ಹಾಸಿಗೆ, ಆಸನ, ಪಾದುಕೆ, ಬಟ್ಟೆ, ದಿಂಬು, ಮಳೆಬಿಸಿಲುಗಳನ್ನು ತಡೆಯಲು ಛತ್ರಿ ಮುಂತಾದವುಗಳಾಗಿ ಶೇಷವೃತ್ತಿಯನ್ನು ಹೊಂದಿರುತ್ತಾನೆ; ಆದುದ ರಿಂದ ಭಕ್ತರು ಅವನನ್ನು ಶೇಷನೆಂದು ಕರೆಯುವುದು ಉಚಿತ.

೪೧. ನಿನ್ನ ಪಾದಮರ್ದನದ ಚಿಹ್ನೆಯಿಂದ ಶೋಭಿಸುತ್ತಿರುವ ವೇದಾತ್ಮ ನಾದ ಗರುಡನು ದಾಸ, ಸಖ, ವಾಹನ, ಆಸನ, ಧ್ವಜ, ವಿತಾನ, ಬೀಸಣಿಗೆ ಮುಂತಾದವುಗಳಾಗಿ ನಿನ್ನ ಮುಂದೆ ನಿಂತಿರುತ್ತಾನೆ.

೪೨. ನಿನ್ನ ಪ್ರಸಾದವನ್ನೇ ಭುಜಿಸುವ, ನಿನ್ನ ಕಾರ್ಯಭಾರವನ್ನು ಹೊತ್ತಿರುವ ನಿನಗೆ ಪ್ರಿಯನಾದ ಸೇನಾಪತಿ (ವಿಷ್ವಕ್ಸೇನನು ನಿನ್ನ ಸಮೀಪದಲ್ಲಿರು ವನು); ಅವನಿಂದ ಯಾವುದು ಹೇಗೆ ಅರಿಕೆಮಾಡಲ್ಪಟ್ಟಿತೋ ಅದ ನ್ನೆಲ್ಲಾ ಹಾಗೆಯೇ ನಿನ್ನ ಉದಾರವಾದ ಕಟಾಕ್ಷದಿಂದ ಅನುಮೋದಿಸು ತ್ತಿರುವೆ.

೪೩. ಕ್ಲೇಶಮಲಗಳನ್ನೆಲ್ಲಾ ಸ್ವಾಭಾವಿಕವಾಗಿಯೇ ಕಳೆದುಕೊಂಡಿರುವ, ನಿನಗೆ ಅನುಕೂಲವಾದ ಸೇವೆಯಲ್ಲೇ ಆಸಕ್ತರಾದ, ನಿನಗೆ ಯೋಗ್ಯ ರಾದ ಮತ್ತು ಪರಿಚಾರಸಾಧನಗಳನ್ನು ಹಿಡಿದುಕೊಂಡಿರುವ ಸಚಿವ ರಾದ (ನಿತ್ಯಸೂರಿಗಳಿಂದ) ಯಥೋಚಿತವಾಗಿ ಸೇವಿಸಲ್ಪಡುತ್ತಿರುವೆ.

೪೪. ಅಪೂರ್ವವಾದ ನಾನಾ ರಸಭಾವಗಳಿಂದ ತುಂಬಿರುವ, ಚತುರ್ಮುಖ ಬ್ರಹ್ಮರ ಕಾಲವನ್ನು ಕೂಡ ಒಂದು ಕ್ಷಣದ ಅತ್ಯಲ್ಪಭಾಗದಂತೆ ಕಳೆ ಯಿಸುವ ಮುಗ್ಧ-ಪ್ರೌಢಲೀಲೆಗಳಿಂದ ನಿನ್ನ ದಿವ್ಯಮಹಿಷಿಯಾದ ಶ್ರೀ ದೇವಿಯನ್ನು ಮಹಾಭುಜನಾದ ನೀನು ಹರ್ಷಗೊಳಿಸುತ್ತಿರುವೆ.

ಅಚಿಂತ್ಯ-ದಿವ್ಯಾದ್ಭುತ-ನಿತ್ಯ-ಯೌವನ-
ಸ್ವಭಾವ-ಲಾವಣ್ಯಮಯಾಮೃತೋದಧಿಮ್ ।
ಶ್ರಿಯಃ ಶ್ರಿಯಂ ಭಕ್ತ-ಜನೈಕ-ಜೀವಿತಂ
ಸಮರ್ಥಮಾಪತ್ಸಖಮರ್ಥಿಕಲ್ಪಕಮ್ ॥ ೪೫ ॥

ಭವಂತಮೇವಾನುಚರನ್ನಿರಂತರಂ
ಪ್ರಶಾಂತ-ನಿಶ್ಶೇಷ-ಮನೋರಥಾಂತರಃ ।
ಕದಾಹಮೈಕಾಂತಿಕ-ನಿತ್ಯಕಿಂಕರಃ
ಪ್ರಹರ್ಷಯಿಷ್ಯಾಮಿ ಸನಾಥ-ಜೀವಿತಃ ॥ ೪೬ ॥

ಧಿಗಶುಚಿಮವಿನೀತಂ ನಿರ್ಭಯಂ ಮಾಮಲಜ್ಜಂ
ಪರಮಪುರುಷ ಯೋಽಹಂ ಯೋಗಿವರ್ಯಾಗ್ರಗಣ್ಯೈಃ ।
ವಿಧಿ-ಶಿವ-ಸನಕಾದ್ಯೈರ್ಧ್ಯಾತುಮತ್ಯಂತದೂರಂ
ತವ ಪರಿಜನಭಾವಂ ಕಾಮಯೇ ಕಾಮವೃತ್ತಃ ॥ ೪೭ ॥

ಅಪರಾಧ-ಸಹಸ್ರ-ಭಾಜನಂ
ಪತಿತಂ ಭೀಮ-ಭವಾರ್ಣವೋದರೇ ।
ಅಗತಿಂ ಶರಣಾಗತಂ ಹರೇ
ಕೃಪಯಾ ಕೇವಲಮಾತ್ಮಸಾತ್ಕುರು ॥ ೪೮ ॥

ಅವಿವೇಕ-ಘನಾಂಧ-ದಿಙ್ಮುಖೇ
ಬಹುಧಾ ಸಂತತ-ದುಃಖ-ವರ್ಷಿಣಿ ।
ಭಗವನ್ ಭವ-ದುರ್ದಿನೇ ಪಥಃ
ಸ್ಖಲಿತಂ ಮಾಮವಲೋಕಯಾಚ್ಯುತ ॥ ೪೯ ॥

ನ ಮೃಷಾ ಪರಮಾರ್ಥಮೇವ ಮೇ
ಶೃಣು ವಿಜ್ಞಾಪನಮೇಕಮಗ್ರತಃ ।
ಯದಿ ಮೇ ನ ದಯಿಷ್ಯಸೇ ತತೋ
ದಯನೀಯಸ್ತವ ನಾಥ ದುರ್ಲಭಃ ॥ ೫೦ ॥

೪೫. ಯೋಚಿಸಲಾಗದ ದಿವ್ಯವಾದ ಅದ್ಭುತವಾದ ನಿತ್ಯಯೌವನಸ್ವಭಾವವುಳ್ಳ ಲಾವಣ್ಯಮಯವಾದ ಅಮೃತಸಮುದ್ರನು ನೀನು; ನೀನು ಶ್ರೀದೇವಿಗೂ ಶ್ರೀಯಾದವನು, ಭಕ್ತರಿಗೆ ಏಕಜೀವನನು, ಸಮರ್ಥನು, ಆಪತ್ಕಾಲದಲ್ಲಿ ಸಖನು ಮತ್ತು ಬೇಡುವವರಿಗೆ ಕಲ್ಪತರು.

೪೬. ಯಾವಾಗಲೂ ನಿನ್ನನ್ನೇ ಸೇವಿಸುತ್ತಾ, ಮನೋರಥಗಳನ್ನೆಲ್ಲಾ ನಿಶ್ಶೇಷವಾಗಿ ಅಡಗಿಸಿ, ನಿನ್ನ ಏಕಾಂತಕಿಂಕರನಾಗಿ, ಸನಾಥಜೀವಿತನಾಗಿ ನಿನ್ನನ್ನು ಯಾವಾಗ ಹರ್ಷಗೊಳಿಸುವೆನು?

೪೭. ಪರಮಪುರುಷ, ಅಶುಚಿಯೂ, ಅವಿನೀತನೂ, ನಿರ್ಭಯನೂ, ನಿರ್ಲಜ್ಜನೂ ಆದ ನನಗೆ ಧಿಕ್ಕಾರ! ಯೋಗಿವರ್ಯರಲ್ಲಿ ಅಗ್ರಗಣ್ಯರಾದ ಬ್ರಹ್ಮಾದಿಗಳ ಯೋಚನೆಗೂ ಅತ್ಯಂತದೂರವಾದ ನಿನ್ನ ಕೈಂಕರ್ಯಭಾವವನ್ನು ಅಪೇಕ್ಷಿಸುತ್ತಿದ್ದೇನೆ!

೪೮. ಹರಿ, ಸಾವಿರಾರು ಅಪರಾಧಗಳಿಗೆ ಆಶ್ರಯನೂ, ಭಯಂಕರವಾದ ಸಂಸಾರಸಮುದ್ರದಲ್ಲಿ ಬಿದ್ದವನೂ, ಗತಿಯಿಲ್ಲದವನೂ, ಶರಣಾಗತನೂ ಆದ ನನ್ನನ್ನು ಕೇವಲ ಕೃಪೆಯಿಂದ ನಿನ್ನವನನ್ನಾಗಿ ಮಾಡು.

೪೯. ಅಚ್ಯುತ, ಸಂಸಾರವೆಂಬ ದುರ್ದಿನದಲ್ಲಿ ಅವಿವೇಕವೆಂಬ ಮೋಡಗಳು ದಿಕ್ಕುಗಳನ್ನು ಕತ್ತಲೆಮಾಡಿ ಅನೇಕ ಬಗೆಯಿಂದ ದುಃಖವೆಂಬ ಮಳೆಯನ್ನು ಎಡೆಬಿಡದೆ ಸುರಿಸುತ್ತಿರುವಾಗ ದಾರಿತಪ್ಪಿರುವ ನನ್ನನ್ನು ನೋಡು.

೫೦. ನಾಥ, ನನ್ನ ಒಂದು ಬಿನ್ನಹವನ್ನು ಕೇಳು; ಅದು ಸಟೆಯಲ್ಲ, ಸತ್ಯವಾದದ್ದು; ನೀನು ನನ್ನಲ್ಲಿ ದಯೆಯನ್ನು ತೋರಿಸದಿದ್ದರೆ, ನಿನ್ನ ದಯೆಗೆ ಸರಿಯಾದ ಪಾತ್ರವು ದೊರಕುವುದೇ ದುರ್ಲಭವಾಗುತ್ತದೆ.

ತದಹಂ ತ್ವದೃತೇ ನ ನಾಥವಾನ್
ಮದೃತೇ ತ್ವಂ ದಯನೀಯವಾನ್ನ ಚ ।
ವಿಧಿ-ನಿರ್ಮಿತಮೇತಮನ್ವಯಂ
ಭಗವನ್ ಪಾಲಯ ಮಾ ಸ್ಮ ಜೀಹಪಃ ॥ ೫೧ ॥

ವಪುರಾದಿಷು ಯೋಽಪಿ ಕೋಽಪಿ ವಾ
ಗುಣತೋಽಸಾನಿ ಯಥಾತಥಾವಿಧಃ ।
ತದಯಂ ತವ ಪಾದಪದ್ಮಯೋ-
ರಹಮದ್ಯೈವ ಮಯಾ ಸಮರ್ಪಿತಃ ॥ ೫೨ ॥

ಮಮ ನಾಥ ಯದಸ್ತಿ ಯೋಽಸ್ಮ್ಯಹಂ
ಸಕಲಂ ತದ್ಧಿ ತವೈವ ಮಾಧವ ।
ನಿಯತಸ್ವಮಿತಿ ಪ್ರಬುದ್ಧಧೀ-
ರಥವಾ ಕಿಂ ನು ಸಮರ್ಪಯಾಮಿ ತೇ ॥ ೫೩ ॥

ಅವಬೋಧಿತವಾನಿಮಾಂ ಯಥಾ
ಮಯಿ ನಿತ್ಯಾಂ ಭವದೀಯತಾಂ ಸ್ವಯಮ್ ।
ಕೃಪಯೈವಮನನ್ಯ-ಭೋಗ್ಯತಾಂ
ಭಗವನ್ ಭಕ್ತಿಮಪಿ ಪ್ರಯಚ್ಛ ಮೇ ॥ ೫೪ ॥

ತವ ದಾಸ್ಯ-ಸುಖೈಕ-ಸಂಗಿನಾಂ
ಭವನೇಷ್ವಸ್ತ್ವಪಿ ಕೀಟಜನ್ಮ ಮೇ ।
ಇತರಾವಸಥೇಷು ಮಾ ಸ್ಮ ಭೂ-
ದಪಿ ಮೇ ಜನ್ಮ ಚತುರ್ಮುಖಾತ್ಮನಾ ॥ ೫೫ ॥

ಸಕೃತ್ತ್ವದಾಕಾರ-ವಿಲೋಕನಾಶಯಾ
ತೃಣೀಕೃತಾನುತ್ತಮ-ಭುಕ್ತಿ-ಮುಕ್ತಿಭಿಃ ।
ಮಹಾತ್ಮಭಿರ್ಮಾಮವಲೋಕ್ಯತಾಂ ನಯ
ಕ್ಷಣೇಽಪಿ ತೇ ಯದ್ವಿರಹೋಽತಿದುಸ್ಸಹಃ ॥ ೫೬ ॥

೫೧. ಆದುದರಿಂದ ನಿನ್ನನ್ನು ಬಿಟ್ಟರೆ ನನಗೆ ಒಡೆಯನಿಲ್ಲ, ನನ್ನನ್ನು ಬಿಟ್ಟರೆ ನಿನ್ನ ದಯೆಗೆ ಸರಿಯಾದ ಪಾತ್ರನಿಲ್ಲ; ವಿಧಿಯಿಂದ ನಿರ್ಮಿತವಾದ ನಮ್ಮ ಸಂಬಂಧವನ್ನು ಪಾಲಿಸು; ಮುರಿಯಬೇಡ.

೫೨. ಶರೀರ ಮೊದಲಾದವುಗಳಲ್ಲಾಗಲೀ ಗುಣಗಳಲ್ಲಾಗಲೀ ನಾನು ಯಾವ ರೀತಿಯಲ್ಲಾದರೂ ಇರುವೆನು; ಆದರೆ ಈ 'ನಾನು' ಎಂಬ ವಸ್ತುವನ್ನು ಈಗಲೇ ನಿನ್ನ ಪಾದಪದ್ಮದಲ್ಲಿ ಅರ್ಪಿಸುತ್ತೇನೆ.

೫೩. ನನ್ನ ಒಡೆಯನೇ, ನನಗೆ ಏನಿದೆಯೋ, ನಾನು ಏನಾಗಿದ್ದೇನೆಯೋ ಅವೆಲ್ಲವೂ ನಿನ್ನ ಸ್ವತ್ತೇ ಎಂಬ ಜ್ಞಾನವು ಉಂಟಾಗಿರುವಾಗ ನಾನು ನಿನಗೆ ಏನನ್ನು ಸಮರ್ಪಿಸಬಲ್ಲೆನು?

೫೪. ಭಗವಂತನೇ, 'ನಾನು ಯಾವಾಗಲೂ ನಿನಗೆ ಸೇರಿದವನು' ಎಂಬ ಜ್ಞಾನವನ್ನು ನನ್ನಲ್ಲಿ ಹೇಗೆ ಉಂಟುಮಾಡಿದ್ದೀಯೋ ಹಾಗೆಯೇ ಕೃಪೆ ಯಿಂದ ಅನನ್ಯಭೋಗ್ಯವಾದ ಭಕ್ತಿಯನ್ನೂ ಕೊಡು.

೫೫. ನಿನ್ನ ದಾಸ್ಯವೊಂದರಿಂದಲೇ ಸುಖವನ್ನು ಹೊಂದುವ ಭಕ್ತರ ಮನೆ ಗಳಲ್ಲಿ ನನಗೆ ಕೀಟಜನ್ಮವಾದರೂ ಉಂಟಾಗಲಿ; ಇತರರ ಮನೆಗಳಲ್ಲಿ ಚತುರ್ಮುಖಬ್ರಹ್ಮನ ಜನ್ಮವೂ ಬೇಡ.

೫೬. ನಿನ್ನ ದಿವ್ಯಮಂಗಳ ರೂಪವನ್ನು ಒಂದು ಸಲವಾದರೂ ನೋಡುವ ಆಸೆಯಿಂದ ಅತ್ಯುತ್ತಮವಾದ ಭುಕ್ತಿಮುಕ್ತಿಗಳನ್ನು ತೃಣದಂತೆ ಯಾರು ಎಣಿಸಿರುವರೋ, ಯಾರ ವಿರಹವನ್ನು ಒಂದು ಕ್ಷಣ ಸಹಿಸಲು ನಿನಗೆ ಕಷ್ಟವಾಗಿರುವುದೋ, ಅಂತಹ ಮಹಾತ್ಮರ ದೃಷ್ಟಿಗೆ ನಾನು ಬರು ವಂತೆ ಮಾಡು.

ನ ದೇಹಂ ನ ಪ್ರಾಣಾನ್ನ ಚ ಸುಖಮಶೇಷಾಭಿಲಷಿತಂ
ನ ಚಾತ್ಮಾನಂ ನಾನ್ಯತ್ಕಿಮಪಿ ತವ ಶೇಷತ್ವ-ವಿಭವಾತ್ ।
ಬಹಿರ್ಭೂತಂ ನಾಥ ಕ್ಷಣಮಪಿ ಸಹೇ ಯಾತು ಶತಧಾ
ವಿನಾಶಂ ತತ್ಸತ್ಯಂ ಮಧುಮಥನ ವಿಜ್ಞಾಪನಮಿದಮ್ ॥ ೫೭ ॥

ದುರಂತಸ್ಯಾನಾದೇರಪರಿಹರಣೀಯಸ್ಯ ಮಹತೋ
ನಿಹೀನಾಚಾರೋಽಹಂ ನೃಪಶುರಶುಭಸ್ಯಾಸ್ಪದಮಪಿ ।
ದಯಾಸಿಂಧೋ ಬಂಧೋ ನಿರವಧಿಕ-ವಾತ್ಸಲ್ಯ-ಜಲಧೇ
ತವ ಸ್ಮಾರಂಸ್ಮಾರಂ ಗುಣಗಣಮಿತೀಚ್ಛಾಮಿ ಗತಭೀಃ ॥ ೫೮ ॥

ಪಿತಾ ತ್ವಂ ಮಾತಾಂ ತ್ವಂ ದಯಿತ-ತನಯಸ್ತ್ವಂ ಪ್ರಿಯಸುಹೃ-
ತ್ತ್ವಮೇವ ತ್ವಂ ಮಿತ್ರಂ ಗುರುರಸಿ ಗತಿಶ್ಚಾಸಿ ಜಗತಾಮ್ ।
ತ್ವದೀಯಸ್ತ್ವದ್ಭೃತ್ಯಸ್ತವ ಪರಿಜನಸ್ತ್ವದ್ಗತಿರಹಂ
ಪ್ರಪನ್ನಶ್ಚೈವಂ ಸತ್ಯಹಮಪಿ ತವೈವಾಸ್ಮಿ ಹಿ ಭರಃ ॥ ೫೯ ॥

ಜನಿತ್ವಾಽಹಂ ವಂಶೇ ಮಹತಿ ಜಗತಿ ಖ್ಯಾತಯಶಸಾಂ
ಶುಚೀನಾಂ ಯುಕ್ತಾನಾಂ ಗುಣ-ಪುರುಷ-ತತ್ತ್ವಸ್ಥಿತಿವಿದಾಮ್।
ನಿಸರ್ಗಾದೇವ ತ್ವಚ್ಚರಣ-ಕಮಲೈಕಾಂತ-ಮನಸಾ-
ಮಧೋಽಧಃ ಪಾಪಾತ್ಮಾ ಶರಣದ ನಿಮಜ್ಜಾಮಿ ತಮಸಿ ॥ ೬೦ ॥

ಅಮರ್ಯಾದಃ ಕ್ಷುದ್ರಶ್ಚಲಮತಿರಸೂಯಾ-ಪ್ರಸವಭೂಃ
ಕೃತಘ್ನೋ ದುರ್ಮಾನೀ ಸ್ಮರಪರವಶೋ ವಂಚನಪರಃ ।
ನೃಶಂಸಃ ಪಾಪಿಷ್ಠಃ ಕಥಮಹಮಿತೋ ದುಃಖಜಲಧೇ-
ರಪಾರಾದುತ್ತೀರ್ಣಸ್ತವ ಪರಿಚರೇಯಂ ಚರಣಯೋಃ ॥ ೬೧ ॥

೫೭. ದೇಹವಾಗಲೀ, ಪ್ರಾಣವಾಗಲೀ, ಎಲ್ಲರೂ ಅಪೇಕ್ಷಿಸುವ ಸುಖವಾಗಲೀ, ಆತ್ಮವೇ ಆಗಲೀ–ನಿನ್ನ ಸೇವೆಗಿಂತ ಹೊರಗಾದ ಯಾವುದೇ ಆಗಲೀ—ಅದನ್ನು ಒಂದು ಕ್ಷಣ ಮಾತ್ರ ಸಹಿಸಲಾರೆನು; ಅವೆಲ್ಲಾ ನಾಶವಾಗಲಿ; ಮಧುಸೂದನ, ಈ ಬಿನ್ನಹವು ಸತ್ಯ.

೫೮. ನಾನು ಹೀನಾಚಾರನು ಮತ್ತು ನರಪಶು; ದುರಂತವಾದ, ಅನಾದಿಯಾದ, ಪರಿಹಾರವಿಲ್ಲದ ಮಹಾ ಅಶುಭಕ್ಕೆ ಆಶ್ರಯನು; ದಯಾಸಿಂಧುವೇ, ಬಂಧುವೇ, ನಿರವಧಿಕ-ವಾತ್ಸಲ್ಯ-ಜಲಧಿಯೇ, ನಿನ್ನ ಕಲ್ಯಾಣಗುಣಗಳನ್ನು ಸ್ಮರಿಸುತ್ತಾ ಸ್ಮರಿಸುತ್ತಾ ನಿರ್ಭಯನಾಗಿ ಹೀಗೆ ಇಚ್ಛಿಸುತ್ತೇನೆ.

೫೯. ನೀನೆ ತಂದೆ, ತಾಯಿ, ಪ್ರೀತಿಯ ಪುತ್ರ, ಪ್ರಿಯಸುಹೃತ್ತು, ಮಿತ್ರ, ಗುರು ಮತ್ತು ಜಗತ್ತಿಗೆ ಗತಿ; ನಾನು ನಿನ್ನವನು, ನಿನ್ನ ಭೃತ್ಯ ಮತ್ತು ಪರಿಜನನು; ನಿನ್ನನ್ನೇ ಗತಿಯಾಗುಳ್ಳವನು; ನಾನು ಪ್ರಪನ್ನನಾಗಿದ್ದೇನೆ; ಹೀಗಿರುವಾಗ ನಾನು ಕೂಡ ನಿನಗೆ ಒಂದು ಭಾರವಾಗಿದ್ದೇನೆ.

೬೦. ಶರಣದಾಯಕನೇ, ಜಗತ್ತಿನಲ್ಲಿ ವಿಖ್ಯಾತವಾದ ಯಶಸ್ಸುಳ್ಳವರೂ, ಶುದ್ಧರೂ, ಮುಕ್ತರೂ, ಪ್ರಕೃತಿ-ಪುರುಷರ ತತ್ತ್ವಸ್ಥಿತಿಯನ್ನು ತಿಳಿದವರೂ, ಸ್ವಾಭಾವಿಕವಾಗಿಯೇ ನಿನ್ನ ಚರಣಕಮಲದಲ್ಲಿ ಏಕಾಂತ ಮನಸ್ಸುಳ್ಳವರೂ ಆದವರ ಶ್ರೇಷ್ಠ ವಂಶದಲ್ಲಿ ಹುಟ್ಟಿದ್ದರೂ, ಪಾಪಾತ್ಮನಾದ ನಾನು ತಮಸ್ಸಿನಲ್ಲಿ ಕೆಳಕೆಳಗೆ ಮುಳುಗುತ್ತಿದ್ದೇನೆ.

೬೧. ನಾನು ಮರ್ಯಾದೆಯನ್ನು ದಾಟಿದವನು, ಕ್ಷುದ್ರನು, ಚಂಚಲವಾದ ಮನಸ್ಸುಳ್ಳವನು, ಅಸೂಯೆಗೆ ತವರುಮನೆ, ಕೃತಘ್ನನು, ದುರಹಂಕಾರಿ, ಕಾಮುಕನು, ವಂಚನೆಯ ಸ್ವಭಾವವುಳ್ಳವನು, ಕ್ರೂರಿ ಮತ್ತು ಪಾಪಿಷ್ಠ; ಇಂತಹ ನಾನು ಅಪಾರವಾದ ದುಃಖಜಲಧಿಯನ್ನು ದಾಟಿ ನಿನ್ನ ಪಾದ ಸೇವೆಯನ್ನು ಹೇಗೆ ಮಾಡಬಲ್ಲೆನು?

ರಘುವರ ಯದಭೂಸ್ತ್ವಂ ತಾದೃಶೋ ವಾಯಸಸ್ಯ
ಪ್ರಣತ ಇತಿ ದಯಾಲುರ್ಯಚ್ಚ ಚೈದ್ಯಸ್ಯ ಕೃಷ್ಣ ।
ಪ್ರತಿಭವಮಪರಾದ್ಧುರ್ಮುಗ್ಧ ಸಾಯುಜ್ಯದೋಽಭೂ-
ರ್ವದ ಕಿಮಪದಮಾಗಸ್ತಸ್ಯತೇಽಸ್ತಿ ಕ್ಷಮಾಯಾಃ ॥ ೬೨ ॥

ನನು ಪ್ರಪನ್ನಸ್ಸಕೃದೇವ ನಾಥ
ತವಾಹಮಸ್ಮೀತಿ ಚ ಯಾಚಮಾನಃ ।
ತವಾನುಕಂಪ್ಯಸ್ಸ್ಮರತಃ ಪ್ರತಿಜ್ಞಾಂ
ಮದೇಕವರ್ಜಂ ಕಿಮಿದಂ ವ್ರತಂ ತೇ ॥ ೬೩ ॥

ಅಕೃತ್ರಿಮ-ತ್ವಚ್ಚರಣಾರವಿಂದ-
ಪ್ರೇಮ-ಪ್ರಕರ್ಷಾವಧಿಮಾತ್ಮವಂತಮ್ ।
ಪಿತಾಮಹಂ ನಾಥಮುನಿಂ ವಿಲೋಕ್ಯ
ಪ್ರಸೀದ ಮದ್ವೃತ್ತಮಚಿಂತಯಿತ್ವಾ ॥ ೬೪ ॥

೬೨. ರಘುವರ, ಶರಣಾಗತನಾದೆನೆಂದು ಅಂತಹ ಕಾಕಾಸುರನಿಗೆ ಕೂಡ ನೀನು ದಯೆಯನ್ನು ತೋರಿಸಿದೆ; ಕೃಷ್ಣ, ಪ್ರತಿಜನ್ಮದಲ್ಲಿಯೂ ನಿನಗೆ ಅಪರಾಧವನ್ನು ಮಾಡಿದ ಚೇದಿರಾಜನಾದ ಶಿಶುಪಾಲನಿಗೆ ನೀನು ಮುಗ್ಧನಂತೆ ಸಾಯುಜ್ಯವನ್ನು ಕೊಟ್ಟೆ; ಅಂತಹ ನಿನ್ನ ಕ್ಷಮೆಗೆ ಯೋಗ್ಯವಾಗದ ಪಾಪವೇನಾದರೂ ಉಂಟೆ? ಹೇಳು.

೬೩. ನಾಥ, 'ನಾನು ನಿನಗೆ ಸೇರಿದವನು' ಎಂದು ಒಂದೇ ಸಲ ಯಾಚಿಸುವ ಪ್ರಪನ್ನನು (ಶ್ರೀರಾಮಾವತಾರದ) ಪ್ರತಿಜ್ಞೆಯನ್ನು ಸ್ಮರಿಸುತ್ತಿರುವ ನಿನ್ನ ಅನುಕಂಪೆಗೆ ಪಾತ್ರನಾಗುತ್ತಾನೆ; ಜ್ಞಾಪಿಸಿಕೊಳ್ಳುವ ನಿನ್ನ (ಶರಣಾಗತರಕ್ಷಣೆಯೆಂಬ) ವ್ರತವು ನನ್ನೊಬ್ಬನಿಗೆ ಅನ್ವಯಿಸುವದಿಲ್ಲವೆ?

೬೪. ನಿನ್ನ ಚರಣಾರವಿಂದಗಳಲ್ಲಿರುವ ಅಕೃತ್ರಿಮವಾದ ಪ್ರೇಮೋತ್ಕೃಷ್ಟತೆಯ ಎಲ್ಲೆಯೂ, ಆತ್ಮವಂತನೂ ಆದ ನನ್ನ ತಾತ ನಾಥಮುನಿಯನ್ನು ನೋಡಿ, ನನ್ನ ನಡತೆಯನ್ನು ಯೋಚಿಸದೆ ನನ್ನಲ್ಲಿ ಪ್ರಸನ್ನನಾಗು.

# ಗದ್ಯತ್ರಯಮ್

ಪಿತರಂ ಮಾತರಂ ದಾರಾನ್ ಪುತ್ರಾನ್ ಬಂಧೂನ್ ಸಖೀನ್
ಗುರೂನ್ ।
ರತ್ನಾನಿ ಧನಧಾನ್ಯಾನಿ ಕ್ಷೇತ್ರಾಣಿ ಚ ಗೃಹಾಣಿ ಚ ॥
ಸರ್ವಧರ್ಮಾಂಶ್ಚ ಸಂತ್ಯಜ್ಯ ಸರ್ವಕಾಮಾಂಶ್ಚ ಸಾಕ್ಷರಾನ್ ।
ಲೋಕವಿಕ್ರಾಂತಚರಣೌ ಶರಣಂ ತೇಽವ್ರಜಂ ವಿಭೋ ॥ ೧ ॥

ತ್ವಮೇವ ಮಾತಾ ಚ ಪಿತಾ ತ್ವಮೇವ
ತ್ವಮೇವ ಬಂಧುಶ್ಚ ಗುರುಸ್ತ್ವಮೇವ ।
ತ್ವಮೇವ ವಿದ್ಯಾ ದ್ರವಿಣಂ ತ್ವಮೇವ
ತ್ವಮೇವ ಸರ್ವಂ ಮಮ ದೇವದೇವ ॥ ೨ ॥

ಶರಣಾಗತಿಗದ್ಯಮ್, ೬-೮

ಅಪಾರಕರುಣಾಂಬುಧೇ, ಅನಾಲೋಚಿತ-ವಿಶೇಷಾಶೇಷ-ಲೋಕಶ್ಯರಣ್ಯ, ಪ್ರಣತಾರ್ತಿಹರ, ಆಶ್ರಿತವಾತ್ಸಲ್ಯೈಕ-ಮಹೋದಧೇ, ಅನವರತ-ವಿದಿತ-ನಿಖಿಲ-ಭೂತಜಾತ-ಯಾಥಾತ್ಮ್ಯ, ಸತ್ಯಕಾಮ, ಸತ್ಯಸಂಕಲ್ಪ, ಆಪತ್ಸಖ, ಕಾಕುತ್ಸ್ಥ, ಶ್ರೀಮನ್ನಾರಾಯಣ, ಪುರುಷೋತ್ತಮ, ಶ್ರೀರಂಗನಾಥ, ಮಮನಾಥ, ನಮೋಽಸ್ತುತೇ ॥ ೩ ॥

ಶ್ರೀರಂಗಗದ್ಯಮ್, ೬

# ಗದ್ಯತ್ರಯ

೧. ಹೇ ವಿಭು, ತಂದೆ, ತಾಯಿ, ಮಡದಿಯರು, ಮಕ್ಕಳು, ಬಂಧುಗಳು, ಸ್ನೇಹಿತರು, ಗುರುಗಳು, ರತ್ನಗಳು, ಧನಧಾನ್ಯಗಳು, ಗದ್ದೆಗಳು, ಮನೆಗಳು, ಸರ್ವಧರ್ಮಗಳು, ಕೈವಲ್ಯವನ್ನು ಒಳಗೊಂಡ ಸರ್ವಕಾಮಗಳು — ಇವೆಲ್ಲವನ್ನು ಸಂಪೂರ್ಣವಾಗಿ ತೊರೆದು ಲೋಕಗಳನ್ನು ಅತಿಕ್ರಮಿಸಿದ ನಿನ್ನ ಪಾದಗಳನ್ನು ಶರಣು ಹೊಂದುತ್ತೇನೆ.

೨. ನೀನೇ ನನ್ನ ತಾಯಿ, ತಂದೆ, ಬಂಧು, ಗುರು, ವಿದ್ಯೆ ಮತ್ತು ಧನ; ಹೇ ದೇವದೇವ, ನನಗೆ ನೀನೇ ಸರ್ವಸ್ವ.

೩. ಅಪಾರಕರುಣಾಸಾಗರ, ಆಶ್ರಯಿಸುವವರಲ್ಲಿ ಜಾತಿ, ಗುಣ, ವೃತ್ತಿ ಮೊದಲಾದ ಯಾವ ವಿಶೇಷಗಳನ್ನೂ ಆಲೋಚಿಸದೆಯೇ ಲೋಕಕ್ಕೆಲ್ಲಾ ಶರಣ್ಯನಾಗಿರುವವನೇ, ಪ್ರಣತರಾದವರ ದುಃಖಗಳನ್ನು ಹೋಗಲಾಡಿಸುವವನೇ, ಆಶ್ರಿತರಾದವರಿಗೆ ವಾತ್ಸಲ್ಯಗುಣದ ಅದ್ವಿತೀಯ ಜಲನಿಧಿಯಂತಿರುವವನೇ, ಎಲ್ಲಾ ಪ್ರಾಣಿಸಮೂಹಗಳ ನಿಜಸ್ವಭಾವವನ್ನು ಯಾವಾಗಲೂ ಅರಿತಿರುವವನೇ, ಸತ್ಯಕಾಮ, ಸತ್ಯಸಂಕಲ್ಪ, ಆಪತ್ಸಖ, ಕಾಕುತ್ಸ್ಥ, ಶ್ರೀಮನ್ನಾರಾಯಣ, ಶ್ರೀರಂಗನಾಥ, ನನ್ನ ಒಡೆಯ, ನಿನಗೆ ನಮಸ್ಕಾರ.

ಕದಾಽಹಂ ಭಗವಂತಂ, ನಾರಾಯಣಂ, ಮಮ ಕುಲ-ನಾಥಂ, ಮಮ ಕುಲದೈವತಂ, ಮಮ ಕುಲಧನಂ, ಮಮ ಭೋಗ್ಯಂ, ಮಮ ಮಾತರಂ, ಮಮ ಪಿತರಂ, ಮಮ ಸರ್ವಂ, ಸಾಕ್ಷಾತ್ಕರವಾಣಿ ಚಕ್ಷುಷಾ?

ಕದಾಽಹಂ ಭಗವತ್-ಪಾದಾಂಬುಜ-ದ್ವಯಂ ಸಂಗ್ರಹಿ-ಷ್ಯಾಮಿ? ಕದಾಽಹಂ ಭಗವತ್-ಪಾದಾಂಬುಜದ್ವಯ-ಪರಿಚರ್ಯಾಶಯಾ ನಿರಸ್ತ–ಸಮಸ್ತೇತರ–ಭೋಗಾಶಃ, ಅಪಗತ-ಸಮಸ್ತ-ಸಾಂಸಾರಿಕ-ಸ್ವಭಾವಃ ತತ್ಪಾದಾಂಬುಜ-ದ್ವಯಂ ಪ್ರವೇಕ್ಷ್ಯಾಮಿ?

ಕದಾಽಹಂ ಭಗವತ್ಪಾದಾಂಬುಜದ್ವಯ–ಪರಿಚರ್ಯಾ-ಕರಣಯೋಗ್ಯಃ, ತದೇಕಭೋಗಃ, ತತ್ಪಾದೌ ಪರಿಚರಿ-ಷ್ಯಾಮಿ?

ಕದಾ ಮಾಂ ಭಗವಾನ್ ಸ್ವಕೀಯಯಾ ಅತಿಶೀತಲಯಾ ದೃಶಾ ಅವಲೋಕ್ಯ, ಸ್ನಿಗ್ಧ-ಗಂಭೀರ-ಮಧುರಯಾ ಗಿರಾ ಪರಿಚರ್ಯಾಯಾಂ ಆಜ್ಞಾಪಯಿಷ್ಯತಿ? ॥ ೪ ॥

ಶ್ರೀವೈಕುಂಠಗದ್ಯಮ್-೪

೪. ಭಗವಂತನನ್ನು, ನಾರಾಯಣನನ್ನು, ನನ್ನ ಕುಲನಾಥನನ್ನು, ನನ್ನ ಕುಲ ದೇವತೆಯನ್ನು, ನನ್ನ ಕುಲಧನವನ್ನು, ನನ್ನ ಭೋಗ್ಯವಸ್ತುವನ್ನು, ನನ್ನ ತಾಯಿಯನ್ನು, ನನ್ನ ತಂದೆಯನ್ನು, ನನ್ನ ಸರ್ವಸ್ವವನ್ನು ಯಾವಾಗ ತಾನೇ ನನ್ನ ಕಣ್ಣುಗಳಿಂದ ಪ್ರತ್ಯಕ್ಷವಾಗಿ ನೋಡಬಲ್ಲೆನು?

ಭಗವಂತನ ಅಡಿದಾವರೆಗಳನ್ನು ಯಾವಾಗ ತಾನೇ ಶಿರಸಾ ಧರಿಸ ಬಲ್ಲೆನು? ಭಗವಂತನ ಅಡಿದಾವರೆಗಳ ಸೇವೆಮಾಡಬೇಕೆಂಬ ಆಶೆಯಿಂದ ಇತರ ಭೋಗಾಶೆಗಳನ್ನೆಲ್ಲಾತ್ಯಜಿಸಿ, ಸಮಸ್ತ ಸಾಂಸಾರಿಕಸ್ವಭಾವಗಳನ್ನು ಬಿಟ್ಟು, ಅವನ ಪಾದಾಂಬುಜವನ್ನು ಎಂದು ತಾನೇ ಪ್ರವೇಶಿಸಬಲ್ಲೆನು?

ಭಗವಂತನ ಅಡಿದಾವರೆಗಳ ಸೇವೆಮಾಡಲು ಯೋಗ್ಯನಾಗಿ, ಆ ಸೇವೆ ಯೊಂದೇ ಭೋಗವುಳ್ಳವನಾಗಿ, ಆ ಪಾದಗಳನ್ನು ಎಂದು ತಾನೇ ಸೇವಿಸಬಲ್ಲೆನು?

ಯಾವಾಗ ಭಗವಂತನು ತನ್ನ ಶೀತಲವಾದ ದೃಷ್ಟಿಯಿಂದ ನನ್ನನ್ನು ನೋಡಿ, ಸ್ನಿಗ್ಧವೂ, ಗಂಭೀರವೂ, ಮಧುರವೂ ಆದ ಮಾತಿನಿಂದ ತನ್ನ ಸೇವೆ ಯನ್ನು ಮಾಡಲು ಆಜ್ಞಾಪಿಸುವನು?

# ಹರಿಸ್ತುತಿಃ

ಕುರು ಭುಂಕ್ಷ್ವ ಚ ಕರ್ಮ ನಿಜಂ ನಿಯತಂ
ಹರಿಪಾದವಿನಮ್ರಧಿಯಾ ಸತತಮ್ ।
ಹರಿರೇವ ಪರೋ ಹರಿರೇವ ಗುರು-
ರ್ಹರಿರೇವ ಜಗತ್ಪಿತೃಮಾತೃಗತಿಃ ॥ ೧ ॥

— ದ್ವಾದಶಸ್ತೋತ್ರ

ನಮೋ ನಮೋಽಶೇಷವಿಶೇಷಪೂರ್ಣ-
ಗುಣೈಕಧಾಮ್ನೇ ಪುರುಷೋತ್ತಮಾಯ ।
ಭಕ್ತಾನುಕಂಪಾದತಿಶುದ್ಧಸಂವಿ-
ದ್ದಾತ್ರೇಽನುಪಾಧಿಪ್ರಿಯ ಸದ್ಗುಣಾತ್ಮನೇ ॥ ೨ ॥

— ಅನುವ್ಯಾಖ್ಯಾನ ಅ. ೪. ಶ್ಲೋ. ೧೩

ಜಯತಿ ಹರಿರಚಿಂತ್ಯಃ ಸರ್ವದೇವೈಕವಂದ್ಯಃ
ಪರಮಗುರುರಭೀಷ್ಟಾವಾಪ್ತಿದಃ ಸಜ್ಜನಾನಾಮ್ ।
ನಿಖಿಲಗುಣಗಣಾರ್ಣೋ ನಿತ್ಯನಿರ್ಮುಕ್ತದೋಷಃ
ಸರಸಿಜನಯನೋಽಸೌ ಶ್ರೀಪತಿರ್ಮಾನದೋ ನಃ ॥ ೩ ॥

— ತಾತ್ಪರ್ಯನಿರ್ಣಯ

ಅತ್ಯುದ್ರಿಕ್ತವಿದೋಷಸತ್ಸುಖಮಹಾಜ್ಞಾನೈಕತಾನಪ್ರಭಾ-
ಸರ್ವಪ್ರಾಭವಶಕ್ತಿಭೋಗಬಲಸತ್ಸಾರಾತ್ಮದಿವ್ಯಾಕೃತಿಮ್ ।
ಸೃಷ್ಟಿಸ್ಥಾನನಿರೋಧನಿತ್ಯನಿಯತಿಜ್ಞಾನಪ್ರಕಾಶಾವೃತಿ-
ಧ್ವಾಂತಾಮೋಕ್ಷವಿಮೋಕ್ಷದಂ ಹರಿಮಜಂ ನಿತ್ಯಂ
ಸದೋಪಾಸ್ಮಹೇ ॥ ೪ ॥

—ಛಾಂದೋಗ್ಯೋಪನಿಷದ್ಭಾಷ್ಯ, ಮಂಗಲಾಚರಣಂ

# ಹರಿಸ್ತುತಿ

೧. ಎಲೈ ಮನುಷ್ಯನೇ! ನೀನು ನಿತ್ಯದಲ್ಲಿಯೂ ಶ್ರೀಹರಿಪಾದದಲ್ಲಿ ಲೀನವಾದ ಬುದ್ಧಿಯಿಂದ ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮವನ್ನು ಮಾಡು. ಅದರ ಫಲವನ್ನು ಭೋಗಿಸು. ಏಕೆಂದರೆ, ಶ್ರೀಹರಿಯೇ ಸರ್ವೋತ್ತಮನು. ಹರಿಯೇ ಗುರುವು; ಹರಿಯೇ ಜಗತ್ತು, ತಂದೆ, ತಾಯಿ ಮತ್ತು ಗತಿಯು (ಪ್ರಾಪ್ಯನು).

೨. ಸಮಸ್ತವಿಶೇಷಗಳುಳ್ಳ ಪೂರ್ಣಗಳಾದ ಜ್ಞಾನಾನಂದಾದಿಗುಣಗಳಿಗೆ ಮುಖ್ಯಾಶ್ರಯನಾದ, ಭಕ್ತರಲ್ಲಿ ದಯೆಯಿಂದ ಅತ್ಯಂತ ಪರಿಶುದ್ಧವಾದ ಜ್ಞಾನವನ್ನು ಕೊಡತಕ್ಕ, ನಿರ್ನಿಮಿತ್ತವಾಗಿ (ಭಕ್ತರಲ್ಲಿ) ಪ್ರೀತಿಯುಳ್ಳವನೂ, ಸದ್ಗುಣಸ್ವರೂಪನೂ ಆಗಿರುವ ಪುರುಷೋತ್ತಮನಿಗೋಸ್ಕರ ನಮಸ್ಕಾರ, ನಮಸ್ಕಾರ.

೩. ಸಂಪೂರ್ಣವಾಗಿ ಧ್ಯಾನಿಸಲಿಕ್ಕೆ ಅಶಕ್ಯನೂ, ಸಮಸ್ತದೇವತೆಗಳಿಗೆ ನಮಸ್ಕರಿಸಲೂ ಸ್ತುತಿಸಲೂ ಯೋಗ್ಯನೂ, ಉತ್ತಮಗುರುವೂ, ಸಜ್ಜನರಿಗೆ ಇಷ್ಟವನ್ನು ಹೊಂದಿಸುವವನೂ, ಸರ್ವಗುಣಸಮೂಹವೆಂಬ ನೀರುಳ್ಳವನೂ, ಸರ್ವದಾ ದೋಷರಹಿತನೂ, ತಾವರೆಯಂತಹ ನೇತ್ರದವನೂ ಆಗಿರುವ ಲಕ್ಷ್ಮೀಪತಿಯಾದ ಶ್ರೀಹರಿಯು ನಮಗೆ ಮಾನವನ್ನೀಯತಕ್ಕವನಾಗಿ ಸರ್ವೋತ್ಕೃಷ್ಟನಾಗಿರುವನು.

೪. ಎಲ್ಲದಕ್ಕಿಂತಲೂ ಮಿಗಿಲಾದ, ನಿರ್ದೋಷವಾದ, ಅತ್ಯುತ್ತಮಾನಂದ, ಸ್ವ-ಪರರಲ್ಲಿರುವ ಸರ್ವವಿಶೇಷಗಳ ಅರಿವು, ತನ್ನಲ್ಲೇ ಇರುವ ಕಾಂತಿ, ಪ್ರಭುಶಕ್ತಿ – ಕ್ರಿಯಾಶಕ್ತಿ – ಇಚ್ಛಾಶಕ್ತಿ, ಭೋಗ, ಬಲ ಇವುಗಳ ಉತ್ತಮ ಸಾರಸ್ವರೂಪವಾದ ದಿವ್ಯದೇಹವುಳ್ಳವನೂ, ಜಗತ್ತಿಗೆ ಸೃಷ್ಟಿ – ಸ್ಥಿತಿ–ಸಂಹಾರ–ನಿತ್ಯವಸ್ತುಗಳನಿಯಮನ, ಜ್ಞಾನ-ಪ್ರಕಾಶ ಅಜ್ಞಾನ-ಆವರಣ, ಸಂಸಾರ – ಮೋಕ್ಷಗಳನ್ನು ಕೊಡುವವನೂ, ಜನ್ಮವಿಲ್ಲದವನೂ ನಾಶವಿಲ್ಲದವನೂ ಆಗಿರುವ ಪಾಪಪರಿಹಾರಕನಾದುದರಿಂದ ಹರಿಯೆನಿಸಿದ ವಿಷ್ಣುವನ್ನು ಸರ್ವದಾ ಉಪಾಸಿಸುತ್ತೇವೆ.

ಪ್ರಾಣದೇರೀಶಿತಾರಂ ಪರಮಸುಖನಿಧಿಂ
ಸರ್ವದೋಷವ್ಯಪೇತಂ
ಸರ್ವಾಂತಸ್ಥಂ ಸುಪೂರ್ಣಂ ಪ್ರಕೃತಿಪತಿಮಜಂ
ಸರ್ವಬಾಹ್ಯಂ ಸುನಿತ್ಯಮ್ ।
ಸರ್ವಜ್ಞಂ ಸರ್ವಶಕ್ತಿಂ ಸುರಮುನಿಮನುಜಾ-
ದ್ಯೈಃ ಸದಾ ಸೇವ್ಯಮಾನಂ
ವಿಷ್ಣುಂ ವಂದೇ ಸದಾಹಂ ಸಕಲಜಗದನಾ-
ದ್ಯಂತಮಾನಂದದಂ ತಮ್ ॥ ೫ ॥

— ಬೃಹದಾರಣ್ಯಕೋಪನಿಷದ್ಭಾಷ್ಯ; ಮಂಗಲಾಚರಣಂ

ಅಂಬರಗಂಗಾಚುಂಬಿತಪಾದಃ
ಪದತಲವಿದಲಿತಗುರುತರಶಕಟಃ ।
ಕಾಲಿಯನಾಗಕ್ಷ್ವೇಳನಿಹಂತಾ
ಸರಸಿಜನವದಲವಿಕಸಿತನಯನಃ ॥
ಕಾಲಘನಾಲೀ ಕರ್ಬುರಕಾಯಃ
ಶರಶತಶಕಲಿತರಿಪುಶತನಿವಹಃ ।
ಸಂತತಮಸ್ಮಾನ್ ಪಾತು ಮುರಾರಿಃ
ಸತತಗಸಮಜವಖಗಪತಿನಿರತಃ ॥ ೬ ॥

ಶ್ರೀಕೃಷ್ಣಕಂದುಕಸ್ತುತಿ

೫. ಮುಖ್ಯಪ್ರಾಣನೇ ಮೊದಲಾದವರಿಗೆ ಸ್ವಾಮಿಯು, ಅಪರಿಮಿತಸುಖಗಳಿಗೆ ಆಶ್ರಯನು, ಸರ್ವದೋಷರಹಿತನು, ಸಮಸ್ತವಸ್ತುಗಳೊಳಗೆ ಇರುವವನು, ಗುಣಗಳಿಂದ ಪೂರ್ಣನು, ಜಡಪ್ರಕೃತಿನಿಯಾಮಕಳಾದ ಚಿತ್ಪ್ರಕೃತಿಯೆನಿಸಿದ ಲಕ್ಷ್ಮೀದೇವಿಗೆ ಪತಿಯು ಅಥವಾ ಜಗತ್ತಿಗೆ ಮೂಲ (ಉಪಾದಾನ) ಕಾರಣವಾದ ಜಡಪ್ರಕೃತಿಗೆ ಅಧಿಪತಿಯು, ಜನ್ಮವಿಲ್ಲದವನು, ಸರ್ವಪ್ರಪಂಚಕ್ಕಿಂತಲೂ ಹೊರಗಿರುವವನು, ನಿತ್ಯನು (ಸಾವಿಲ್ಲದವನು), ಸರ್ವಜ್ಞನು, ಸರ್ವಶಕ್ತನು, ದೇವ-ಋಷಿ-ಮನುಷ್ಯರಿಂದ ನಿತ್ಯದಲ್ಲಿ ಸೇವಿಸಲ್ಪಡುವವನು, ಸಕಲಪ್ರಪಂಚಕ್ಕೆ ಅನ = ವ್ಯಾಪಾರ, ಆದಿ = ಉತ್ಪತ್ತಿ, ಅಂತ = ನಾಶಗಳನ್ನು ಕೊಡುವವನು, ಮೋಕ್ಷಸುಖವನ್ನೀಯುವವನು, ಪ್ರಸಿದ್ಧನು ಆಗಿರುವ ವಿಷ್ಣುವೆನಿಸಿದ ಶ್ರೀಹರಿಯನ್ನು ಸರ್ವದಾ ನಮಸ್ಕರಿಸುವೆನು, ಸ್ತುತಿಸುವೆನು.

೬. ಸ್ವರ್ಗಂಗಾನದಿಯಿಂದ ಮುದ್ದಿಸಲ್ಪಟ್ಟ ಪಾದವುಳ್ಳವನೂ (ವಾಮನ-ತ್ರಿವಿಕ್ರಮಾವತಾರದಲ್ಲಿ), ಪಾದತಲದಿಂದ ಮುರಿಯಲ್ಪಟ್ಟ ಅತಿದೊಡ್ಡ ಬಂಡಿಯುಳ್ಳವನೂ, (ಶಕಟಾಸುರಸಂಹಾರಿ), ಕಾಲಿಯಸರ್ಪದ ವಿಷವನ್ನು ಅಪಹರಿಸಿದವನೂ, ತಾವರೆಯ ಹೊಸದಾದ ಎಸಳಿನಂತೆ ಅರಳಿದ ಕಣ್ಣುಗಳುಳ್ಳವನೂ ಮತ್ತು ಕಪ್ಪುಮೋಡಗಳ ಗುಂಪಿನಂತೆ ಕಪ್ಪಾದ ದೇಹದವನೂ, ಅನೇಕ ಬಾಣಗಳಿಂದ ತುಂಡರಿಸಲ್ಪಟ್ಟ ಹಲವಾರು ಶತ್ರುಸಮೂಹವುಳ್ಳವನೂ, ಗಾಳಿಗೆ ಸಮಾನವಾದ ವೇಗವುಳ್ಳ ಗರುಡನ ಮೇಲೆ ಕುಳಿತವನೂ, ಮುರಾಸುರನ ಶತ್ರುವಾದ ಶ್ರೀಕೃಷ್ಣನು ಸರ್ವದಾ ನಮ್ಮನ್ನು ಕಾಪಾಡಲಿ.

# ಶ್ರೀಕೃಷ್ಣಸ್ತವಃ

ನಮಸ್ಯೇ ಪುರುಷಂ ತ್ವಾದ್ಯಮೀಶ್ವರಂ ಪ್ರಕೃತೇಃ ಪರಮ್ ।
ಅಲಕ್ಷ್ಯಂ ಸರ್ವಭೂತಾನಾಮನ್ತರ್ಬಹಿರವಸ್ಥಿತಮ್ ॥ ೧ ॥

ಮಾಯಾಯವನಿಕಾಚ್ಛನ್ನಮಜ್ಞಾಽಧೋಕ್ಷಜಮವ್ಯಯಮ್ ।
ನ ಲಕ್ಷ್ಯಸೇ ಮೂಢದೃಶಾ ನಟೋನಾಟ್ಯಧರೋ ಯಥಾ ॥ ೨ ॥

ತಥಾ ಪರಮಹಂಸಾನಾಂ ಮುನೀನಾಮಮಲಾತ್ಮನಾಮ್ ।
ಭಕ್ತಿಯೋಗವಿಧಾನಾರ್ಥಂ ಕಥಂ ಪಶ್ಯೇಮಹಿ ಸ್ತ್ರಿಯಃ ॥ ೩ ॥

ಕೃಷ್ಣಾಯ ವಾಸುದೇವಾಯ ದೇವಕೀನಂದನಾಯ ಚ ।
ನಂದಗೋಪಕುಮಾರಾಯ ಗೋವಿಂದಾಯ ನಮೋನಮಃ ॥ ೪ ॥

ನಮಃ ಪಂಕಜನಾಭಾಯ ನಮಃ ಪಂಕಜಮಾಲಿನೇ ।
ನಮಃ ಪಂಕಜನೇತ್ರಾಯ ನಮಸ್ತೇ ಪಂಕಜಾಂಘ್ರಯೇ ॥ ೫ ॥

ಯಥಾ ಹೃಷೀಕೇಶ ಖಲೇನ ದೇವಕೀ
ಕಂಸೇನ ರುದ್ಧಾಽತಿಚಿರಂ ಶುಚಾರ್ಪಿತಾ ।
ವಿಮೋಚಿತಾಽಹಂ ಚ ಸಹಾತ್ಮಜಾ ವಿಭೋ
ತ್ವಯೈವ ನಾಥೇನ ಮುಹುರ್ವಿಪದ್ಗಣಾತ್ ॥ ೬ ॥

ವಿಷಾನ್ಮಹಾಗ್ನೇಃ ಪುರುಷಾದದರ್ಶನಾ-
ದಸತ್ಸಭಾಯಾ ವನವಾಸಕೃಚ್ಛ್ರತಃ ।
ಮೃಧೇ ಮೃಧೇಽನೇಕ ಮಹಾರಥಾಸ್ತ್ರತೋ
ದ್ರೌಣ್ಯಸ್ತ್ರತಶ್ಚಾಸ್ಮ ಹರೇಽಭಿರಕ್ಷಿತಾಃ ॥ ೭ ॥

# ಶ್ರೀಕೃಷ್ಣಸ್ತವ

## (ಕುಂತಿಯ ಪ್ರಾರ್ಥನೆ)

೧. ಆದ್ಯನೂ, ಈಶ್ವರನೂ, ಪ್ರಕೃತಿಗಿಂತ ಶ್ರೇಷ್ಠನೂ, ಅಗೋಚರನೂ, ಸರ್ವ ಭೂತಗಳ ಒಳಗೂ ಹೊರಗೂ ಇರುವವನೂ ಆದ ಪುರುಷೋತ್ತಮನಿಗೆ ನಮಿಸುತ್ತೇನೆ.

೨. ಮಾಯೆಯೆಂಬ ತೆರೆಯಿಂದ ಮರೆಯಾಗಿರುವವನೂ, ಇಂದ್ರಿಯಗಳಿಗೆ ಅತೀತನೂ ಆದ ನಿನ್ನನ್ನು ಅಜ್ಞಳಾದ ನಾನು ನಮಸ್ಕರಿಸುತ್ತೇನೆ; ಪಾತ್ರವನ್ನು ಧರಿಸಿರುವ ನಟನಂತೆ ಇರುವ ನಿನ್ನನ್ನು ಮೂಢರು ಅರಿಯಲಾರರು.

೩. ಮುನಿಗಳೂ ನಿರ್ಮಲಬುದ್ಧಿಯುಳ್ಳವರೂ ಆದ ಪರಮಹಂಸರಿಗೆ ಭಕ್ತಿಯೋಗವನ್ನು ಉಪದೇಶಿಸಲು ಅವತಾರಮಾಡಿರುವ ನಿನ್ನನ್ನು ನನ್ನಂತಹ ಸ್ತ್ರೀಯರು ಹೇಗೆ ಅರಿಯಬಲ್ಲರು.

೪. ಕೃಷ್ಣನಿಗೆ, ವಾಸುದೇವನಿಗೆ, ದೇವಕೀನಂದನನಿಗೆ, ನಂದಗೋಪಕುಮಾರನಿಗೆ, ಗೋವಿಂದನಿಗೆ ನಮೋನಮಃ

೫. ಪದ್ಮನಾಭನಿಗೆ ನಮಸ್ಕಾರ, ಕಮಲಮಾಲೆಗಳನ್ನು ಧರಿಸುವ ನಿನಗೆ ನಮಸ್ಕಾರ, ಪಂಕಜನೇತ್ರನಿಗೆ ನಮಸ್ಕಾರ, ಪಂಕಜಾಂಘ್ರಿಗೆ ನಮಸ್ಕಾರ.

೬. ಹೇ ಹೃಷೀಕೇಶ, ದುಷ್ಟನಾದ ಕಂಸನಿಂದ ಬಹುಕಾಲದವರೆಗೂ ಸೆರೆಯಲ್ಲಿಡಲ್ಪಟ್ಟು ದುಃಖಿಸುತ್ತಿದ್ದ ದೇವಕಿಯನ್ನು ನೀನು ಬಿಡಿಸಿದಂತೆ, ಹೇ ವಿಭು, ನನ್ನನ್ನೂ ನನ್ನ ಮಕ್ಕಳನ್ನೂ ಅನೇಕ ಅಪಾಯಗಳಿಂದ ಬಾರಿ ಬಾರಿಗೂ ರಕ್ಷಿಸಿರುವೆ.

೭. ಹೇ ಹರಿ, ವಿಷದಿಂದಲೂ, ಅರಗಿನ ಮನೆಯ ದೊಡ್ಡ ಬೆಂಕಿಯಿಂದಲೂ, ರಾಕ್ಷಸರ ದರ್ಶನದಿಂದಲೂ, ದುಷ್ಟರ ಸಭೆಯಿಂದಲೂ, ವನವಾಸದ ಕಷ್ಟಗಳಿಂದಲೂ, ಪ್ರತಿಯುದ್ಧದಲ್ಲಿಯೂ ಮಹಾರಥಿಕರ ಅಸ್ತ್ರಗಳಿಂದಲೂ, ಅಶ್ವತ್ಥಾಮನ ಅಸ್ತ್ರದಿಂದಲೂ ನಮ್ಮನ್ನು ರಕ್ಷಿಸಿರುವೆ.

ವಿಪದಃ ಸನ್ತು ನಃ ಶಶ್ವತ್ತತ್ರ ತತ್ರ ಜಗದ್ಗುರೋ ।
ಭವತೋ ದರ್ಶನಂ ಯತ್ಸ್ಯಾದಪುನರ್ಭವದರ್ಶನಮ್ ॥ ೮ ॥

ಜನ್ಮೈಶ್ವರ್ಯಶ್ರುತಶ್ರೀಭಿರೇಧಮಾನಮದಃ ಪುಮಾನ್ ।
ನೈವಾರ್ಹತ್ಯಭಿಧಾತುಂ ವೈ ತ್ವಾಮಕಿಂಚನಗೋಚರಮ್ ॥ ೯ ॥

ನಮೋಽಕಿಂಚನವಿತ್ತಾಯ ನಿವೃತ್ತಗುಣವೃತ್ತಯೇ ।
ಆತ್ಮಾರಾಮಾಯ ಶಾನ್ತಾಯ ಕೈವಲ್ಯಪತಯೇ ನಮಃ ॥ ೧೦ ॥

ಮನ್ಯೇ ತ್ವಾಂ ಕಾಲಮೀಶಾನಮನಾದಿನಿಧನಂ ವಿಭುಮ್ ।
ಸಮಂ ಚರನ್ತಂ ಸರ್ವತ್ರ ಭೂತಾನಾಂ ಯನ್ಮಿಥಃ ಕಲಿಃ ॥ ೧೧ ॥

ನ ವೇದ ಕಶ್ಚಿದ್ಭಗವಂಶ್ಚಿಕೀರ್ಷಿತಂ
ತವೇಹಮಾನಸ್ಯ ನೃಣಾಂ ವಿಡಂಬನಮ್ ।
ನ ಯಸ್ಯ ಕಶ್ಚಿದ್ದಯಿತೋಽಸ್ತಿ ಕರ್ಹಿಚಿ-
ದ್ದ್ವೇಷ್ಯಶ್ಚ ಯಸ್ಮಿನ್ ವಿಷಮಾಮತಿರ್ನೃಣಾಮ್ ॥ ೧೨ ॥

ಜನ್ಮ ಕರ್ಮ ಚ ವಿಶ್ವಾತ್ಮನ್ ಅಜಸ್ಯಾಕರ್ತುರಾತ್ಮನಃ ।
ತಿರ್ಯಙ್ನೃಷಿಷು ಯಾದಸ್ಸು ತದತ್ಯಂತವಿಡಂಬನಮ್ ॥ ೧೩ ॥

ಶೃಣ್ವಂತಿ ಗಾಯಂತಿ ಗೃಣಂತ್ಯಭೀಕ್ಷ್ಣಶಃ
ಸ್ಮರಂತಿ ನಂದಂತಿ ತವೇಹಿತಂ ಜನಾಃ ।
ತ ಏವ ಪಶ್ಯಂತ್ಯಚಿರೇಣ ತಾವಕಂ
ಭವಪ್ರವಾಹೋ ಪರಮಂ ಪದಾಂಬುಜಮ್ ॥ ೧೪ ॥

೮. ಹೇ ಜಗದ್ಗುರು, ಯಾವ ವಿಪತ್ತುಗಳ ಮೂಲಕ ಪುನರ್ಜನ್ಮವನ್ನು ಉಂಟುಮಾಡದ ನಿನ್ನ ದರ್ಶನವು ಪ್ರಾಪ್ತವಾಗುವುದೋ, ಅಂತಹ ವಿಪತ್ತುಗಳು ನಮಗೆ ಯಾವಾಗಲೂ ಬರಲಿ.

೯. ಜನ್ಮ, ಐಶ್ವರ್ಯ, ಪಾಂಡಿತ್ಯ, ಸಂಪತ್ತು ಮೊದಲಾದ ಮದದಿಂದ ಅಮಲೇರಿದವನು, ವಿರಕ್ತರಿಗೆ ಗೋಚರವಾಗುವ ನಿನ್ನ ನಾಮವನ್ನು ಕೂಡ ಹೇಳಲಿಕ್ಕೆ ಯೋಗ್ಯನಲ್ಲ.

೧೦. ವಿರಕ್ತರನ್ನೇ ಧನವಾಗಿ ತಿಳಿದಿರುವವನೂ, ಗುಣವೃತ್ತಿಗಳಿಂದ ಬಿಡಲ್ಪಟ್ಟವನೂ, ಆತ್ಮಾರಾಮನೂ, ಶಾಂತನೂ, ಕೈವಲ್ಯಪತಿಯೂ ಆದ ನಿನಗೆ ನಮಸ್ಕಾರ.

೧೧. ಈಶಾನನೂ, ಆದ್ಯಂತರಹಿತನೂ, ಸರ್ವವ್ಯಾಪಕನೂ ಆದ ನಿನ್ನನ್ನು ಕಾಲನೆಂದು ಭಾವಿಸುತ್ತೇನೆ; ನೀನು ಸರ್ವತ್ರ ಸಮನಾಗಿದ್ದರೂ ಪರಸ್ಪರ ವೈಷಮ್ಯವು ಭೂತಗಳಲ್ಲಿ ಕಂಡುಬರುತ್ತದೆ.

೧೨. ಹೇ ಭಗವಂತನೇ, ನಿನಗೆ ಮಿತ್ರನೂ ಇಲ್ಲ, ಶತ್ರುವೂ ಇಲ್ಲ; ಆದರೆ ಅಜ್ಞಾನಿಗಳು ನಿನಗೆ ಪಕ್ಷಪಾತವಿರುವುದೆಂದು ಭಾವಿಸುವರು. ಮನುಷ್ಯರಂತೆ ವಿಡಂಬನಮಾಡುತ್ತಿರುವ ನಿನ್ನ ಸಂಕಲ್ಪವನ್ನು ಯಾವನೂ ಅರಿಯನು.

೧೩. ಹೇ ವಿಶ್ವಾತ್ಮನೇ, ಜನ್ಮಕರ್ಮಗಳಿಲ್ಲದ ನಿನಗೆ (ಸಿಂಹ, ವರಾಹ, ಮೊದಲಾದ) ತಿರ್ಯಗ್ಜಂತುಗಳಲ್ಲಿಯೂ, (ಮತ್ಸ್ಯ, ಕೂರ್ಮ ಮೊದಲಾದ) ಜಲಜಂತುಗಳಲ್ಲಿಯೂ, ಮನುಷ್ಯರಲ್ಲಿಯೂ, ಋಷಿಗಳಲ್ಲಿಯೂ ಹುಟ್ಟಿ ಕರ್ಮಗಳನ್ನು ಮಾಡುವುದು ಅತ್ಯಂತ ವಿಡಂಬನವೇ ಸರಿ.

೧೪. ಯಾರು ನಿನ್ನ ಚರಿತ್ರೆಯನ್ನು ಅನವರತ ಹೇಳುತ್ತಿರುವರೋ, ಹಾಡುತ್ತಿರುವರೋ, ಹೊಗಳುತ್ತಿರುವರೋ, ಸ್ಮರಿಸುತ್ತಿರುವರೋ, ನಿನ್ನ ಲೀಲೆಯಲ್ಲಿ ಆನಂದವನ್ನು ಪಡೆಯುತ್ತಿರುವರೋ, ಅವರು ಜನನ ಮರಣಗಳ ಪ್ರವಾಹವನ್ನು ನಿಲ್ಲಿಸುವಂತಹ ನಿನ್ನ ಪಾದಪದ್ಮಗಳನ್ನು ಬೇಗನೆ ನೋಡುವರು.

ಅಥ ವಿಶ್ವೇಶ ವಿಶ್ವಾತ್ಮನ್ ವಿಶ್ವಮೂರ್ತೇ ಸ್ವಕೇಷು ಮೇ ।
ಸ್ನೇಹಪಾಶಮಿಮಂ ಛಿನ್ಧಿ ದೃಢಂ ಪಾಂಡುಷು ವೃಷ್ಣಿಷು ॥ ೧೫ ॥

ತ್ವಯಿ ಮೇಽನನ್ಯವಿಷಯಾ ಮತಿರ್ಮಧುಪತೇಽಸಕೃತ್ ।
ರತಿಮುದ್ವಹತಾದದ್ಧಾ ಗಂಗೇವೌಘಮುದನ್ವತಿ ॥ ೧೬ ॥

೧೫. ಆದಿಕಾರಣ, ಹೇ ವಿಶ್ವೇಶ, ವಿಶ್ವಾತ್ಮ, ವಿಶ್ವಮೂರ್ತಿ, ನನ್ನವರಾದ ಪಾಂಡವರಲ್ಲಿಯೂ ಮತ್ತು ವೃಷ್ಣಿಕುಲದವರಲ್ಲಿಯೂ ನನಗಿರುವ ಬಲವಾದ ಸ್ನೇಹಪಾಶವನ್ನು ಕತ್ತರಿಸು.

೧೬. ಹೇ ಮಧುಪತಿ, ಗಂಗೆಯು ಸಮುದ್ರವನ್ನು ಸೇರುವಂತೆ ನನ್ನ ಮನಸ್ಸು ಬೇರೆ ವಿಷಯಗಳಲ್ಲಿ ಪ್ರವರ್ತಿಸದೆ ನಿನ್ನಲ್ಲಿಯೇ ಯಾವಾಗಲೂ ಪ್ರೀತಿಯನ್ನು ಪಡೆಯಲಿ.

# ಶ್ರೀಕೃಷ್ಣಕರ್ಣಾಮೃತಮ್

ಹೇ ದೇವ ಹೇ ದಯಿತ ಹೇ ಜಗದೇಕಬಂಧೋ
ಹೇ ಕೃಷ್ಣ ಹೇ ಚಪಲ ಹೇ ಕರುಣೈಕಸಿಂಧೋ ।
ಹೇ ನಾಥ ಹೇ ರಮಣ ಹೇ ನಯನಾಭಿರಾಮ
ಹಾ ಹಾ ಕದಾ ನು ಭವಿತಾಸಿ ಪದಂ ದೃಶೋರ್ಮೇ ॥ ೧ ॥

ತತ್ಕೈಶೋರಂ ತಚ್ಚ ವಕ್ತ್ರಾರವಿಂದಂ
ತತ್ಕಾರುಣ್ಯಂ ತೇ ಚ ಲೀಲಾಕಟಾಕ್ಷಾಃ ।
ತತ್ ಸೌಂದರ್ಯಂ ಸಾ ಚ ಮಂದಸ್ಮಿತಶ್ರೀಃ
ಸತ್ಯಂ ಸತ್ಯಂ ದುರ್ಲಭಂ ದೈವತೇಷು ॥ ೨ ॥

ಪ್ರೇಮದಂ ಚ ಮೇ ಕಾಮದಂ ಚ ಮೇ
ವೇದನಂ ಚ ಮೇ ವೈಭವಂ ಚ ಮೇ ।
ಜೀವನಂ ಚ ಮೇ ಜೀವಿತಂ ಚ ಮೇ
ದೈವತಂ ಚ ಮೇ ದೇವ ನಾಪರಮ್ ॥ ೩ ॥

I, 40, 55, 104

ಕರಾರವಿಂದೇನ ಪದಾರವಿಂದಂ
ಮುಖಾರವಿಂದೇ ವಿನಿವೇಶಯಂತಮ್ ।
ವಟಸ್ಯ ಪತ್ರಸ್ಯ ಪುಟೇ ಶಯಾನಂ
ಬಾಲಂ ಮುಕುಂದಂ ಮನಸಾ ಸ್ಮರಾಮಿ ॥ ೪ ॥

ತ್ವಯಿ ಪ್ರಸನ್ನೇ ಮಮ ಕಿಂ ಗುಣೇನ
ತ್ವಯ್ಯಪ್ರಸನ್ನೇ ಮಮ ಕಿಂ ಗುಣೇನ ।
ರಕ್ತೇ ವಿರಕ್ತೇ ಚ ವರೇ ವಧೂನಾಂ
ನಿರರ್ಥಕಃ ಕುಂಕುಮಪತ್ರಭಂಗಃ ॥ ೫ ॥

# ಶ್ರೀಕೃಷ್ಣಕರ್ಣಾಮೃತ

೧. ಹೇ ದೇವ, ಹೇ ಪ್ರಿಯ, ಜಗತ್ತಿನಲ್ಲೆಲ್ಲಾ ಒಬ್ಬನೇ ಸ್ನೇಹಿತನೇ, ಹೇ ಕೃಷ್ಣ, ಹೇ ಚಪಲ, ಹೇ ಕರುಣಾಸಾಗರ, ಹೇ ನಾಥ, ಹೇ ರಮಣ, ಹೇ ನಯನಾಭಿರಾಮ, ಹಾ! ಹಾ! ಎಂದು ನನ್ನ ದೃಷ್ಟಿಗೆ ಗೋಚರನಾಗುವೆ?

೨. ಆ ಶೈಶವ, ಆ ವದನಾರವಿಂದ, ಆ ಕಾರುಣ್ಯ, ಆ ಲೀಲಾಕಟಾಕ್ಷಗಳು, ಆ ಸೌಂದರ್ಯ, ಆ ಮಂದಹಾಸದ ಶ್ರೀ—ಇವು ಸತ್ಯವಾಗಿ ದೇವತೆಗಳಲ್ಲಿಯೂ ಕಾಣುವದಿಲ್ಲ.

೩. ಹೇ ದೇವ, ನೀನೇ ನನ್ನ ಪ್ರೇಮದಾತ ಮತ್ತು ಮನೋರಥಗಳನ್ನು ಕೊಡುವವನು; ನೀನೇ ನನ್ನ ಜ್ಞಾನ ಮತ್ತು ವೈಭವ; ನೀನೇ ನನ್ನ ಜೀವನ, ಜೀವಿತ ಮತ್ತು ದೇವತೆ; ನನಗೆ ಇನ್ನು ಯಾವುದೂ ಇಲ್ಲ.

೪. ಕರಾರವಿಂದದಿಂದ ಪದಾರವಿಂದವನ್ನು ಮುಖಾರವಿಂದದಲ್ಲಿ ಇಟ್ಟುಕೊಂಡು ವಟಪತ್ರದ ಮೇಲೆ ಮಲಗಿರುವ ಬಾಲಮುಕುಂದನನ್ನು ಮನಸ್ಸಿನಲ್ಲಿ ಸ್ಮರಿಸುತ್ತೇನೆ.

೫. ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ ಗುಣದಿಂದ ನನಗೆ ಏನು ಪ್ರಯೋಜನ? ನೀನು ನನ್ನ ಮೇಲೆ ಪ್ರಸನ್ನನಾಗದಿದ್ದರೆ ಗುಣದಿಂದ ನನಗೆ ಏನು ಪ್ರಯೋಜನ? ವರನು ವಧುವಿನಲ್ಲಿ ಅನುರಕ್ತನಾಗಿದ್ದರೂ, ಅನುರಾಗವಿಲ್ಲದವನಾಗಿದ್ದರೂ ಕುಂಕುಮಪತ್ರಗಳ ಅಲಂಕಾರವು (ಹಣೆ, ಕಪೋಲ ಮುಂತಾದ ಸ್ಥಳಗಳಲ್ಲಿ ಸ್ತ್ರೀಯರು ಮಾಡುವ ಪತ್ರಾಕಾರದ ಕುಂಕುಮಾಲಂಕಾರವು) ವ್ಯರ್ಥ.

ಸಂಧ್ಯಾವಂದನ ಭದ್ರಮಸ್ತು ಭವತೇ
ಭೋಃ ಸ್ನಾನ ತುಭ್ಯಂ ನಮಃ
ಭೋ ದೇವಾಃ ಪಿತರಶ್ಚ ತರ್ಪಣವಿಧೌ
ನಾಹಂ ಕ್ಷಮಃ ಕ್ಷಮ್ಯತಾಮ್ ।
ಯತ್ರ ಕ್ವಾಪಿ ನಿಷದ್ಯ ಯಾದವಕುಲೋ-
ತ್ತಂಸಸ್ಯ ಕಂಸದ್ವಿಷಃ
ಸ್ಮಾರಂಸ್ಮಾರಮಘಂ ಹರಾಮಿ ತದಲಂ
ಮನ್ಯೇ ಕಿಮನ್ಯೇನ ಕಿಮ್ ॥ ೬ ॥

ಕಸ್ತೂರೀತಿಲಕಂ ಲಲಾಟಫಲಕೇ
ವಕ್ಷಃಸ್ಥಲೇ ಕೌಸ್ತುಭಂ
ನಾಸಾಗ್ರೇ ನವಮೌಕ್ತಿಕಂ ಕರತಲೇ
ವೇಣುಂ ಕರೇ ಕಂಕಣಮ್ ।
ಸರ್ವಾಂಗೇ ಹರಿಚಂದನಂ ಚ ಕಲಯನ್
ಕಂಠೇ ಚ ಮುಕ್ತಾವಳಿಂ
ಗೋಪಸ್ತ್ರೀಪರಿವೇಷ್ಟಿತೋ ವಿಜಯತೇ
ಗೋಪಾಲಚೂಡಾಮಣಿಃ ॥ ೭ ॥

ಲೋಕಾನುನ್ಮದಯನ್ ಶ್ರುತೀರ್ಮುಖರಯನ್
ಕ್ಷೋಣೀರುಹಾನ್ ಹರ್ಷಯನ್
ಶೈಲಾನ್ವಿದ್ರವಯನ್ ಮೃಗಾನ್ವಿವಶಯನ್
ಗೋಬೃಂದಮಾನಂದಯನ್ ।
ಗೋಪಾನ್ಸಂಭ್ರಮಯನ್ ಮುನೀನ್ಮುಕುಳಯನ್
ಸಪ್ತಸ್ವರಾನ್ ಜೃಂಭಯನ್
ಓಂಕಾರಾರ್ಥಮುದೀರಯನ್ ವಿಜಯತೇ
ವಂಶೀನಿನಾದಶ್ಶಿಶೋಃ ॥ ೮ ॥

II 57, 99, 106, 108, 109

೬. ಎಲೈ ಸಂಧ್ಯಾವಂದನ, ನಿನಗೆ ಶುಭವಾಗಲಿ; ಎಲೈ ಸ್ನಾನ, ನಿನಗೆ ನಮಸ್ಕಾರ; ಎಲೈ ದೇವತೆಗಳೇ ಮತ್ತು ಪಿತೃಗಳೇ, ನಾನು ತರ್ಪಣ ವನ್ನು ಕೊಡಲಾರೆನು, ಕ್ಷಮಿಸಿ; ನಾನು ಎಲ್ಲೋ ಒಂದು ಸ್ಥಳದಲ್ಲಿ ಕುಳಿತುಕೊಂಡು ಯಾದವಕುಲದ ಚೂಡಾಮಣಿಯೂ ಕಂಸನಶತ್ರುವೂ ಆದ ಕೃಷ್ಣನನ್ನು ಪುನಃಪುನಃ ಸ್ಮರಿಸುತ್ತಾ ಪಾಪವನ್ನು ನಾಶಮಾಡಿ ಕೊಳ್ಳುತ್ತೇನೆ; ಇದು ನನಗೆ ಸಾಕು; ಇನ್ನು ಯಾವುದರಿಂದ ನನಗೆ ಪ್ರಯೋಜನ?

೭. ಹಣೆಯಲ್ಲಿ ಕಸ್ತೂರೀತಿಲಕ, ವಕ್ಷಸ್ಥಳದಲ್ಲಿ ಕೌಸ್ತುಭಮಣಿ, ಮೂಗಿನ ತುದಿಯಲ್ಲಿ ಹೊಸದಾದ ಮುತ್ತಿನ ಮುಕುರ, ಅಂಗೈಯಲ್ಲಿ ಕೊಳಲು, ಕೈಸುತ್ತಾ ಬಳೆಗಳು, ಅಂಗದಲ್ಲೆಲ್ಲಾ ಹರಿಚಂದನ, ಕೊರಳಿನ ಸುತ್ತ ಮುತ್ತಿನ ಹಾರ–ಹೀಗೆ ಅಲಂಕೃತನಾಗಿ ಗೋಪಸ್ತ್ರೀಯರಿಂದ ಪರಿ ವೇಷ್ಟಿತನಾದ (ನಮ್ಮ) ಗೋಪಾಲಚೂಡಾಮಣಿಯು ಸರ್ವೋತ್ಕೃಷ್ಟ ನಾಗಿದ್ದಾನೆ.

೮. ಲೋಕಗಳಿಗೆಲ್ಲಾ ಹುಚ್ಚುಹಿಡಿಸುತ್ತಾ, ವೇದಗಳನ್ನು ಪ್ರತಿಧ್ವನಿಕೊಡು ವಂತೆ ಮಾಡುತ್ತಾ, ಮರಗಿಡಗಳನ್ನು ಸಂತೋಷಪಡಿಸುತ್ತಾ, ಬೆಟ್ಟ ಗಳನ್ನು ಕರಗಿಸುತ್ತಾ, ಜಿಂಕೆಗಳನ್ನು ಮೈಮರಸುತ್ತಾ, ಗೋವುಗಳನ್ನು ಆನಂದಪಡಿಸುತ್ತಾ, ಗೊಲ್ಲರಿಗೆ ಭ್ರಮೆಯನ್ನುಂಟುಮಾಡುತ್ತಾ ಮುನಿ ಗಳು ಧ್ಯಾನದಲ್ಲಿ ತಮ್ಮ ಕಣ್ಣುಗಳನ್ನು ಮುಚ್ಚುವಂತೆ ಮಾಡುತ್ತಾ, ಸಪ್ತ ಸ್ವರಗಳನ್ನು ಬರಿಸುತ್ತಾ, ಓಂಕಾರದ ಅರ್ಥವನ್ನು ತಿಳಿಸುತ್ತಾ ಮಗುವಿನ (ಶ್ರೀಕೃಷ್ಣನ) ಕೊಳಲಿನ ನಾದವು ಸರ್ವೋತ್ಕೃಷ್ಟವಾಗಿದೆ.

ಫುಲ್ಲೇಂದೀವರಕಾಂತಿಮಿಂದುವದನಂ
ಬರ್ಹಾವತಂಸಪ್ರಿಯಂ
ಶ್ರೀವತ್ಸಾಂಕಮುದಾರಕೌಸ್ತುಭಧರಂ
ಪೀತಾಂಬರಂ ಸುಂದರಮ್ ।
ಗೋಪೀನಾಂ ನಯನೋತ್ಪಲಾರ್ಚಿತತನುಂ
ಗೋಗೋಪಸಂಘಾವೃತಂ
ಗೋವಿಂದಂ ಕಲವೇಣುವಾದನಿರತಂ
ದಿವ್ಯಾಂಗಭೂಷಂ ಭಜೇ ॥ ೯ ॥

ಸಾಯಂಕಾಲೇ ವನಾಂತೇ ಕುಸುಮಿತಸಮಯೇ
ಸೈಕತೇ ಚಂದ್ರಿಕಾಯಾಂ
ತ್ರೈಲೋಕ್ಯಾಕರ್ಷಣಾಂಗಂ ಸುರನರಗಣಿಕಾ-
ಮೋಹನಾಪಾಂಗಮೂರ್ತಿಮ್ ।
ಸೇವ್ಯಂ ಶೃಂಗಾರಭಾವೈಃ ನವರಸಭರಿತೈಃ
ಗೋಪಕನ್ಯಾಸಹಸ್ರೈಃ
ವಂದೇಽಹಂ ರಾಸಕೇಳೀರತಮತಿಸುಭಗಂ
ವಶ್ಯಗೋಪಾಲಕೃಷ್ಣಮ್ ॥ ೧೦ ॥

III, 84, 99

೯. ಅರಳಿದ ಇಂದೀವರದಂತೆ ನೀಲಕಾಂತಿಯುಳ್ಳವನೂ, ಇಂದುವದನನೂ, ತನಗೆ ಪ್ರಿಯವಾದ ನವಿಲುಗರಿಯನ್ನು ಧರಿಸಿರುವವನೂ, ಶ್ರೀವತ್ಸವೆಂಬ ಚಿಹ್ನೆಯುಳ್ಳವನೂ, ಕೌಸ್ತುಭವನ್ನು ಧರಿಸಿರುವವನೂ, ಪೀತಾಂಬರವನ್ನು ಉಟ್ಟು ಸುಂದರನಾಗಿ ಕಾಣುತ್ತಿರುವವನೂ, ಗೋಪಿಗಳ ನಯನಗಳೆಂಬ ನೀಲಕಮಲಗಳಿಂದ ಪೂಜಿತನಾದ ಶರೀರವುಳ್ಳವನೂ, ಗೊಲ್ಲರ ಮತ್ತು ಗೋವುಗಳ ಮಂದೆಯಿಂದ ಆವೃತನಾದವನೂ, ತನ್ನ ವೇಣುನಾದದಲ್ಲೇ ನಿರತನಾದವನೂ, ದಿವ್ಯಾಭರಣಗಳಿಂದ ಅಲಂಕರಿಸಲ್ಪಟ್ಟವನೂ ಆದ ಗೋವಿಂದನನ್ನು ಭಜಿಸುತ್ತೇನೆ.

೧೦. ಸಾಯಂಕಾಲ; ವನದ ಕೊನೆಯ ಪ್ರದೇಶ; ಕುಸುಮಗಳು ಅರಳುತ್ತಿರುವ ಸಮಯ; (ಯಮುನೆಯ) ಮರಳಿನ ದಡದ ಮೇಲೆ ಚಂದ್ರನ ಬೆಳಕು ಪ್ರಕಾಶಿಸುತ್ತಿದೆ— ಇಂತಹ ಕಾಲದಲ್ಲಿ ಮೂರು ಲೋಕಗಳನ್ನೂ ಆಕರ್ಷಿಸುವ ಶರೀರವುಳ್ಳ, ನರಲೋಕದ ಮತ್ತು ಸುರಲೋಕದ ಗಣಿಕೆಯರನ್ನು ಮೋಹಗೊಳಿಸುವಂತಹ ಆಕೃತಿಯುಳ್ಳ, ಶೃಂಗಾರ ಭಾವದಿಂದಲೂ ನವರಸದಿಂದಲೂ ತುಂಬಿದ ಸಹಸ್ರಗೋಪಕನ್ನಿಕೆಯರಿಂದ ಸೇವಿಸಲ್ಪಡುತ್ತಿರುವ, ರಾಸಕೇಳಿಯಲ್ಲಿ ನಿರತನಾದ, ಎಲ್ಲರಿಗೂ ಪಡೆಯಲು ಸುಲಭನಾದ ಗೋಪಾಲಕೃಷ್ಣನನ್ನು ವಂದಿಸುತ್ತೇನೆ.

# ಶ್ರೀಜಗನ್ನಾಥಸ್ತೋತ್ರಮ್

ಕದಾಚಿತ್ ಕಾಲಿನ್ದೀತಟ-ವಿಪಿನ-ಸಂಗೀತಕ-ರವೋ
ಮುದಾಭೀರೀ-ನಾರೀವದನ-ಕಮಲಾಸ್ವಾದ-ಮಧುಪಃ ।
ರಮಾ-ಶಂಭೂ-ಬ್ರಹ್ಮಾ-ಸುರಪತಿ-ಗಣೇಶಾರ್ಚಿತ-ಪದೋ
ಜಗನ್ನಾಥಃ ಸ್ವಾಮೀ ನಯನಪಥಗಾಮೀ ಭವತು ಮೇ ॥ ೧ ॥

ಭುಜೇ ಸವ್ಯೇ ವೇಣುಂ ಶಿರಸಿ ಶಿಖಿಪುಚ್ಛಂ ಕಟಿತಟೇ
ದುಕೂಲಂ ನೇತ್ರಾನ್ತೇ ಸಹಚರಕಟಾಕ್ಷಂ ವಿಲಸಯನ್ ।
ಸದಾ ಶ್ರೀಮದ್-ವೃನ್ದಾವನ-ವಸತಿ-ಲೀಲಾ-ಪರಿಚಯೋ
ಜಗನ್ನಾಥಃ ಸ್ವಾಮೀ ನಯನಪಥಗಾಮೀ ಭವತು ಮೇ ॥ ೨ ॥

ಮಹಾಂಬೋಧೇಸ್ತೀರೇ ಕನಕ-ರುಚಿರೇ ನೀಲಶಿಖರೇ
ವಸನ್ ಪ್ರಾಸಾದಾನ್ತಃ ಸಹಜ-ಬಲಭದ್ರೇಣ ಬಲಿನಾ ।
ಸುಭದ್ರಾ-ಮಧ್ಯಸ್ಥಃ ಸಕಲ-ಸುರ-ಸೇವಾವಸರದೋ
ಜಗನ್ನಾಥಃ ಸ್ವಾಮೀ ನಯನಪಥಗಾಮೀ ಭವತು ಮೇ ॥ ೩ ॥

ಕೃಪಾ-ಪಾರಾವಾರಃ ಸಜಲ-ಜಲದ-ಶ್ರೇಣಿ-ರುಚಿರೋ
ರಮಾ-ವಾಣೀ-ರಾಮಃ ಸ್ಫುರದಮಲ-ಪಙ್ಕೇರುಹ-ಮುಖಃ ।
ಸುರೇನ್ದ್ರೈರಾರಾಧ್ಯಃ ಶ್ರುತಿಗಣ-ಶಿಖಾ-ಗೀತ-ಚರಿತೋ
ಜಗನ್ನಾಥಃ ಸ್ವಾಮೀ ನಯನಪಥಗಾಮೀ ಭವತು ಮೇ ॥ ೪ ॥

# ಶ್ರೀಜಗನ್ನಾಥಸ್ತೋತ್ರ

೧. ಯಾವನು ಒಂದಾನೊಂದು ಸಮಯ ಆನಂದದಿಂದ ಯಮುನಾನದಿಯ ದಡದ ಮೇಲಿನ ವನರಾಜಿಯನ್ನು ತನ್ನ ಸಂಗೀತದ ಮೂಲಕ ಪ್ರತಿಧ್ವನಿಸುವಂತೆ ಮಾಡಿದನೋ, ಯಾವನು ಗೋಪಿಕಾಸ್ತ್ರೀಯರ ಮುಖಪದ್ಮವನ್ನು ಆಸ್ವಾದಿಸುವ ಭ್ರಮರವಾಗಿದ್ದನೋ, ಯಾವನ ಚರಣಯುಗಲವು ಲಕ್ಷ್ಮೀ, ಶಿವ, ಬ್ರಹ್ಮ, ಇಂದ್ರ ಮತ್ತು ಗಣೇಶರಿಂದ ಪೂಜಿಸಲ್ಪಡುವುದೋ, ಆ ಜಗನ್ನಾಥಸ್ವಾಮಿಯು ನನ್ನ ದೃಷ್ಟಿಪಥಕ್ಕೆ ಗೋಚರನಾಗಲಿ.

೨. ಯಾವನು ವಾಮಹಸ್ತದಲ್ಲಿ ಕೊಳಲನ್ನು ಹಿಡಿದಿರುವನೋ, ಯಾವನು ತಲೆಯ ಮೇಲೆ ನವಿಲುಗರಿಯನ್ನು ಧರಿಸಿರುವನೋ, ಯಾವನು ಕಟಿಪ್ರದೇಶದಲ್ಲಿ ಪೀತಾಂಬರವನ್ನು ಉಟ್ಟುಕೊಂಡಿರುವನೋ, ಯಾವನು ತನ್ನ ಕಣ್ಣುಗಳಿಂದ ಸ್ವಾಭಾವಿಕವಾದ ಕೃಪಾಕಟಾಕ್ಷವನ್ನು ಬೀರುತ್ತಾ ಶ್ರೀವೃಂದಾವನದಲ್ಲಿ ಸದಾ ನೆಲೆಸಿ ತನ್ನ ಲೀಲೆಗಳ ಮೂಲಕ ಭಕ್ತರಿಗೆ ಆತ್ಮಪರಿಚಯವನ್ನು ಮಾಡಿರುವನೋ, ಆ ಜಗನ್ನಾಥಸ್ವಾಮಿಯು ನನ್ನ ದೃಷ್ಟಿಪಥಕ್ಕೆ ಗೋಚರನಾಗಲಿ.

೩. ಮಹಾಸಾಗರದ ತೀರದಲ್ಲಿರುವ ಸುವರ್ಣಸದೃಶವಾದ ನೀಲಪರ್ವತದ ಶಿಖರದ ಮೇಲಿರುವ ಅರಮನೆಯಲ್ಲಿ ಯಾವಾತನು ಸುಭದ್ರಾದೇವಿಯನ್ನು ಮಧ್ಯದಲ್ಲಿರಿಸಿ ವೀರನಾದ ಬಲರಾಮನೊಂದಿಗೆ ವಾಸಮಾಡುತ್ತಾ ಸಕಲ ದೇವತೆಗಳಿಗೂ ತನ್ನ ಸೇವೆಗೈಯುವ ಸುಯೋಗವನ್ನು ಕೊಟ್ಟನೋ, ಆ ಜಗನ್ನಾಥಸ್ವಾಮಿಯು ನನ್ನ ದೃಷ್ಟಿಪಥಕ್ಕೆ ಗೋಚರವಾಗಲಿ.

೪. ಯಾವನು ದಯಾಸಿಂಧುವೋ, ಯಾವನು ನೀಲಮೇಘಶ್ರೇಣಿಯಂತೆ ಶ್ಯಾಮಲಕಾಂತಿಯುಳ್ಳವನೋ, ಯಾವನು ಲಕ್ಷ್ಮೀ ಮತ್ತು ಸರಸ್ವತೀ ಇವರಿಗೆ ಆನಂದನಿಲಯನಾಗಿರುವನೋ, ಯಾವನ ಮುಖವು ಅಮಲವಾದ ಕಮಲದಂತೆ ಶೋಭಿಸುತ್ತಿರುವುದೋ, ಯಾವನು ಸುರಪತಿಗಳಿಂದ ಆರಾಧಿಸಲ್ಪಡುತ್ತಿರುವನೋ, ಯಾವನ ಲೀಲೆಯನ್ನು ಉಪನಿಷತ್ತುಗಳು ಸ್ತುತಿಸುತ್ತಿರುವುವೋ, ಆ ಜಗನ್ನಾಥಸ್ವಾಮಿಯು ನನ್ನ ದೃಷ್ಟಿಪಥಕ್ಕೆ ಗೋಚರವಾಗಲಿ.

ರಥಾರೂಢೋ ಗಚ್ಛನ್ ಪಥಿ ಮಿಲಿತ-ಭೂದೇವ-ಪಟಲೈಃ
ಸ್ತುತಿ-ಪ್ರಾದುರ್ಭಾವಂ ಪ್ರತಿ-ಪದಮುಪಾಕರ್ಣ್ಯ ಸದಯಃ ।
ದಯಾ-ಸಿಂಧುರ್ಬಂಧುಃ ಸಕಲಜಗತಾಂ ಸಿಂಧುಸುತಯಾ
ಜಗನ್ನಾಥಃ ಸ್ವಾಮೀ ನಯನಪಥಗಾಮೀ ಭವತು ಮೇ ॥ ೫ ॥

ಪರಬ್ರಹ್ಮಾಪೀಡಃ ಕುವಲಯದಲೋತ್ಫುಲ್ಲ-ನಯನೋ
ನಿವಾಸೀ ನೀಲಾದ್ರೌ ನಿಹಿತ-ಚರಣೋಽನನ್ತ-ಶಿರಸಿ
ರಸಾನನ್ದೀ ರಾಧಾ-ಸರಸ-ವಪುರಾಲಿಙ್ಗನ-ಸುಖೋ
ಜಗನ್ನಾಥಃ ಸ್ವಾಮೀ ನಯನಪಥಗಾಮೀ ಭವತು ಮೇ ॥ ೬ ॥

ನ ವೈ ಯಾಚೇ ರಾಜ್ಯಂ ನ ಚ ಕನಕ-ಮಾಣಿಕ್ಯ-ವಿಭವಂ
ನ ಯಾಚೇಽಹಂ ರಮ್ಯಾಂ ಸಕಲಜನಕಾಮ್ಯಾಂ ವರವಧೂಮ್।
ಸದಾ ಕಾಲೇ ಕಾಲೇ ಪ್ರಮಥ-ಪತಿನಾ ಗೀತಚರಿತೋ
ಜಗನ್ನಾಥಃ ಸ್ವಾಮೀ ನಯನಪಥಗಾಮೀ ಭವತು ಮೇ ॥ ೭ ॥

ಹರ ತ್ವಂ ಸಂಸಾರಂ ದ್ರುತತರಮಸಾರಂ ಸುರಪತೇ
ಹರ ತ್ವಂ ಪಾಪಾನಾಂ ವಿತತಿಮಪರಾಂ ಯಾದವಪತೇ ।
ಅಹೋ ದೀನಾನಾಥಂ ನಿಹಿತಮಚಲಂ ನಿಶ್ಚಿತಪದಂ
ಜಗನ್ನಾಥಃ ಸ್ವಾಮೀ ನಯನಪಥಗಾಮೀ ಭವತು ಮೇ ॥ ೮ ॥

ಶ್ರೀಜಗನ್ನಾಥಸ್ತೋತ್ರ

೫. ಯಾವನು ದಯಾಸಿಂಧುವೋ, ಯಾವನು ಸಕಲ ಜೀವರಾಶಿಗಳಿಗೂ ಬಂಧುವಾಗಿರುವನೋ, ಯಾವನು ಲಕ್ಷ್ಮೀಸಮೇತ ರಥಾರೂಢನಾಗಿ ದಾರಿಯಲ್ಲಿ ಹೋಗುತ್ತಿರುವಾಗ ಹೆಜ್ಜೆಹೆಜ್ಜೆಗೂ ಬ್ರಾಹ್ಮಣಸಮೂಹಗಳಿಂದ ಮಾಡಲ್ಪಟ್ಟ ಸ್ತೋತ್ರಗಳನ್ನು ಕೇಳಿ ಕರುಣೆಯಿಂದ ತುಂಬಲ್ಪಟ್ಟನೋ ಆ ಜಗನ್ನಾಥಸ್ವಾಮಿಯು ನನ್ನ ದೃಷ್ಟಿಪಥಕ್ಕೆ ಗೋಚರನಾಗಲಿ.

೬. ಯಾವನು ಬ್ರಹ್ಮನ ಶಿರೋಭೂಷಣದಂತಿರುವನೋ, ಯಾವನ ನೇತ್ರದ್ವಯವು ತಾವರೆಯ ದಳದಂತೆ ಅರಳಿರುವುದೋ, ಯಾವನು ನೀಲಾಚಲನಿವಾಸಿಯೋ, ಯಾವನ ಚರಣವು ಅನಂತನ ಹೆಡೆಯ ಮೇಲೆ ನೆಲೆಸಿರುವುದೋ, ಯಾವನು ಪ್ರೇಮರಸಾನಂದಸ್ವರೂಪನೋ, ಯಾವನು ಶ್ರೀರಾಧೆಯ ಪ್ರೇಮಮಯವಾದ ದೇಹದ ಆಲಿಂಗನದಲ್ಲಿ ಆನಂದಿಸುವನೋ ಆ ಜಗನ್ನಾಥಸ್ವಾಮಿಯು ನನ್ನ ದೃಷ್ಟಿಪಥಕ್ಕೆ ಗೋಚರನಾಗಲಿ.

೭. ನಾನು ರಾಜ್ಯವನ್ನು ಯಾಚಿಸುವುದಿಲ್ಲ; ಕನಕಮಾಣಿಕ್ಯಗಳ ಐಶ್ವರ್ಯವು ನನಗೆ ಬೇಡ; ಸಕಲ ಜನರಿಂದಲೂ ಕಾಮಿಸಲ್ಪಡುವ ರಮಣೀಯಳಾದ ವರವಧುವೂ ನನಗೆ ಬೇಡ; ಯಾವನ ಲೀಲೆಯು ಯಾವಾಗಲೂ ಶ್ರೀಮಹಾದೇವನಿಂದ ಸ್ತುತಿಸಲ್ಪಡುವುದೋ, ಆ ಜಗನ್ನಾಥಸ್ವಾಮಿಯು ನನ್ನ ದೃಷ್ಟಿಪಥಕ್ಕೆ ಗೋಚರನಾಗಲಿ.

೮. ಹೇ ಸುರಪತಿ, ನನ್ನ ಈ ನಿಃಸಾರವಾದ ಸಂಸಾರವನ್ನು ತ್ವರೆಯಿಂದ ನಾಶಮಾಡು. ಹೇ ಯದುಪತಿ, ನನ್ನ ಅಪಾರವಾದ ಪಾಪರಾಶಿಯನ್ನು ನಾಶಮಾಡು. ಅಹೋ! ದೀನಜನರಿಗೆ ಆಕಾಂಕ್ಷಣೀಯವೂ, ಶಾಶ್ವತವೂ, ನಿಶ್ಚಿತವೂ ಆದ ಮೋಕ್ಷಸ್ಥಾನವು ಜಗನ್ನಾಥಪುರಿಯಲ್ಲಿ ಸ್ಥಾಪಿತವಾಗಿರುವುದು; ಆ ಜಗನ್ನಾಥಸ್ವಾಮಿಯು ನನ್ನ ದೃಷ್ಟಿಪಥಕ್ಕೆ ಗೋಚರನಾಗಲಿ.

# ಶಿಕ್ಷಾಷ್ಟಕಮ್

ಚೇತೋದರ್ಪಣಮಾರ್ಜನಂ ಭವಮಹಾದಾವಾಗ್ನಿನಿರ್ವಾಪಣಂ
ಶ್ರೇಯಃಕೈರವಚಂದ್ರಿಕಾವಿತರಣಂ ವಿದ್ಯಾವಧೂಜೀವನಮ್ ।
ಆನಂದಾಂಬುಧಿವರ್ಧನಂ ಪ್ರತಿಪದಂ ಪೂರ್ಣಾಮೃತಾಸ್ವಾದನಂ
ಸರ್ವಾತ್ಮಸ್ನಪನಂ ಪರಂ ವಿಜಯತೇ ಶ್ರೀಕೃಷ್ಣ-
ಸಂಕೀರ್ತನಮ್ ॥ ೧ ॥

ನಾಮ್ನಾಮಕಾರಿ ಬಹುಧಾ ನಿಜಸರ್ವಶಕ್ತಿ-
ಸ್ತತ್ರಾರ್ಪಿತಾ ನಿಯಮಿತಃ ಸ್ಮರಣೇ ನ ಕಾಲಃ ।
ಏತಾದೃಶೀ ತವ ಕೃಪಾ ಭಗವನ್ ಮಮಾಪಿ
ದುರ್ದೈವಮೀದೃಶಮಿಹಾಜನಿ ನಾನುರಾಗಃ ॥ ೨ ॥

ತೃಣಾದಪಿ ಸುನೀಚೇನ ತರೋರಪಿ ಸಹಿಷ್ಣುನಾ ।
ಅಮಾನಿನಾ ಮಾನದೇನ ಕೀರ್ತನೀಯಃ ಸದಾ ಹರಿಃ ॥ ೩ ॥

ನ ಧನಂ ನ ಜನಂ ನ ಸುಂದರೀಂ
ಕವಿತಾಂ ವಾ ಜಗದೀಶ ಕಾಮಯೇ ।
ಮಮ ಜನ್ಮನಿ ಜನ್ಮನೀಶ್ವರೇ
ಭವತಾದ್ಭಕ್ತಿರಹೈತುಕೀ ತ್ವಯಿ ॥ ೪ ॥

ಅಯಿ ನನ್ದತನೂಜ ಕಿಂಕರಂ
ಪತಿತಂ ಮಾಂ ವಿಷಮೇ ಭವಾಂಬುಧೌ ।
ಕೃಪಯಾ ತವ ಪಾದಪಂಕಜ-
ಸ್ಥಿತಧೂಲೀಸದೃಶಂ ವಿಚಿಂತಯ ॥ ೫ ॥

# ಶಿಕ್ಷಾಷ್ಟಕ

೧. ಮನಸ್ಸೆಂಬ ಕನ್ನಡಿಯನ್ನು ಶುದ್ಧಗೊಳಿಸುವ, ಸಂಸಾರವೆಂಬ ದೊಡ್ಡ ಕಾಡ್ಗಿಚ್ಚನ್ನು ನಂದಿಸುವ, ಶ್ರೇಯಸ್ಸೆಂಬ ನೈದಿಲೆಯ ಮೇಲೆ ಚಂದ್ರಿಕೆಯನ್ನು ಸುರಿಸುವ, ಪರಾವಿದ್ಯೆಯೆಂಬ ವಧುವಿಗೆ ಜೀವನಸ್ವರೂಪವಾದ, ಆನಂದಸಾಗರವನ್ನು ವರ್ಧಿಸುವ, ಪ್ರತಿಕ್ಷಣವೂ ಪೂರ್ಣಾಮೃತದಂತೆ ರುಚಿಯನ್ನುಂಟುಮಾಡುವ, ಎಲ್ಲಾ ಆತ್ಮರಿಗೆ ಸ್ನಾನವನ್ನು ಮಾಡಿಸುವ ಶ್ರೀಕೃಷ್ಣಸಂಕೀರ್ತನವು ಸರ್ವೋತ್ಕೃಷ್ಟವಾಗಿದೆ.

೨. ನಿನ್ನ ನಾಮಗಳು ಹಲವು ಬಗೆಯಿಂದ ವ್ಯಕ್ತವಾಗಿವೆ; ಅವುಗಳಲ್ಲಿ ನಿನ್ನ ಸರ್ವಶಕ್ತಿಯನ್ನು ತುಂಬಿರುವೆ; ನಿನ್ನ ನಾಮಸ್ಮರಣೆ ಮಾಡಬೇಕಾದರೆ ಇಂತಹ ಕಾಲದಲ್ಲೇ ಅದನ್ನು ಮಾಡಬೇಕೆಂಬ ವಿಧಿಯಿಲ್ಲ; ನಿನ್ನ ಕೃಪೆ ಹೀಗಿದ್ದರೂ, ಹೇ ಭಗವಂತ, ದುರ್ದೈವವಶದಿಂದ ನನಗೆ ಈ ಜನ್ಮದಲ್ಲೂ ನಿನ್ನ ಮೇಲೆ ಅನುರಾಗ ಹುಟ್ಟಲಿಲ್ಲ.

೩. ತೃಣಕ್ಕಿಂತಲೂ ನಿಕೃಷ್ಟನಾಗಿ, ಮರಕ್ಕಿಂತಲೂ ಸಹನೆಯುಳ್ಳವನಾಗಿ, ತನ್ನ ಅಭಿಮಾನವನ್ನು ತೊರೆದು ಇತರರಿಗೆ ಮನ್ನಣೆಯನ್ನು ಕೊಡುತ್ತಾ ಯಾವಾಗಲೂ ಶ್ರೀಹರಿಯ ಕೀರ್ತನೆಯನ್ನು ಮಾಡಬೇಕು.

೪. ಹೇ ಜಗದೀಶ, ನನಗೆ ಧನ ಬೇಡ, ಜನ ಬೇಡ, ಸುಂದರಿಯರಾದ ಯುವತಿಯರೂ ಬೇಡ, ಕವಿತ್ವಶಕ್ತಿಯೂ ಬೇಡ; ಆದರೆ ನನಗೆ ಪ್ರತಿಜನ್ಮದಲ್ಲಿಯೂ ಈಶ್ವರನಾದ ನಿನ್ನಲ್ಲಿ ನಿಸ್ಸ್ವಾರ್ಥವಾದ ಭಕ್ತಿಯಿರಲಿ.

೫. ಹೇ ನಂದಸುತನಾದ ಕೃಷ್ಣ, ವಿಷಮವಾದ ಸಂಸಾರಸಾಗರದಲ್ಲಿ ಬಿದ್ದಿರುವ ದಾಸನಾದ ನನ್ನನ್ನು ನಿನ್ನ ಅಡಿದಾವರೆಯ ಧೂಳಿಗೆ ಸಮಾನನೆಂದು ದಯವಿಟ್ಟು ಎಣಿಸು.

ನಯನಂ ಗಲದಶ್ರುಧಾರಯಾ
ವದನಂ ಗದ್ಗದರುದ್ಧಯಾ ಗಿರಾ ।
ಪುಲಕೈರ್ನಿಚಿತಂ ವಪುಃ ಕದಾ
ತವ ನಾಮಗ್ರಹಣೇ ಭವಿಷ್ಯತಿ ॥ ೬ ॥

ಯುಗಾಯಿತಂ ನಿಮೇಷೇಣ ಚಕ್ಷುಷಾ ಪ್ರಾವೃಷಾಯಿತಮ್ ।
ಶೂನ್ಯಾಯಿತಂ ಜಗತ್ ಸರ್ವಂ ಗೋವಿಂದವಿರಹೇಣ ಮೇ ॥ ೭ ॥

ಆಶ್ಲಿಷ್ಯ ವಾ ಪಾದರತಾಂ ಪಿನಷ್ಟು ಮಾಂ
ಅದರ್ಶನಾತ್ ಮರ್ಮಹತಾಂ ಕರೋತು ವಾ ।
ಯಥಾ ತಥಾ ವಾ ವಿದಧಾತು ಲಂಪಟೋ
ಮತ್ಪ್ರಾಣನಾಥಸ್ತು ಸ ಏವ ನಾಪರಃ ॥ ೮ ॥

## ಶಿಕ್ಷಾಷ್ಟಕ

೬. ನಿನ್ನ ನಾಮವನ್ನು ಉಚ್ಚರಿಸಿದಾಗ ಎಂದು ನನ್ನ ಕಣ್ಣುಗಳಲ್ಲಿ ಆನಂದಾಶ್ರುಗಳು ಹರಿದು, ಬಾಯಲ್ಲಿ ಮಾತುಗಳು ನಿಂತುಹೋಗಿ, ಶರೀರವು ಪುಲಕದಿಂದ ತುಂಬುವುದು?

೭. ಗೋವಿಂದನ ವಿರಹದಿಂದ ನಿಮಿಷವು ಯುಗದಂತಾಯಿತು, ಕಣ್ಣುಗಳಲ್ಲಿ ಕಂಬನಿಗಳು ಮಳೆಯಂತೆ ಸುರಿದವು ಮತ್ತು ಜಗತ್ತೆಲ್ಲಾ ಶೂನ್ಯವಾಯಿತು.

೮. ಆ ಸ್ವೇಚ್ಛಾಚಾರಿಯು ನನ್ನನ್ನು ಆಲಂಗಿಸಿ ಅದುಮಿಬಿಡಲಿ, ಅಥವಾ ನನಗೆ ಕಾಣಿಸಿಕೊಳ್ಳದೆ ಮರ್ಮಸ್ಥಾನಗಳಲ್ಲಿ ಹೊಡೆಯಲಿ, ಅಥವಾ ನನಗೆ ಏನು ಬೇಕಾದರೂ ಮಾಡಲಿ; ಅವನೇ ನನ್ನ ಪ್ರಾಣನಾಥನು, ಇನ್ನು ಯಾರೂ ಅಲ್ಲ.

# ಬ್ರಹ್ಮಕೃತರಾಮಸ್ತವಃ

ಭವಾನ್ನಾರಾಯಣೋ ದೇವಃ ಶ್ರೀಮಾಂಶ್ಚಕ್ರಾಯುಧೋ ವಿಭುಃ ।
ಏಕಶೃಂಗೋ ವರಾಹಸ್ತ್ವಂ ಭೂತಭವ್ಯಸಪತ್ನಜಿತ್ ॥ ೧ ॥

ಅಕ್ಷರಂ ಬ್ರಹ್ಮ ಸತ್ಯಂ ಚ ಮಧ್ಯೇ ಚಾನ್ತೇ ಚ ರಾಘವ ।
ಲೋಕಾನಾಂ ತ್ವಂ ಪರೋ ಧರ್ಮೋ ವಿಷ್ವಕ್ಸೇನಶ್ಚತುರ್ಭುಜಃ ॥ ೨ ॥

ಶಾರ್ಙ್ಗಧನ್ವಾ ಹೃಷೀಕೇಶಃ ಪುರುಷಃ ಪುರುಷೋತ್ತಮಃ ।
ಅಜಿತಃ ಖಡ್ಗಧೃಗ್ವಿಷ್ಣುಃ ಕೃಷ್ಣಶ್ಚೈವ ಬೃಹದ್ಬಲಃ ॥ ೩ ॥

ಸೇನಾನೀಗ್ರಾಮಣೀಶ್ಚ ತ್ವಂ ಬುದ್ಧಿಃ ಸತ್ತ್ವಂ ಕ್ಷಮಾ ದಮಃ ।
ಪ್ರಭವಶ್ಚಾಪ್ಯಯಶ್ಚ ತ್ವಮುಪೇಂದ್ರೋ ಮಧುಸೂದನಃ ॥ ೪ ॥

ಇಂದ್ರಕರ್ಮಾ ಮಹೇಂದ್ರಸ್ತ್ವಂ ಪದ್ಮನಾಭೋ ರಣಾಂತಕೃತ್ ।
ಶರಣ್ಯಂ ಶರಣಂ ಚ ತ್ವಾಮಾಹುರ್ದಿವ್ಯಾ ಮಹರ್ಷಯಃ ।
ಸಹಸ್ರಶೃಂಗೋ ವೇದಾತ್ಮಾ ಶತಜಿಹ್ವೋ ಮಹರ್ಷಭಃ ॥ ೫ ॥

# ಬ್ರಹ್ಮಕೃತರಾಮಸ್ತವ

೧. ಚಕ್ರಾಯುಧಧಾರಿಯೂ, ಸರ್ವವ್ಯಾಪಕನೂ, ಜೀವನೂ ಆದ ಶ್ರೀಮನ್ನಾರಾಯಣನು ನೀನೇ; ಏಕಶೃಂಗನಾದ ಆದಿವರಾಹನೂ ನೀನೇ, ಹಿಂದೆ ಹುಟ್ಟಿದ ಮುಂದೆ ಹುಟ್ಟತಕ್ಕ ಶತ್ರುಗಳನ್ನು ಜಯಿಸುವವನು ನೀನೇ.

೨. ಹೇ ರಾಘವ, ನೀನೇ ಅಕ್ಷರ, ಬ್ರಹ್ಮ ಮತ್ತು ಸತ್ಯ; (ಆದಿಯಲ್ಲಿಯೂ), ಮಧ್ಯದಲ್ಲಿಯೂ, ಅಂತ್ಯದಲ್ಲಿಯೂ ಇರುವವನೂ ನೀನೇ; ಲೋಕಗಳ ಶ್ರೇಷ್ಠವಾದ ಧರ್ಮ ನೀನೇ; ಸರ್ವವ್ಯಾಪಕವಾದ ಸೇನೆಯುಳ್ಳವನೂ ಚತುರ್ಭುಜನೂ ನೀನೇ.

೩. ಶಾರ್ಙ್ಗವೆಂಬ ಧನುಸ್ಸನ್ನು ನೀನೇ ಧರಿಸಿರುವೆ; ಇಂದ್ರಿಯಗಳ ನಿಯಾಮಕ ನೀನೇ; ಹೃದಯಕಮಲಧಲ್ಲಿ ವಾಸಿಸುವವನು ನೀನೇ; ನೀನೇ ಪುರುಷೋತ್ತಮ ಮತ್ತು ಯಾರಿಂದಲೂ ಜಯಿಸಲ್ಪಡದಿರುವವನು; ನಂದಕವೆಂಬ ಖಡ್ಗವನ್ನು ಧರಿಸಿರುವವನು ನೀನೇ; ನೀನು ಸರ್ವವ್ಯಾಪಕ, ಕೃಷ್ಣವರ್ಣವುಳ್ಳವನು ಮತ್ತು ಮಹತ್ತಾದ ಧಾರಣಸಾಮರ್ಥ್ಯವುಳ್ಳವನು.

೪. ನೀನು ದೇವಸೇನೆಗಳ ನಿರ್ವಾಹಕ ಮತ್ತು ದಿವ್ಯ-ಜನಪದಾದಿಗಳ ಪಾಲಕ; ನೀನೇ ಬುದ್ಧಿ, ಸತ್ತ್ವ, ಕ್ಷಮೆ ಮತ್ತು ಇಂದ್ರಿಯನಿಗ್ರಹಗಳ ಪ್ರವರ್ತಕ; ಜಗತ್ತಿನ ಉತ್ಪತ್ತಿಸ್ಥಾನ ಮತ್ತು ಲಯಸ್ಥಾನ ನೀನೇ; ಇಂದ್ರನ ತಮ್ಮನಾಗಿ ಅವತರಿಸಿದವನು ಮತ್ತು ಮಧುವೆಂಬ ರಾಕ್ಷಸನನ್ನು ಸಂಹರಿಸಿದವನು ನೀನೇ.

೫. ಇಂದ್ರನ ಕರ್ಮದಂತೆ ಪರಿಪಾಲನ ಕರ್ಮವುಳ್ಳವನು ಮತ್ತು ನಿರತಿಶಯವಾದ ಐಶ್ವರ್ಯಸಂಪನ್ನನು ನೀನೇ; ನೀನು ಪದ್ಮನಾಭನು, ರಣದಲ್ಲಿ ಶತ್ರುಗಳಿಗೆ ನಾಶಕನು, ಶರಣುಮಾಡಲು ಅರ್ಹನಾದ ನಿನ್ನನ್ನು ರಕ್ಷಕನೆಂದು ದಿವ್ಯರಾದ ಮಹರ್ಷಿಗಳು ಹೇಳುವರು; ಸಹಸ್ರಶಾಖೆಗಳುಳ್ಳ ಅನೇಕ ವಿಧವಾದ ಚೋದನೆಗಳುಳ್ಳ ವೇದಾತ್ಮನು ನೀನೇ; ಶ್ರೇಷ್ಠತಮನೂ ನೀನೇ.

ತ್ವಂ ತ್ರಯಾಣಾಂ ಹಿ ಲೋಕಾನಾಮಾದಿಕರ್ತಾ ಸ್ವಯಂಪ್ರಭುಃ ।
ಸಿದ್ಧಾನಾಮಪಿ ಸಾಧ್ಯಾನಾಮಾಶ್ರಯಶ್ಚಾಸಿ ಪೂರ್ವಜಃ ॥ ೬ ॥

ತ್ವಂ ಯಜ್ಞಸ್ತ್ವಂ ವಷಟ್ಕಾರಸ್ತ್ವಮೋಂಕಾರಃ ಪರಂತಪಃ ।
ಪ್ರಭವಂ ನಿಧನಂ ವಾ ತೇ ನ ವಿದುಃ ಕೋ ಭವಾನಿತಿ ॥ ೭ ॥

ದೃಶ್ಯಸೇ ಸರ್ವಭೂತೇಷು ಬ್ರಾಹ್ಮಣೇಷು ಚ ಗೋಷು ಚ ।
ದಿಕ್ಷು ಸರ್ವಾಸು ಗಗನೇ ಪರ್ವತೇಷು ವನೇಷು ಚ ॥ ೮ ॥

ಸಹಸ್ರಚರಣಃ ಶ್ರೀಮಾನ್ ಶತಶೀರ್ಷಃ ಸಹಸ್ರದೃಕ್ ।
ತ್ವಂ ಧಾರಯಸಿ ಭೂತಾನಿ ವಸುಧಾಂ ಚ ಸಪರ್ವತಾಮ್ ॥ ೯ ॥

ಅನ್ತೇ ಪೃಥಿವ್ಯಾಃ ಸಲಿಲೇ ದೃಶ್ಯಸೇ ತ್ವಂ ಮಹೋರಗಃ ।
ತ್ರೀನ್ ಲೋಕಾನ್ ಧಾರಯನ್ ರಾಮ ದೇವಗಂಧರ್ವ-
ದಾನವಾನ್ ॥ ೧೦ ॥

ನಿಮೇಷಸ್ತೇ ಭವೇದ್ರಾತ್ರಿಃ ಉನ್ಮೇಷಸ್ತೇ ಭವೇದ್ದಿವಾ ।
ಸಂಸ್ಕಾರಾಸ್ತೇಽಭವನ್ವೇದಾಃ ನ ತದಸ್ತಿ ತ್ವಯಾ ವಿನಾ ॥ ೧೧ ॥

ಜಗತ್ಸರ್ವಂ ಶರೀರಂ ತೇ ಸ್ಥೈರ್ಯಂ ತೇ ವಸುಧಾತಲಮ್ ।
ಅಗ್ನಿಃ ಕೋಪಃ ಪ್ರಸಾದಸ್ತೇ ಸೋಮಃ ಶ್ರೀವತ್ಸಲಕ್ಷಣಃ ॥ ೧೨ ॥

ತ್ವಯಾ ಲೋಕಾಸ್ತ್ರಯಃ ಕ್ರಾನ್ತಾಃ ಪುರಾಣೇ ವಿಕ್ರಮೈಸ್ತ್ರಿಭಿಃ ।
ಮಹೇಂದ್ರಶ್ಚ ಕೃತೋ ರಾಜಾ ಬಲಿಂ ಬಧ್ವಾ
ಮಹಾಸುರಮ್ ॥ ೧೩ ॥

ಸೀತಾ ಲಕ್ಷ್ಮೀರ್ಭವಾನ್ ವಿಷ್ಣುಃ ದೇವಃ ಕೃಷ್ಣಃ ಪ್ರಜಾಪತಿಃ ।
ವಧಾರ್ಥಂ ರಾವಣಸ್ಯೇಹ ಪ್ರವಿಷ್ಟೋ ಮಾನುಷೀಂ
ತನುಮ್ ॥ ೧೪ ॥

೬. ಮೂರು ಲೋಕಗಳಿಗೂ ನೀನೇ ಆದಿಕರ್ತ ಮತ್ತು ಸ್ವಯಂಪ್ರಭು; ಪೂರ್ವಜನಾದ ನೀನು ಸಿದ್ಧರಿಗೂ ಮತ್ತು ಸಾಧ್ಯರಿಗೂ ಆಶ್ರಯನು.

೭. ನೀನೇ ಯಜ್ಞ, ವಷಟ್ಕಾರ ಮತ್ತು ಪ್ರಣವ; ನೀನೇ ಉತ್ಕೃಷ್ಟವಾದ ತಪಸ್ಸು; ನಿನ್ನ ಉತ್ಪತ್ತಿಯನ್ನಾಗಲೀ ಲಯವನ್ನಾಗಲೀ ಅಥವಾ ನೀನು ಯಾರೆಂಬುದನ್ನಾಗಲೀ ಯಾರೂ ಅರಿಯರು.

೮. ಸರ್ವಭೂತಗಳಲ್ಲಿಯೂ, ಬ್ರಾಹ್ಮಣರಲ್ಲಿಯೂ, ಗೋವುಗಳಲ್ಲಿಯೂ, ಸರ್ವದಿಕ್ಕುಗಳಲ್ಲಿಯೂ, ಅಂತರಿಕ್ಷದಲ್ಲಿಯೂ, ಗಿರಿವನಗಳಲ್ಲಿಯೂ ನೀನೇ ಕಾಣಲ್ಪಡುತ್ತೀಯೆ.

೯. ನೀನು ಶ್ರೀದೇವಿಯಿಂದ ಕೂಡಿರುವೆ, ನಿನಗೆ ಸಹಸ್ರಚರಣಗಳಿವೆ, ಸಹಸ್ರಶಿರಗಳಿವೆ, ಸಹಸ್ರನಯನಗಳಿವೆ; ನೀನೇ ಮಹಾಭೂತಗಳನ್ನೂ ಪರ್ವತಗಳಿಂದ ಕೂಡಿದ ಭೂಮಿಯನ್ನೂ ಹೊತ್ತಿರುವೆ.

೧೦. ಹೇ ರಾಮ, ಭೂಮಿಯ ನಾಶಕಾಲದಲ್ಲಿ ನೀನೇ ಶೇಷಶಾಯಿಯಾಗಿ ಸಮುದ್ರಜಲಮಧ್ಯದಲ್ಲಿ ಮೂರು ಲೋಕಗಳನ್ನೂ, ದೇವದಾನವ ಗಂಧರ್ವರನ್ನೂ ಧರಿಸಿರುತ್ತೀಯೆ.

೧೧. ನೀನು ಕಣ್ಣುಮುಚ್ಚಿದರೆ ರಾತ್ರಿ, ತೆರೆದರೆ ಹಗಲು; ನಿನ್ನ ನಿಃಶ್ವಾಸವಾದ ವೇದಗಳು ಪ್ರವೃತ್ತಿನಿವೃತ್ತಿ ಧರ್ಮಗಳನ್ನು ಬೋಧಿಸುತ್ತವೆ. ನಿನ್ನನ್ನು ಬಿಟ್ಟರೆ ಯಾವುದೂ ಇಲ್ಲ.

೧೨. ಈ ಸಮಸ್ತ ವಿಶ್ವವೇ ನಿನ್ನ ಶರೀರ; ಈ ಭೂಮಿಯೇ ನಿನ್ನ ಸ್ಥೈರ್ಯ; ಅಗ್ನಿಯೇ ನಿನ್ನ ಕೋಪ, ಚಂದ್ರನೇ ನಿನ್ನ ಪ್ರಸನ್ನತೆ; ಶ್ರೀವತ್ಸವೆಂಬ ಚಿಹ್ನೆಯನ್ನು ನೀನೇ ಧರಿಸಿರುವೆ.

೧೩. ಹಿಂದೆ ನೀನೇ ಮೂರು ಪಾದಗಳಿಂದ ತ್ರಿಲೋಕಗಳನ್ನು ಆಕ್ರಮಿಸಿ ಮಹಾಸುರನಾದ ಬಲಿಚಕ್ರವರ್ತಿಯನ್ನು ಬಂಧಿಸಿ ಮಹೇಂದ್ರನನ್ನು ರಾಜನನ್ನಾಗಿ ಮಾಡಿದೆ.

೧೪. ಸೀತೆಯೇ ಲಕ್ಷ್ಮೀದೇವಿ, ನೀನೇ ವಿಷ್ಣು, ನೀನೇ ಸ್ವಪ್ರಕಾಶರೂಪನು, ಕೃಷ್ಣವರ್ಣವುಳ್ಳವನು ಮತ್ತು ಪ್ರಜಾಪತಿ; ರಾವಣನ ವಧಾರ್ಥವಾಗಿ ನೀನು ಮಾನುಷರೂಪವನ್ನು ಧರಿಸಿ ಬಂದಿರುವೆ.

# ಶ್ರೀರಾಮಸ್ತೋತ್ರಮ್

ಯಃ ಪೃಥ್ವೀಭರವಾರಣಾಯ ದಿವಿಜೈಃ ಸಂಪ್ರಾರ್ಥಿತಶ್ಚಿನ್ಮಯಃ
ಸಂಜಾತಃ ಪೃಥಿವೀತಲೇ ರವಿಕುಲೇ ಮಾಯಾಮನುಷ್ಯೋಽವ್ಯಯಃ।
ನಿಶ್ಚಕ್ರಂ ಹತರಾಕ್ಷಸಃ ಪುನರಗಾದ್ ಬ್ರಹತ್ವಮಾದ್ಯಂ ಸ್ಥಿರಾಂ
ಕೀರ್ತಿಂ ಪಾಪಹರಾಂ ವಿಧಾಯ ಜಗತಾಂ ತಂ ಜಾನಕೀಶಂ
ಭಜೇ ॥ ೧ ॥

ವಿಶ್ವೋದ್ಭವಸ್ಥಿತಿಲಯಾದಿಷು ಹೇತುಮೇಕಂ
ಮಾಯಾಶ್ರಯಂ ವಿಗತಮಾಯಮಚಿನ್ತ್ಯಮೂರ್ತಿಮ್ ।
ಆನಂದಸಾಂದ್ರಮಮಲಂ ನಿಜಬೋಧರೂಪಂ
ಸೀತಾಪತಿಂ ವಿದಿತತತ್ತ್ವಮಹಂ ನಮಾಮಿ ॥ ೨ ॥

ಪರಧನಪರದಾರವರ್ಜಿತಾನಾಂ
ಪರಗುಣಭೂತಿಸುತುಷ್ಟಮಾನಸಾನಾಮ್ ।
ಪರಹಿತನಿರತಾತ್ಮನಾಂ ಸುಸೇವ್ಯಂ
ರಘುವರಮಂಬುಜಲೋಚನಂ ಪ್ರಪದ್ಯೇ ॥ ೩ ॥

ಅಹಂ ಪ್ರಪನ್ನೋಽಸ್ಮಿ ಪದಾಂಬುಜಂ ಪ್ರಭೋ
ಭವಾಪವರ್ಗಂ ತವ ಯೋಗಿಭಾವಿತಮ್ ।
ಯಥಾಽಂಜಸಾಽಜ್ಞಾನಮಪಾರವಾರಿಧಿಂ
ಸುಖಂ ತರಿಶ್ಯಾಮಿ ತಥಾಽನುಶಾಧಿ ಮಾಮ್ ॥ ೪ ॥

# ರಾಮಸ್ತೋತ್ರ

೧ ಪೃಥ್ವಿಯ ಭಾರವನ್ನು ನಾಶಮಾಡುವುದಕ್ಕಾಗಿ ದೇವತೆಗಳಿಂದ ಪ್ರಾರ್ಥಿತನಾಗಿ, ರವಿಕುಲದಲ್ಲಿ ಮಾಯಾಮನುಷ್ಯನಾಗಿ ಯಾರು ಹುಟ್ಟಿದನೋ, ರಾಕ್ಷಸರನ್ನು ನಿಶ್ಶೇಷವಾಗಿ ನಾಶಮಾಡಿದ ಮೇಲೆ ಸ್ಥಿರವಾದ ಪಾಪಹರವಾಗಿರುವ ಕೀರ್ತಿಯನ್ನು ಜಗತ್ತಿನಲ್ಲಿ ಸ್ಥಾಪಿಸಿ ಪುನಃ ತನ್ನ ಆದ್ಯ ಬ್ರಹ್ಮತ್ವಕ್ಕೆ ಹೋದನೋ, ಅಂತಹ ಅವ್ಯಯನೂ, ಚಿನ್ಮಯನೂ ಆದ ಜಾನಕೀಶನನ್ನು ಭಜಿಸುತ್ತೇನೆ.

೨. ವಿಶ್ವದ ಉದ್ಭವ, ಸ್ಥಿತಿ, ಲಯಗಳಿಗೆ ಅದ್ವಿತೀಯ ಕಾರಣನೂ, ಮಾಯೆಗೆ ಆಶ್ರಯನಾದರೂ ಮಾಯಾರಹಿತನೂ, ಅಚಿಂತ್ಯಮೂರ್ತಿಯೂ, ಆನಂದಸಾಂದ್ರನೂ, ವಿಮಲಸ್ವರೂಪನೂ, ನಿಜಬೋಧಸ್ವರೂಪನೂ, ತತ್ತ್ವವನ್ನು ಅರಿತವನೂ ಆದ ಸೀತಾಪತಿಯನ್ನು ನಮಿಸುತ್ತೇನೆ.

೩. ಪರಧನ ಮತ್ತು ಪರಸ್ತ್ರೀಯರನ್ನು ತ್ಯಜಿಸಿದವರಿಗೆ, ಅನ್ಯರ ಸಂಪತ್ತು ಮತ್ತು ಸುಗುಣಗಳನ್ನು ನೋಡಿ ಸಂತುಷ್ಟರಾದವರಿಗೆ, ಯಾವಾಗಲೂ ಪರಹಿತದಲ್ಲಿ ನಿರತರಾಗಿರುವವರಿಗೆ ಸುಲಭಸೇವ್ಯನೂ, ಅಂಬುಜಾಕ್ಷನೂ ಆದ ರಘುವರನಲ್ಲಿ ಶರಣಾಗತನಾಗುತ್ತೇನೆ.

೪. ಹೇ ಪ್ರಭು, ಯೋಗಿಗಳು ಧ್ಯಾನಿಸುವ, ಸಂಸಾರಸಾಗರದಿಂದ ಪಾರುಮಾಡುವ, ನಿನ್ನ ಪಾದಪದ್ಮಗಳಲ್ಲಿ ನಾನು ಪ್ರಪನ್ನನಾಗುತ್ತೇನೆ; ಅಪಾರವಾದ ಅಜ್ಞಾನವೆಂಬ ಸಮುದ್ರವನ್ನು ಶೀಘ್ರವಾಗಿ ಮತ್ತು ಸುಖವಾಗಿ ದಾಟುವಂತೆ ನನಗೆ ಬೋಧಿಸು.

# ಶ್ರೀರಾಮಸ್ತುತಿಃ

ಯತಸ್ಸರ್ವಾಣಿ ಭೂತಾನಿ ಪ್ರತಿಭಾಂತಿ ಸ್ಥಿತಾನಿ ಚ ।
ಯತ್ರೈವೋಪಶಮಂ ಯಾಂತಿ ತಸ್ಮೈ ಸತ್ಯಾತ್ಮನೇ ನಮಃ ॥ ೧ ॥

ಜ್ಞಾತಾ ಜ್ಞಾನಂ ತಥಾ ಜ್ಞೇಯಂ ದ್ರಷ್ಟಾ ದರ್ಶನದೃಶ್ಯಭೂಃ ।
ಕರ್ತಾ ಹೇತುಃ ಕ್ರಿಯಾ ಯಸ್ಮಾತ್ ತಸ್ಮೈ
ಜ್ಞಪ್ತ್ಯಾತ್ಮನೇ ನಮಃ ॥ ೨ ॥

ಸ್ಫುರಂತಿ ಸೀಕರಾ ಯಸ್ಮಾದಾನಂದಸ್ಯಾಂಬರೇಽವನೌ ।
ಸರ್ವೇಷಾಂ ಜೀವನಂ ತಸ್ಮೈ ಬ್ರಹ್ಮಾನಂದಾತ್ಮನೇ ನಮಃ ॥ ೩ ॥

ದಿವಿ ಭೂಮೌ ತಥಾಽಽಕಾಶೇ ಬಹಿರಂತಶ್ಚ ಮೇ ವಿಭುಃ ।
ಯೋ ವಿಭಾತ್ಯವಭಾಸಾತ್ಮಾ ತಸ್ಮೈ ಸರ್ವಾತ್ಮನೇ ನಮಃ ॥ ೪ ॥

# ಶ್ರೀರಾಮಸ್ತುತಿ

೧. ಯಾರಿಂದ ಭೂತಗಳೆಲ್ಲಾ ಬರುವುವೋ, ಯಾರಲ್ಲಿ ಎಲ್ಲವೂ ಇರುವುದೋ, ಕೊನೆಗೆ ಯಾರಲ್ಲಿ ಎಲ್ಲವೂ ಲಯವನ್ನು ಹೊಂದುವುದೋ ಅಂತಹ ಸತ್ಯಾತ್ಮನಿಗೆ ನಮಸ್ಕಾರ.

೨. ಯಾರು ಜ್ಞಾತೃವಾಗಿರುವನೋ, ಜ್ಞಾನವಾಗಿರುವನೋ, ಜ್ಞೇಯವಾಗಿರುವನೋ, ಯಾರು ದ್ರಷ್ಟೃ, ದರ್ಶನ, ದೃಶ್ಯವಾಗಿರುವನೋ, ಯಾರು ಕರ್ತೃ, ಕ್ರಿಯೆ, ಕಾರಣನಾಗಿರುವನೋ ಅಂತಹ ಜ್ಞಪ್ತ್ಯಾತ್ಮನಿಗೆ ನಮಸ್ಕಾರ.

೩. ಯಾರಿಂದ ಆಕಾಶ ಮತ್ತು ಭೂಮಿಯಲ್ಲಿ ಬೀಳುವ ಆನಂದಬಿಂದುಗಳು ಎಲ್ಲರ ಜೀವನವಾಗಿದೆಯೋ, ಅಂತಹ ಬ್ರಹ್ಮಾನಂದಾತ್ಮನಿಗೆ ನಮಸ್ಕಾರ.

೪. ಯಾರು ಸ್ವರ್ಗದಲ್ಲಿಯೂ, ಭೂಮಿಯಲ್ಲಿಯೂ, ಆಕಾಶದಲ್ಲಿಯೂ, ನನ್ನ ಒಳಗೂ ಮತ್ತು ಹೊರಗೂ ತೋರಿಸಿಕೊಳ್ಳುತ್ತಾನೆಯೋ, ಯಾರು ವಿಭುಸ್ವರೂಪನೋ ಮತ್ತು ಜ್ಞಾನಾತ್ಮನೋ ಅಂತಹ ಸರ್ವಾತ್ಮನಿಗೆ ನಮಸ್ಕಾರ.

# ಶ್ರೀರಾಮಚಂದ್ರಸ್ತವಃ

ಯನ್ಮಾಯಾವಶವರ್ತಿ ವಿಶ್ವಮಖಿಲಂ
ಬ್ರಹ್ಮಾದಿದೇವಾಸುರಾಃ
ಯತ್ಸತ್ತ್ವಾದಮೃಷೈವ ಭಾತಿ ಸಕಲಂ
ರಜ್ಜೌ ಯಥಾಹೇರ್ಭ್ರಮಃ ।
ಯತ್ಪಾದಪ್ಲವಮೇಕಮೇವ ಹಿ
ಭವಾಂಭೋಧೇಸ್ತಿತೀರ್ಷಾವತಾಂ
ವಂದೇಽಹಂ ತಮಶೇಷಕಾರಣಪರಂ
ರಾಮಾಖ್ಯಮೀಶಂ ಹರಿಮ್ ॥ ೧ ॥

ಪ್ರಸನ್ನತಾಂ ಯಾ ನ ಗತಾಭಿಷೇಕತ-
ಸ್ತಥಾ ನ ಮಮ್ಲೌ ವನವಾಸದುಃಖತಃ ।
ಮುಖಾಂಬುಜಶ್ರೀ ರಘುನಂದನಸ್ಯ ಮೇ
ಸದಾಸ್ತು ಸಾ ಮಂಜುಲಮಂಗಲಪ್ರದಾ ॥ ೨ ॥

ನೀಲಾಂಬುಜಶ್ಯಾಮಲಕೋಮಲಾಂಗಂ
ಸೀತಾಸಮಾರೋಪಿತವಾಮಭಾಗಮ್ ।
ಪಾಣೌ ಮಹಾಸಾಯಕಚಾರುಚಾಪಂ
ನಮಾಮಿ ರಾಮಂ ರಘುವಂಶನಾಥಮ್ ॥ ೩ ॥

ಸಾಂದ್ರಾನಂದಪಯೋದಸೌಭಗತನುಂ
ಪೀತಾಂಬರಂ ಸುಂದರಂ
ಪಾಣೌ ಬಾಣಶರಾಸನಂ ಕಟಿಲಸತ್-
ತೂಣೀರಭಾರಂ ವರಮ್ ।
ರಾಜೀವಾಯತಲೋಚನಂ ಧೃತಜಟಾ-
ಜೂಟೇನ ಸಂಶೋಭಿತಂ
ಸೀತಾಲಕ್ಷ್ಮಣಸಂಯುತಂ ಪಥಿಗತಂ
ರಾಮಾಭಿರಾಮಂ ಭಜೇ ॥ ೪ ॥

# ಶ್ರೀರಾಮಚಂದ್ರಸ್ತವ

೧. ಯಾರ ಮಾಯೆಯ ವಶದಲ್ಲಿ ಅಖಿಲವಿಶ್ವವು, ಬ್ರಹ್ಮಾದಿದೇವತೆಗಳು ಮತ್ತು ಅಸುರರು ಇರುವರೋ, ಯಾರ ಅಸ್ತಿತ್ವದಿಂದ ಹಗ್ಗದಲ್ಲಿ ಕಾಣುವ ಹಾವಿನಂತೆ ಎಲ್ಲವೂ ಸತ್ಯದಂತೆ ಕಾಣುತ್ತಿದೆಯೋ, ಯಾರ ಪಾದವು ಸಂಸಾರಸಾಗರವನ್ನು ದಾಟಬೇಕೆಂದಿರುವವರಿಗೆ ಅದ್ವಿತೀಯವಾದ ನೌಕೆಯಾಗಿರುವುದೋ, ಅಂತಹ ಅಶೇಷಕಾರಣಾತೀತನಾದ ರಾಮನೆಂಬ ಹೆಸರುಳ್ಳ ಈಶ್ವರನಾದ ಹರಿಗೆ ನಮಿಸುತ್ತೇನೆ.

೨. ಪಟ್ಟಾಭಿಷೇಕದ ಕಾಲದಲ್ಲಿ ಯಾವ ಮುಖಕಾಂತಿ ಹೆಚ್ಚಲಿಲ್ಲವೋ, ವನವಾಸದ ದುಃಖದಿಂದ ಬಾಡಲಿಲ್ಲವೋ, ರಘುನಂದನನ ಅಂತಹ ಮುಖಾಂಬುಜಶ್ರೀ ನನಗೆ ಯಾವಾಗಲೂ ಮಂಜುಳವಾದ ಮಂಗಳವನ್ನು ಉಂಟುಮಾಡಲಿ.

೩. ನೀಲಕಮಲದಂತೆ ಶ್ಯಾಮಲಕೋಮಲಾಂಗನಾದ, ತನ್ನ ಎಡಗಡೆ ಸೀತಾದೇವಿಯನ್ನು ಕೂರಿಸಿಕೊಂಡು ಕೈಯಲ್ಲಿ ಸುಂದರವಾದ ಧನುಸ್ಸನ್ನೂ ಮತ್ತು ಮಹಾಬಾಣಗಳನ್ನೂ ಹಿಡಿದಿರುವ ರಘುವಂಶನಾಥನಾದ ರಾಮನನ್ನು ನಮಿಸುತ್ತೇನೆ.

೪. ಯಾರ ಸುಂದರವಾದ ಶರೀರವು ಆನಂದಘನವಾಗಿ ಮುಗಿಲಿನಂತೆ ಶ್ಯಾಮಲವರ್ಣವುಳ್ಳದ್ದಾಗಿದೆಯೋ, ಯಾವನು ಪೀತಾಂಬರಧಾರಿಯೋ ಮತ್ತು ಸುಂದರನೋ, ಯಾರ ಕೈಯಲ್ಲಿ ಬಿಲ್ಲುಬಾಣಗಳಿವೆಯೋ, ಯಾರ ಕಟಿಪ್ರದೇಶದಲ್ಲಿ ಸುಂದರವಾದ ಹೊಳೆಯುತ್ತಿರುವ ಬತ್ತಳಿಕೆಯು ಕಟ್ಟಲ್ಪಟ್ಟಿದೆಯೋ, ಯಾವನು ರಾಜೀವಲೋಚನನೋ, ಯಾವನು ಜಟಾಜೂಟದಿಂದ ಶೋಭಿತನಾಗಿರುವನೋ, ಯಾವನು ಸೀತಾಲಕ್ಷ್ಮಣರೊಡನೆ ಸಂಚರಿಸುತ್ತಿರುವನೋ ಅಂತಹ ಅಭಿರಾಮನಾದ ರಾಮಚಂದ್ರನನ್ನು ಭಜಿಸುತ್ತೇನೆ.

ಕುಂದೇಂದೀವರಸುಂದರಾವತಿಬಲೌ
ವಿಜ್ಞಾನಧಾಮಾವುಭೌ
ಶೋಭಾಢ್ಯೌ ವರಧನ್ವಿನೌ ಶ್ರುತಿನುತೌ
ಗೋವಿಪ್ರವೃಂದಪ್ರಿಯೌ ।
ಮಾಯಾಮಾನುಷರೂಪಿಣೌ ರಘುವರೌ
ಸದ್ಧರ್ಮವರ್ಮೌ ಹಿ ತೌ
ಸೀತಾನ್ವೇಷಣತತ್ಪರೌ ಪಥಿಗತೌ
ಭಕ್ತಿಪ್ರದೌ ತೌ ಹಿ ನಃ ॥ ೫ ॥

ಬ್ರಹ್ಮಾಂಭೋಧಿಸಮುದ್ಭವಂ ಕಲಿಮಲ-
ಪ್ರಧ್ವಂಸನಂ ಚಾವ್ಯಯಂ
ಶ್ರೀಮಚ್ಛಂಭುಮುಖೇಂದುಸುಂದರವರೇ
ಸಂಶೋಭಿತಂ ಸರ್ವದಾ ।
ಸಂಸಾರಾಮಯಭೇಷಜಂ ಸುಖಕರಂ
ಶ್ರೀಜಾನಕೀಜೀವನಂ
ಧನ್ಯಾಸ್ತೇ ಕೃತಿನಃ ಪಿಬಂತಿ ಸತತಂ
ಶ್ರೀರಾಮನಾಮಾಮೃತಮ್ ॥ ೬ ॥

ಶಾಂತಂ ಶಾಶ್ವತಮಪ್ರಮೇಯಮನಘಂ
ನಿರ್ವಾಣಶಾಂತಿಪ್ರದಂ
ಬ್ರಹ್ಮಾಶಂಭುಫಣೀಂದ್ರಸೇವ್ಯಮನಿಶಂ
ವೇದಾಂತವೇದ್ಯಂ ವಿಭುಮ್ ।
ರಾಮಾಖ್ಯಂ ಜಗದೀಶ್ವರಂ ಸುರಗುರುಂ
ಮಾಯಾಮನುಷ್ಯಂ ಹರಿಂ
ವಂದೇಽಹಂ ಕರುಣಾಕರಂ ರಘುವರಂ
ಭೂಪಾಲಚೂಡಾಮಣಿಮ್ ॥ ೭ ॥

೫. ನೀಲಕಮಲ ಮತ್ತು ಮಲ್ಲಿಗೆಯ ಹಾಗೆ ಸುಂದರರಾಗಿರುವವರೂ, ಅತಿ ಬಲಶಾಲಿಗಳೂ, ಜ್ಞಾನಗಣಿಗಳೂ, ಅತ್ಯಂತ ಅಂದವಾದ ಆಕಾರವುಳ್ಳವರೂ, ಶ್ರೇಷ್ಠ ಬಿಲ್ಲುಗಾರರೂ, ವೇದಗಳಿಂದ ಹೊಗಳಲ್ಪಟ್ಟವರೂ, ಗೋಬ್ರಾಹ್ಮಣಪ್ರಿಯರೂ, ಮಾಯೆಯಿಂದ ಮಾನವರೂಪವನ್ನು ಹೊಂದಿದವರೂ, ಸದ್ಧರ್ಮಕ್ಕೆ ಕವಚದಂತಿರುವವರೂ, ಹಿತಕಾರಿಗಳೂ, ಸೀತಾನ್ವೇಷಣದಲ್ಲಿ ನಿರತರಾಗಿರುವವರೂ, ಆದ ರಾಮಲಕ್ಷ್ಮಣರು ನಮಗೆ ಭಕ್ತಿಯನ್ನು ಅನುಗ್ರಹಿಸಲಿ.

೬. ವೇದಗಳೆಂಬ ಅಂಬುಧಿಯಿಂದ ಕಡೆದು ಬಂದ, ಕಲಿಮಲವನ್ನು ನಾಶಮಾಡುವ, ಅವ್ಯಯವಾಗಿರುವ, ಶಿವನ ಮುಖಕಮಲದಲ್ಲಿ ಸದಾ ನಲಿಯುತ್ತಿರುವ, ಈ ಸಂಸಾರಕ್ಕೆ ಸುಖವನ್ನುಂಟುಮಾಡುವ ಔಷಧರೂಪವಾಗಿರುವ, ಜಾನಕಿಯ ಜೀವನವಾಗಿರುವ ರಾಮನಾಮಾಮೃತವನ್ನು ಪಾನಮಾಡುವಂತಹವರು ಧನ್ಯರು.

೭. ಶಾಂತನೂ, ಶಾಶ್ವತನೂ, ಅಪ್ರಮೇಯನೂ, ಪಾಪರಹಿತನೂ, ನಿರ್ವಾಣರೂಪವಾದ ಶಾಂತಿಯನ್ನು ನೀಡುವವನೂ, ಬ್ರಹ್ಮ, ಶಂಭು, ಶೇಷ ಇವರಿಂದ ಸದಾ ಸೇವ್ಯನೂ, ವೇದಾಂತದ ಮೂಲಕ ವೇದ್ಯನೂ, ಸರ್ವವ್ಯಾಪಿಯೂ, ಸುರಗುರುವೂ, ಮಾಯೆಯ ಮೂಲಕ ಮನುಷ್ಯರೂಪವನ್ನು ಧರಿಸಿರುವವನೂ, ಪಾಪಹರನೂ, ಕರುಣಾಕರನೂ, ಭೂಪಾಲಚೂಡಾಮಣಿಯೂ, ರಘುವರನೂ, ರಾಮನೆಂಬ ಹೆಸರುಳ್ಳವನೂ ಆದ ಜಗದೀಶ್ವರನನ್ನು ನಮಿಸುವೆನು.

ಕೇಕೀಕಂಠಾಭನೀಲಂ ಸುರವರವಿಲಸತ್-
ವಿಪ್ರಪಾದಾಬ್ಜಚಿಹ್ನಂ
ಶೋಭಾಢ್ಯಂ ಪೀತವಸ್ತ್ರಂ ಸರಸಿಜನಯನಂ
ಸರ್ವದಾ ಸುಪ್ರಸನ್ನಮ್ ।
ಪಾಣೌ ನಾರಾಚಚಾಪಂ ಕಪಿನಿಕರಯುತಂ
ಬನ್ಧುನಾ ಸೇವ್ಯಮಾನಂ
ನೌಮೀಡ್ಯಂ ಜಾನಕೀಶಂ ರಘುವರಮನಿಶಂ
ಪುಷ್ಪಕಾರೂಢರಾಮಮ್ ॥ ೮ ॥

ಆರ್ತಾನಾಮಾರ್ತಿಹನ್ತಾರಂ
ಭೀತಾನಾಂ ಭಯನಾಶನಮ್ ।
ದ್ವಿಷತಾಂ ಕಾಲದಂಡಂ ತಂ
ರಾಮಚಂದ್ರಂ ನಮಾಮ್ಯಹಮ್ ॥ ೯ ॥

ನಾನ್ಯಾ ಸ್ಪೃಹಾ ರಘುಪತೇ ಹೃದಯೇಽಸ್ಮದೀಯೇ
ಸತ್ಯಂ ವದಾಮಿ ಚ ಭವಾನಖಿಲಾಂತರಾತ್ಮಾ ।
ಭಕ್ತಿಂ ಪ್ರಯಚ್ಛ ರಘುಪುಂಗವ ನಿರ್ಭರಾಂ ಮೇ
ಕಾಮಾದಿದೋಷರಹಿತಂ ಕುರು ಮಾನಸಂ ಚ ॥ ೧೦ ॥

೮. ನವಿಲಿನ ಕಂಠದಂತೆ ನೀಲಕಾಯನೂ, ಸುರಶ್ರೇಷ್ಠನೂ, ಭೃಗುಮುನಿಯ ಪಾದಚಿಹ್ನೆಯನ್ನು ವಕ್ಷಸ್ಥಳದಲ್ಲಿ ಧರಿಸಿರುವವನೂ, ಶೋಭಾಯಮಾನನಾಗಿರುವವನೂ, ಪೀತವಸನಧಾರಿಯೂ, ಸರಸಿಜನಯನನೂ, ಸರ್ವದಾ ಸುಪ್ರಸನ್ನನೂ, ಬಿಲ್ಲುಬಾಣಗಳನ್ನು ಕರಗಳಲ್ಲಿ ಧರಿಸಿರುವವನೂ, ಕವಿಗಳ ಸಮೂಹದಿಂದ ಪರಿವೃತನಾಗಿರುವವನೂ, ಲಕ್ಷ್ಮಣನಿಂದ ಸೇವಿಸಲ್ಪಡುತ್ತಿರುವವನೂ, ಸ್ತುತ್ಯರ್ಹನೂ, ಪುಷ್ಪಕವಿಮಾನದಲ್ಲಿ ಆರೂಢನಾಗಿರುವವನೂ, ರಘುವರನೂ, ಜಾನಕೀಶನೂ, ಆದ ರಾಮನಿಗೆ ನಮಸ್ಕರಿಸುತ್ತೇನೆ.

೯. ಆರ್ತರ ಕ್ಲೇಶವನ್ನು ನಾಶಮಾಡುವವನೂ, ಭಯಗೊಂಡವರ ಭಯವನ್ನು ನಾಶಮಾಡುವವನೂ, ವೈರಿಗಳಿಗೆ ಯಮದಂಡದಂತೆ ಇರುವವನೂ ಆದ ರಾಮಚಂದ್ರನಿಗೆ ನಮಸ್ಕಾರ.

೧೦. ಹೇ ರಘುಪತಿ, ನನ್ನ ಹೃದಯದಲ್ಲಿ ಮತ್ತಾವ ಆಸೆಯೂ ಇಲ್ಲ, ನಾನು ಸತ್ಯವಾಗಿ ಹೇಳುತ್ತೇನೆ: ನೀನು ಸಮಸ್ತಭೂತಗಳ ಹೃದಯದಲ್ಲಿರುವ ಅಂತರಾತ್ಮನು; ನನಗೆ ಪೂರ್ಣ ಭಕ್ತಿಯನ್ನಿತ್ತು ನನ್ನ ಮನಸ್ಸಿನಿಂದ ಕಾಮಾದಿದೋಷಗಳು ಹೋಗುವ ಹಾಗೆ ಮಾಡು.

# ಶ್ರೀರಾಮಸ್ತವಃ

ಶ್ರೀರಾಘವಂ ದಶರಥಾತ್ಮಜಮಪ್ರಮೇಯಂ
ಸೀತಾಪತಿಂ ರಘುಕುಲಾನ್ವಯರತ್ನದೀಪಮ್ ।
ಆಜಾನುಬಾಹುಮರವಿಂದದಳಾಯತಾಕ್ಷಂ
ರಾಮಂ ನಿಶಾಚರವಿನಾಶಕರಂ ನಮಾಮಿ ॥ ೧ ॥

ವೈದೇಹೀಸಹಿತಂ ಸುರದ್ರುಮತಲೇ
ಹೈಮೇ ಮಹಾಮಂಡಪೇ
ಮಧ್ಯೇಪುಷ್ಪಕಮಾಸನೇ ಮಣಿಮಯೇ
ವೀರಾಸನೇ ಸುಸ್ಥಿತಮ್ ।
ಅಗ್ರೇ ವಾಚಯತಿ ಪ್ರಭಂಜನಸುತೇ
ತತ್ತ್ವಂ ಮುನಿಭ್ಯಃ ಪರಂ
ವ್ಯಾಖ್ಯಾಂತಂ ಭರತಾದಿಭಿಃ ಪರಿವೃತಂ
ರಾಮಂ ಭಜೇ ಶ್ಯಾಮಲಮ್ ॥ ೨ ॥

ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ॥ ೩ ॥

ಆಪದಾಮಪಹರ್ತಾರಂ ದಾತಾರಂ ಸರ್ವಸಂಪದಾಮ್ ।
ಲೋಕಾಭಿರಾಮಂ ಶ್ರೀರಾಮಂ ಭೂಯೋ ಭೂಯೋ
ನಮಾಮ್ಯಹಮ್ ॥ ೪ ॥

# ಶ್ರೀರಾಮಸ್ತವ

೧. ಶ್ರೀರಾಘವನೂ, ದಶರಥನ ಮಗನೂ, ಅಪ್ರಮೇಯನೂ, ಸೀತಾ ಪತಿಯೂ, ರಘುಕುಲಕ್ಕೆ ರತ್ನದೀಪದಂತಿರುವವನೂ, ಆಜಾನು ಬಾಹುವೂ, ಅರವಿಂದದಳದಂತೆ ವಿಶಾಲವಾದ ಕಣ್ಣುಗಳುಳ್ಳವನೂ, ರಾಕ್ಷಸರ ವಿನಾಶಕಾರಿಯೂ ಆದ ಶ್ರೀರಾಮನನ್ನು ನಮಿಸುತ್ತೇನೆ.

೨. ಕಲ್ಪವೃಕ್ಷದ ಕೆಳಗೆ ಚಿನ್ನದ ಮಹಾಮಂಟಪ; ಅದರಲ್ಲಿ ಪುಷ್ಪಕವಿಮಾನ; ಅದರ ಮಧ್ಯದಲ್ಲಿರುವ ಮಣಿಮಯವಾದ ಸಿಂಹಾಸನದಲ್ಲಿ ವೈದೇಹಿ ಯೊಂದಿಗೆ ವೀರಾಸನದಲ್ಲಿ ಕುಳಿತುಕೊಂಡಿರುವ, ತನ್ನ ಮುಂದೆ ಆಂಜ ನೇಯನು ಓದುತ್ತಿರುವಾಗ ಮುನಿಗಳಿಗೆ ಪರತತ್ತ್ವವನ್ನು ವ್ಯಾಖ್ಯಾನ ಮಾಡುತ್ತಿರುವ, ಭರತಾದಿಗಳಿಂದ ಪರಿವೃತನಾದ ಶ್ಯಾಮಲರಾಮನನ್ನು ಭಜಿಸುತ್ತೇನೆ.

೩. ಶ್ರೀರಾಮನಿಗೂ, ರಾಮಭದ್ರನಿಗೂ, ರಾಮಚಂದ್ರನಿಗೂ, ಸೃಷ್ಟಿಕರ್ತ ನಿಗೂ, ರಘುನಾಥನಿಗೂ, ಎಲ್ಲರ ಒಡೆಯನಿಗೂ, ಸೀತಾಪತಿಗೂ ನಮಸ್ಕಾರ.

೪. ಆಪತ್ತುಗಳನ್ನು ನಿವಾರಿಸುವ, ಸರ್ವಸಂಪತ್ತುಗಳನ್ನು ಅನುಗ್ರಹಿಸುವ, ಲೋಕಾಭಿರಾಮನಾದ ಶ್ರೀರಾಮನಿಗೆ ಪುನಃ ಪುನಃ ನಮಸ್ಕಾರ.

# ದೇವೀಸೂಕ್ತಮ್

ಅಹಂ ರುದ್ರೇಭಿರ್ವಸುಭಿಶ್ಚರಾ-
ಮ್ಯಹಮಾದಿತ್ಯೈರುತ ವಿಶ್ವದೇವೈಃ ।
ಅಹಂ ಮಿತ್ರಾವರುಣೋಭಾ ಬಿಭ-
ರ್ಮ್ಯಹಮಿಂದ್ರಾಗ್ನೀ ಅಹಮಶ್ವಿನೋಭಾ ॥ ೧ ॥

ಅಹಂ ಸೋಮಮಾಹನಸಂ ಬಿಭ-
ರ್ಮ್ಯಹಂ ತ್ವಷ್ಟಾರಮುತ ಪೂಷಣಂ ಭಗಮ್ ।
ಅಹಂ ದಧಾಮಿ ದ್ರವಿಣಂ ಹವಿಷ್ಮತೇ
ಸುಪ್ರಾವ್ಯೇ ಯಜಮಾನಾಯ ಸುನ್ವತೇ ॥ ೨ ॥

ಅಹಂ ರಾಷ್ಟ್ರೀ ಸಂಗಮನೀ ವಸೂನಾಂ
ಚಿಕಿತುಷೀ ಪ್ರಥಮಾ ಯಜ್ಞಿಯಾನಾಮ್ ।
ತಾಂ ಮಾ ದೇವಾ ವ್ಯದಧುಃ ಪುರುತ್ರಾ
ಭೂರಿಸ್ಥಾತ್ರಾಂ ಭೂರ್ಯಾವೇಶಯಂತೀಮ್ ॥ ೩ ॥

ಮಯಾ ಸೋ ಅನ್ನಮತ್ತಿ ಯೋ ವಿಪಶ್ಯತಿ
ಯಃ ಪ್ರಾಣಿತಿ ಯ ಈಂ ಶೃಣೋತ್ಯುಕ್ತಮ್ ।
ಅಮಂತವೋ ಮಾಂ ತ ಉಪ ಕ್ಷಿಯಂತಿ
ಶ್ರುಧಿ ಶ್ರುತ ಶ್ರದ್ಧಿವಂ ತೇ ವದಾಮಿ ॥ ೪ ॥

ಅಹಮೇವ ಸ್ವಯಮಿದಂ ವದಾಮಿ
ಜುಷ್ಟಂ ದೇವೇಭಿರುತ ಮಾನುಷೇಭಿಃ ।
ಯಂ ಕಾಮಯೇ ತಂತಮುಗ್ರಂ ಕೃಣೋಮಿ
ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್ ॥ ೫ ॥

# ದೇವೀಸೂಕ್ತ

೧. ನಾನು ರುದ್ರರ ಜೊತೆಯಲ್ಲೂ, ವಸುಗಳ ಜೊತೆಯಲ್ಲೂ, ಆದಿತ್ಯರ ಜೊತೆಯಲ್ಲೂ ಮತ್ತು ಸಮಸ್ತ ದೇವತೆಗಳ ಜೊತೆಯಲ್ಲೂ ಸಂಚರಿಸು ತ್ತೇನೆ; ನಾನು ಮಿತ್ರ, ವರುಣ, ಇಂದ್ರ, ಅಗ್ನಿ ಮತ್ತು ಇಬ್ಬರು ಅಶ್ವಿನೀ ದೇವತೆಗಳನ್ನು ಧರಿಸಿರುತ್ತೇನೆ.

೨. (ದೇವತೆಗಳ ಆನಂದಕ್ಕೋಸ್ಕರ) ಹಿಂಡಿ ತೆಗೆಯುವ ಸೋಮವನ್ನೂ, ತ್ವಷ್ಟೃವನ್ನೂ, ಭಗ ಮತ್ತು ಪೂಷನ್—ಇವರನ್ನೂ ಧರಿಸಿರುತ್ತೇನೆ; ಹವಿಸ್ಸು ಮತ್ತು ಸೋಮಗಳನ್ನು ಸಿದ್ಧಪಡಿಸಿ ದೇವತೆಗಳನ್ನು ತೃಪ್ತಿ ಪಡಿಸುವ ಯಜಮಾನನಿಗೆ ನಾನು ದ್ರವ್ಯವನ್ನು ಕೊಡುತ್ತೇನೆ.

೩. ನಾನೇ ಈಶ್ವರೀ; ಧನವನ್ನು ಹಂಚಿಕೊಡುವವಳೂ ನಾನೇ; ನಾನು ಜ್ಞಾನವುಳ್ಳವಳು ಮತ್ತು ಯಜ್ಞಾರ್ಹರಾದ ದೇವತೆಗಳ ಮಧ್ಯದಲ್ಲಿ ಶ್ರೇಷ್ಠಳಾದವಳು. ಪ್ರಪಂಚರೂಪದಲ್ಲಿ ಅವಸ್ಥಿತಳಾದ ಮತ್ತು ಭೂತ ಗಳಲ್ಲಿ ಜೀವರೂಪದಿಂದ ಪ್ರವಿಷ್ಟಳಾದ ಇಂತಹ ನನ್ನನ್ನು ದೇವತೆಗಳು ನಾನಾ ಸ್ಥಾನಗಳಲ್ಲಿ ಇಟ್ಟಿರುವರು.

೪. ಯಾವನು ಅನ್ನವನ್ನು ತಿನ್ನುತ್ತಾನೋ, ನೋಡುತ್ತಾನೋ, ಉಸಿರಾಡು ತ್ತಾನೋ, ಹೇಳಿದ್ದನ್ನು ಕೇಳುತ್ತಾನೋ, ಅವನು ನನ್ನ ಶಕ್ತಿಯಿಂದಲೇ (ಇವೆಲ್ಲವನ್ನು) ಮಾಡುತ್ತಾನೆ. ಇಂತಹ ನನ್ನ ವಿಷಯದಲ್ಲಿ ಯಾರು ಜ್ಞಾನಹೀನರಾಗಿರುತ್ತಾರೋ ಅವರು ನಾಶವಾಗುತ್ತಾರೆ. ಎಲೈ ಜ್ಞಾನಿಯೇ ಕೇಳು; ಶ್ರದ್ಧೆಯ ಸತ್ಯವನ್ನು ನಿನಗೆ ಹೇಳುತ್ತೇನೆ.

೫. ದೇವತೆಗಳಿಂದಲೂ, ಮನುಷ್ಯರಿಂದಲೂ, ಸೇವಿಸಲ್ಪಡುವ (ತತ್ತ್ವವನ್ನು) ನಾನೇ ಸ್ವಯಂ ಉಪದೇಶಿಸುತ್ತೇನೆ: "ನಾನು ಯಾರನ್ನು ಪ್ರೀತಿಸು ತ್ತೇನೋ ಅವನನ್ನು ಬಲಿಷ್ಠನನ್ನಾಗಿ ಮಾಡುತ್ತೇನೆ, ಬ್ರಹ್ಮನನ್ನಾಗಿ ಮಾಡುತ್ತೇನೆ, ಋಷಿಯನ್ನಾಗಿ ಮಾಡುತ್ತೇನೆ, ಪ್ರಾಜ್ಞನನ್ನಾಗಿ ಮಾಡು ತ್ತೇನೆ."

ಅಹಂ ರುದ್ರಾಯ ಧನುರಾತನೋಮಿ
ಬ್ರಹ್ಮದ್ವಿಷೇ ಶರವೇ ಹಂತವಾ ಉ ।
ಅಹಂ ಜನಾಯ ಸಮದಂ ಕೃಣೋ-
ಮ್ಯಹಂ ದ್ಯಾವಾಪೃಥಿವೀ ಆವಿವೇಶ ॥ ೬ ॥

ಅಹಂ ಸುವೇ ಪಿತರಮಸ್ಯ ಮೂರ್ಧ-
ನ್ಮಮ ಯೋನಿರಪ್ಸ್ವಂತಃ ಸಮುದ್ರೇ ।
ತತೋ ವಿತಿಷ್ಠೇ ಭುವನಾನು ವಿಶ್ವೋ-
ತಾಮೂಂ ದ್ಯಾಂ ವರ್ಷ್ಮಣೋಪ ಸ್ಪೃಶಾಮಿ ॥ ೭ ॥

ಅಹಮೇವ ವಾತ ಇವ ಪ್ರವಾಮ್ಯಾ-
ರಭಮಾಣಾ ಭುವನಾನಿ ವಿಶ್ವಾ ।
ಪರೋ ದಿವಾ ಪರ ಏನಾ ಪೃಥಿವ್ಯೈ-
ತಾವತೀ ಮಹಿನಾ ಸಂ ಬಭೂವ ॥ ೮ ॥

೬. ಬ್ರಾಹ್ಮಣರನ್ನು ದ್ವೇಷಿಸುವ ಅಸುರರ ನಾಶಕ್ಕಾಗಿ ನಾನು ರುದ್ರನ ಬಿಲ್ಲಿಗೆ ಹೆದೆಯನ್ನು ಕಟ್ಟುತ್ತೇನೆ ಮತ್ತು ಜನರ ರಕ್ಷಣೆಗಾಗಿ ಯುದ್ಧವನ್ನು ಮಾಡುತ್ತೇನೆ; ಸ್ವರ್ಗ ಮತ್ತು ಭೂಲೋಕಗಳನ್ನು (ಅಂತರ್ಯಾಮಿ ರೂಪದಿಂದ) ಪ್ರವೇಶಿಸಿರುತ್ತೇನೆ.

೭. ಭೂಮಿಯ ಮೇಲಿರುವ ಸ್ವರ್ಗಲೋಕವನ್ನು ನಾನು ಸೃಷ್ಟಿಸಿರುತ್ತೇನೆ; ಸಮುದ್ರಮಧ್ಯದಲ್ಲಿರುವ ನೀರು ನನ್ನ ಉತ್ಪತ್ತಿಸ್ಥಾನವು (ಎಂದರೆ ಬುದ್ಧಿಯಲ್ಲಿರುವ ಚೈತನ್ಯವೇ ನನ್ನ ಕಾರಣವು); ಅಲ್ಲಿಂದ ಸಮಸ್ತಪ್ರಾಣಿಗಳನ್ನೂ ಪ್ರವೇಶಿಸಿ ನಾನೇ ವಿವಿಧರೂಪಗಳಿಂದ ಇರುತ್ತೇನೆ; ಮತ್ತು ನನ್ನ ಶರೀರದಿಂದ ಸ್ವರ್ಗಾದಿಲೋಕಗಳನ್ನು ವ್ಯಾಪಿಸುತ್ತೇನೆ.

೮. ಸಮಸ್ತ ಭೂತಗಳನ್ನು ವ್ಯಾಪಿಸಿಕೊಂಡು ಗಾಳಿಯ ಹಾಗೆ ನಾನು ಬೀಸುತ್ತೇನೆ; ಸ್ವರ್ಗ ಮತ್ತು ಭೂಲೋಕಗಳನ್ನು ಅತಿಕ್ರಮಿಸಿದ ನನ್ನ ಮಹಿಮೆಯು ಹೀಗಿರುವುದು.

# ದೇವೀಸ್ತುತಿಃ

## ೧

ತ್ವಂ ಸ್ವಾಹಾ ತ್ವಂ ಸ್ವಧಾ ತ್ವಂ ಹಿ ವಷಟ್ಕಾರಃ ಸ್ವರಾತ್ಮಿಕಾ ।
ಸುಧಾ ತ್ವಮಕ್ಷರೇ ನಿತ್ಯೇ ತ್ರಿಧಾಮಾತ್ರಾತ್ಮಿಕಾ ಸ್ಥಿತಾ ॥ ೧ ॥

ಅರ್ಧಮಾತ್ರಾ ಸ್ಥಿತಾ ನಿತ್ಯಾ ಯಾನುಚ್ಚಾರ್ಯಾವಿಶೇಷತಃ ।
ತ್ವಮೇವ ಸಾ ತ್ವಂ ಸಾವಿತ್ರೀ ತ್ವಂ ದೇವಜನನೀ ಪರಾ ॥ ೨ ॥

ತ್ವಯೈತದ್ಧಾರ್ಯತೇ ಸರ್ವಂ ತ್ವಯೈತತ್ಸೃಜ್ಯತೇ ಜಗತ್ ।
ತ್ವಯೈತತ್ಪಾಲ್ಯತೇ ದೇವಿ ತ್ವಮತ್ಸ್ಯಂತೇ ಚ ಸರ್ವದಾ ॥ ೩ ॥

ವಿಸೃಷ್ಟೌ ಸೃಷ್ಟಿರೂಪಾ ತ್ವಂ ಸ್ಥಿತಿರೂಪಾ ಚ ಪಾಲನೇ ।
ತಥಾ ಸಂಹೃತಿರೂಪಾಂತೇ ಜಗತೋಽಸ್ಯ ಜಗನ್ಮಯೇ ॥ ೪ ॥

ಮಹಾವಿದ್ಯಾ ಮಹಾಮಾಯಾ ಮಹಾಮೇಧಾ ಮಹಾಸ್ಮೃತಿಃ ।
ಮಹಾಮೋಹಾ ಚ ಭವತೀ ಮಹಾದೇವೀ ಮಹೇಶ್ವರೀ ॥ ೫ ॥

ಪ್ರಕೃತಿಸ್ತ್ವಂ ಚ ಸರ್ವಸ್ಯ ಗುಣತ್ರಯವಿಭಾವಿನೀ ।
ಕಾಲರಾತ್ರಿರ್ಮಹಾರಾತ್ರಿರ್ಮೋಹರಾತ್ರಿಶ್ಚ ದಾರುಣಾ ॥ ೬ ॥

ತ್ವಂ ಶ್ರೀಸ್ತ್ವಮೀಶ್ವರೀ ತ್ವಂ ಹ್ರೀಸ್ತ್ವಂ ಬುದ್ಧಿರ್ಬೋಧಲಕ್ಷಣಾ ।
ಲಜ್ಜಾ ಪುಷ್ಟಿಸ್ತಥಾ ತುಷ್ಟಿಸ್ತ್ವಂ ಶಾಂತಿಃ ಕ್ಷಾಂತಿರೇವ ಚ ॥ ೭ ॥

# ದೇವೀಸ್ತುತಿ

## ೧

೧. ನಿತ್ಯಳೂ ಅಕ್ಷರಳೂ ಆದ ದೇವಿ, ನೀನೇ ಸ್ವಾಹಾ, ನೀನೇ ಸ್ವಧಾ, ನೀನೇ ಯಜ್ಞಮಂತ್ರಸ್ವರೂಪಳು ಮತ್ತು ಉದಾತ್ತಾದಿಸ್ವರರೂಪಳು; ನೀನೇ ಅಮೃತರೂಪಳು; ಅ-ಉ-ಮ ಎಂಬ ಮೂರು ಮಾತ್ರೆಗಳ ರೂಪದಿಂದ ಅವಸ್ಥಿತಳಾದ ಪ್ರಣವಸ್ವರೂಪಳು ನೀನೇ.

೨. ವಿಶೇಷರೂಪದಿಂದ ಉಚ್ಚರಿಸಲಾಗದ ಅರ್ಧಮಾತ್ರಾಸ್ವರೂಪಳು (ತುರೀಯಳು) ನೀನೇ; ಗಾಯತ್ರಿಮಂತ್ರರೂಪಳು ಮತ್ತು ಶ್ರೇಷ್ಠಳಾದ ದೇವಮಾತೆ ನೀನೇ.

೩. ಹೇ ದೇವಿ, ನೀನೇ ಇವೆಲ್ಲವನ್ನೂ ಧರಿಸಿರುತ್ತೀಯೆ; ನೀನೇ ಈ ವಿಶ್ವವನ್ನು ಸೃಷ್ಟಿಸುತ್ತೀಯೆ, ನೀನೇ ಇದನ್ನು ಪಾಲಿಸುತ್ತೀಯೆ ಮತ್ತು ಪ್ರಳಯಕಾಲದಲ್ಲಿ ನೀನೇ ಇದನ್ನು ಸಂಹಾರಮಾಡುತ್ತೀಯೆ.

೪. ಹೇ ಜಗತ್ಸ್ವರೂಪಳೇ, ಸೃಷ್ಟಿಕಾಲದಲ್ಲಿ ನೀನೇ ಸೃಷ್ಟಿಶಕ್ತಿ, ಸ್ಥಿತಿಕಾಲದಲ್ಲಿ ನೀನೇ ಪಾಲನಶಕ್ತಿ, ಅಂತ್ಯಕಾಲದಲ್ಲಿ ನೀನೇ ಸಂಹಾರಶಕ್ತಿ.

೫. ಮಹಾವಿದ್ಯೆಯು ನೀನೇ, ಮಹಾಮಾಯೆಯೂ ನೀನೇ, ಮಹಾಬುದ್ಧಿಸ್ವರೂಪಳೂ ನೀನೇ, ಮಹಾಸ್ಮೃತಿಯೂ ನೀನೇ, ಮಹಾಮೋಹವೂ ಕೂಡ ನೀನೇ, ಮಹಾದೇವಿಯೂ ನೀನೇ ಮತ್ತು ಮಹೇಶ್ವರಿಯೂ ನೀನೇ.

೬. ನೀನೇ ಸರ್ವಭೂತಗಳ ಪ್ರಕೃತಿ ಮತ್ತು ತ್ರಿಗುಣಗಳ (ಪರಿಣಾಮವನ್ನು) ಉಂಟುಮಾಡುವವಳು; (ಬ್ರಹ್ಮನು ಲಯವಾಗುವ) ಪ್ರಳಯದ ಕಾಳರಾತ್ರಿ ನೀನೇ, (ಜಗತ್ತು ಲಯವಾಗುವ) ಮಹಾರಾತ್ರಿ ನೀನೇ, ದಾರುಣವಾದ ಮೋಹರಾತ್ರಿಯು (ಅಥವಾ ಮನುಷ್ಯರ ರಾತ್ರಿ) ನೀನೇ.

೭. ನೀನೇ ಶ್ರೀ, ನೀನೇ ಈಶ್ವರೀ, ನೀನೇ ಹ್ರೀ, ನೀನೇ ನಿಶ್ಚಯಾತ್ಮಕವಾದ ಬುದ್ಧಿ, ನೀನೇ ಲಜ್ಜೆ, ಪುಷ್ಟಿ ಮತ್ತು ತುಷ್ಟಿ; ನೀನೇ ಶಾಂತಿ ಮತ್ತು ಕ್ಷಾಂತಿ.

ಖಡ್ಗಿನೀ ಶೂಲಿನೀ ಘೋರಾ ಗದಿನೀ ಚಕ್ರಿಣೀ ತಥಾ ।
ಶಂಖಿನೀ ಚಾಪಿನೀ ಬಾಣಭುಶುಂಡೀಪರಿಘಾಯುಧಾ ॥ ೮ ॥

ಸೌಮ್ಯಾ ಸೌಮ್ಯತರಾಽಶೇಷಸೌಮ್ಯೇಭ್ಯಸ್ತ್ವತಿಸುಂದರೀ ।
ಪರಾಪರಾಣಾಂ ಪರಮಾ ತ್ವಮೇವ ಪರಮೇಶ್ವರೀ ॥ ೯ ॥

ಯಚ್ಚ ಕಿಂಚಿತ್ ಕ್ವಚಿದ್ವಸ್ತು ಸದಸದ್ವಾಽಖಿಲಾತ್ಮಿಕೇ ।
ತಸ್ಯ ಸರ್ವಸ್ಯ ಯಾ ಶಕ್ತಿಃ ಸಾ ತ್ವಂ ಕಿಂ ಸ್ತೂಯಸೇ ಮಯಾ ॥ ೧೦ ॥

ಯಯಾ ತ್ವಯಾ ಜಗತ್ಸ್ರಷ್ಟಾ ಜಗತ್ಪಾತ್ಯತ್ತಿ ಯೋ ಜಗತ್ ।
ಸೋಽಪಿ ನಿದ್ರಾವಶಂ ನೀತಃ ಕಸ್ತ್ವಾಂ ಸ್ತೋತುಮಿಹೇಶ್ವರಃ ॥ ೧೧ ॥

ವಿಷ್ಣುಃ ಶರೀರಗ್ರಹಣಮಹಮೀಶಾನ ಏವ ಚ ।
ಕಾರಿತಾಸ್ತೇ ಯತೋಽತಸ್ತ್ವಾಂ ಕಃ ಸ್ತೋತುಂ
ಶಕ್ತಿಮಾನ್ ಭವೇತ್ ॥ ೧೨ ॥

ಸಾ ತ್ವಮಿತ್ಥಂ ಪ್ರಭಾವೈಃ ಸ್ವೈರುದಾರೈರ್ದೇವಿ ಸಂಸ್ತುತಾ ।
ಮೋಹಯೈತೌ ದುರಾಧರ್ಷಾವಸುರೌ ಮಧುಕೈಟಭೌ ॥ ೧೩ ॥

ಪ್ರಬೋಧಂ ಚ ಜಗತ್ಸ್ವಾಮೀ ನೀಯತಾಮಚ್ಯುತೋ ಲಘು ।
ಬೋಧಶ್ಚ ಕ್ರಿಯತಾಮಸ್ಯ ಹಂತುಮೇತೌ ಮಹಾಸುರೌ ॥ ೧೪ ॥

ದೇವೀಮಾಹಾತ್ಮ್ಯಮ್, I, ೭೩–೮೭

೮. (ದುಷ್ಟರ ನಿಗ್ರಹಕ್ಕಾಗಿ) ಖಡ್ಗ, ಶೂಲ, ಗದೆ, ಚಕ್ರ, ಶಂಖ, ಧನುಸ್ಸು, ಬಾಣಗಳು, ಭುಶುಂಡಿ, ಪರಿಘ ಮುಂತಾದ ಆಯುಧಗಳನ್ನು ಧರಿಸಿ ನೀನು ಘೋರಸ್ವರೂಪಳಾಗಿದ್ದೀಯೆ.

೯. ನೀನು ಸೌಮ್ಯಳಾಗಿರುವೆ, ಪ್ರಪಂಚದಲ್ಲಿರುವ ಸಮಸ್ತವಸ್ತುಗಳಿಗಿಂತ ಸೌಮ್ಯತರಳೂ, ಅತಿ ಸುಂದರಿಯೂ ಆಗಿರುವೆ; ಪರಾಪರಗಳಲ್ಲೆಲ್ಲಾ ಪರಮಶ್ರೇಷ್ಠಳಾಗಿರುವ ಪರಮೇಶ್ವರಿಯು ನೀನೇ.

೧೦. ಹೇ ಅಖಿಲಾತ್ಮಿಕೆ, ಯಾವುದಾದರೂ ಒಂದು ಚೇತನವಾದ ಅಥವಾ ಜಡವಾದ ವಸ್ತು ಎಲ್ಲಿಯಾದರೂ ಇರಲಿ, ಅವೆಲ್ಲರ ಶಕ್ತಿಯು ನೀನೇ ಆಗಿರುವೆ; ನಾನು ನಿನ್ನನ್ನು ಹೇಗೆ ಸ್ತುತಿಸಲಿ?

೧೧. ಯಾವನು ಈ ಪ್ರಪಂಚವನ್ನು ಸೃಷ್ಟಿಸುವನೋ, ಕಾಪಾಡುವನೋ, ಕೊನೆಗೆ ತನ್ನಲ್ಲಿಯೇ ಅಡಗಿಸಿಕೊಳ್ಳುವನೋ, ಅಂತಹವನು ಕೂಡ ನಿನ್ನಿಂದ ನಿದ್ರಾವಶನಾಗಿರುವನು; ಇಲ್ಲಿ ನಿನ್ನನ್ನು ಸ್ತುತಿಸಲು ಯಾರಿಗೆ ಸಾಮರ್ಥ್ಯವುಂಟು?

೧೨. ಬ್ರಹ್ಮನಾದ ನನಗೂ, ವಿಷ್ಣುವಿಗೂ, ರುದ್ರನಿಗೆ ಶರೀರವನ್ನು ತೆಗೆದುಕೊಳ್ಳುವ ಹಾಗೆ ನೀನೇ ಮಾಡಿಸಿರುವೆ; ಆದುದರಿಂದ ನಿನ್ನನ್ನು ಸ್ತೋತ್ರ ಮಾಡಲು ಯಾರಿಗೆ ಶಕ್ತಿಯುಂಟು?

೧೩. ಹೇ ದೇವಿ, ಈ ರೀತಿ ನಿನ್ನ ಉದಾರವಾದ (ಅಲೌಕಿಕವಾದ) ಪ್ರಭಾವದ (ಮಹಿಮೆಯ) ದ್ವಾರಾ ಸ್ತುತಿಸಲ್ಪಟ್ಟ ನೀನು ಈ ದುರ್ಜಯರಾದ ಮಧು ಮತ್ತು ಕೈಟಭರೆಂಬ ಅಸುರರನ್ನು ಮೋಹಗೊಳಿಸು.

೧೪. ಜಗತ್ ಸ್ವಾಮಿಯಾದ ವಿಷ್ಣುವು ತನ್ನ ಯೋಗನಿದ್ರೆಯಿಂದ ಏಳುವಂತೆ ಮಾಡಿ, ಈ ಮಹಾಸುರರನ್ನು ನಾಶಮಾಡಲು ಅವನಲ್ಲಿ ಪ್ರವೃತ್ತಿಯನ್ನುಂಟುಮಾಡು.

# ದೇವೀಸ್ತುತಿಃ

## ೨

ದೇವ್ಯಾ ಯಯಾ ತತಮಿದಂ ಜಗದಾತ್ಮಶಕ್ತ್ಯಾ
ನಿಃಶೇಷದೇವಗಣಶಕ್ತಿಸಮೂಹಮೂರ್ತ್ಯಾ ।
ತಾಮಂಬಿಕಾಮಖಿಲದೇವಮಹರ್ಷಿಪೂಜ್ಯಾಂ
ಭಕ್ತ್ಯಾ ನತಾಃ ಸ್ಮ ವಿದಧಾತು ಶುಭಾನಿ ಸಾ ನಃ ॥ ೧ ॥

ಯಸ್ಯಾಃ ಪ್ರಭಾವಮತುಲಂ ಭಗವಾನನಂತೋ
ಬ್ರಹ್ಮಾ ಹರಶ್ಚ ನ ಹಿ ವಕ್ತುಮಲಂ ಬಲಂ ಚ ।
ಸಾ ಚಂಡಿಕಾಖಿಲಜಗತ್ಪರಿಪಾಲನಾಯ
ನಾಶಾಯ ಚಾಶುಭಭಯಸ್ಯ ಮತಿಂ ಕರೋತು ॥ ೨ ॥

ಯಾ ಶ್ರೀಃ ಸ್ವಯಂ ಸುಕೃತಿನಾಂ ಭವನೇಷ್ವಲಕ್ಷ್ಮೀಃ
ಪಾಪಾತ್ಮನಾಂ ಕೃತಧಿಯಾಂ ಹೃದಯೇಷು ಬುದ್ಧಿಃ ।
ಶ್ರದ್ಧಾ ಸತಾಂ ಕುಲಜನಪ್ರಭವಸ್ಯ ಲಜ್ಜಾ
ತಾಂ ತ್ವಾಂ ನತಾಃ ಸ್ಮ ಪರಿಪಾಲಯ ದೇವಿ ವಿಶ್ವಮ್ ॥ ೩ ॥

ಕಿಂ ವರ್ಣಯಾಮ ತವ ರೂಪಮಚಿಂತ್ಯಮೇತತ್
ಕಿಂ ಚಾತಿವೀರ್ಯಮಸುರಕ್ಷಯಕಾರಿ ಭೂರಿ ।
ಕಿಂ ಚಾಹವೇಷು ಚರಿತಾನಿ ತವಾತಿ ಯಾನಿ
ಸರ್ವೇಷು ದೇವ್ಯಸುರದೇವಗಣಾದಿಕೇಷು ॥ ೪ ॥

ಹೇತುಃ ಸಮಸ್ತಜಗತಾಂ ತ್ರಿಗುಣಾಪಿ ದೋಷೈಃ
ನ ಜ್ಞಾಯಸೇ ಹರಿಹರಾದಿಭಿರಪ್ಯಪಾರಾ ।
ಸರ್ವಾಶ್ರಯಾಖಿಲಮಿದಂ ಜಗದಂಶಭೂತ-
ಮವ್ಯಾಕೃತಾ ಹಿ ಪರಮಾ ಪ್ರಕೃತಿಸ್ತ್ವಮಾದ್ಯಾ ॥ ೫ ॥

# ದೇವೀಸ್ತುತಿ

## ೨

೧. ಎಲ್ಲಾ ದೇವಗಣಗಳ ಶಕ್ತಿಸಮೂಹದ ಮೂರ್ತಿಯಾದ ಯಾವ ದೇವಿಯ ಸ್ವಂತ ಶಕ್ತಿಯಿಂದ ಈ ಜಗತ್ತೆಲ್ಲಾ ವ್ಯಾಪ್ತವಾಗಿದೆಯೋ, ಸಮಸ್ತ ದೇವ ಮಹರ್ಷಿಗಳಿಗೆ ಪೂಜ್ಯಳಾದ ಅಂತಹ ಅಂಬಿಕೆಯನ್ನು ಭಕ್ತಿಯಿಂದ ನಮಸ್ಕರಿಸುತ್ತೇವೆ; ಆಕೆಯು ನಮಗೆ ಶುಭವನ್ನು ಉಂಟುಮಾಡಲಿ.

೨. ಯಾವ ದೇವಿಯ ಅಸದೃಶವಾದ ಪ್ರಭಾವವನ್ನೂ, ಬಲವನ್ನೂ ಭಗವಂತ ನಾದ ವಿಷ್ಣು, ಬ್ರಹ್ಮ, ರುದ್ರರು ವರ್ಣಿಸಲಾರರೋ, ಅಂತಹ ಚಂಡಿಕಾ ದೇವಿ ಸಮಸ್ತ ಪ್ರಪಂಚವನ್ನು ಕಾಪಾಡುವುದಕ್ಕೋಸ್ಕರ ಮತ್ತು ಅಮಂಗಳದಿಂದುಂಟಾಗುವ ಭಯವನ್ನು ಪರಿಹರಿಸುವುದಕ್ಕೋಸ್ಕರ ಮನಸ್ಸು ಮಾಡಲಿ.

೩. ಯಾವ ದೇವಿ ಪುಣ್ಯವಂತರ ಮನೆಯಲ್ಲಿ ಲಕ್ಷ್ಮೀಸ್ವರೂಪಳಾಗಿರುವಳೋ, ಪಾಪಿಗಳ ಗೃಹದಲ್ಲಿ ಅಲಕ್ಷ್ಮೀರೂಪಳಾಗಿರುವಳೋ, ಶುದ್ಧಚಿತ್ತರಾದವ ರಲ್ಲಿ ಸದ್ಬುದ್ಧಿರೂಪಳಾಗಿರುವಳೋ, ಸಜ್ಜನರ ಹೃದಯದಲ್ಲಿ ಶ್ರದ್ಧಾರೂಪ ಳಾಗಿರುವಳೋ, ಸದ್ವಂಶಜರಲ್ಲಿ ಲಜ್ಜಾರೂಪಳಾಗಿರುವಳೋ ಅಂತಹ ನಿನ್ನನ್ನು ನಾವು ನಮಸ್ಕರಿಸುತ್ತೇವೆ; ಹೇ ದೇವಿ, ವಿಶ್ವವನ್ನು ಕಾಪಾಡು.

೪. ಹೇ ದೇವಿ, ನಿನ್ನ ಅಂಚಿತ್ಯರೂಪವನ್ನಾಗಲೀ, ಅಸುರನಾಶಕಾರಿಯಾದ ನಿನ್ನ ಮಹಾವೀರ್ಯವನ್ನಾಗಲೀ, ದೇವಾಸುರಗಣಗಳ ಯುದ್ಧದಲ್ಲಿ ನಿನ್ನ ಅತ್ಯದ್ಭುತವಾದ ಕರ್ಮಗಳನ್ನಾಗಲೀ ನಾನು ಹೇಗೆ ಬಣ್ಣಿಸಲಿ?

೫. ಸಮಸ್ತ ಜಗತ್ತಿಗೂ ಕಾರಣಭೂತಳು ನೀನೇ; ನಿನ್ನಲ್ಲಿ ತ್ರಿಗುಣಗಳಿದ್ದರೂ, ಅದಕ್ಕೆ ಸಂಬಂಧಪಟ್ಟ ಯಾವ ದೋಷವೂ ನಿನ್ನಲ್ಲಿ ಇಲ್ಲ; ಹರಿಹರಾದಿ ಗಳೂ ಕೂಡ ನಿನ್ನನ್ನು ಅರಿಯಲಾರರು. ಈ ವಿಶ್ವವೆಲ್ಲಾ ನಿನ್ನ ಒಂದು ಅಂಶ. ಏಕೆಂದರೆ ಸರ್ವಕ್ಕೂ ನೀನೇ ಆಶ್ರಯಳು; ಅವ್ಯಾಕೃತವೂ ನಿತ್ಯವೂ ಆದ ಮೂಲಪ್ರಕೃತಿ ನೀನೇ.

ಯಸ್ಯಾಃ ಸಮಸ್ತಸುರತಾ ಸಮುದೀರಣೇನ
ತೃಪ್ತಿಂ ಪ್ರಯಾತಿ ಸಕಲೇಷು ಮಖೇಷು ದೇವಿ ।
ಸ್ವಾಹಾಸಿ ವೈ ಪಿತೃಗಣಸ್ಯ ಚ ತೃಪ್ತಿಹೇತು-
ರುಚ್ಚಾರ್ಯಸೇ ತ್ವಮತ ಏವ ಜನೈಃ ಸ್ವಧಾ ಚ ॥ ೬ ॥

ಯಾ ಮುಕ್ತಿಹೇತುರವಿಚಿಂತ್ಯಮಹಾವ್ರತಾ ತ್ವಂ
ಅಭ್ಯಸ್ಯಸೇ ಸುನಿಯತೇಂದ್ರಿಯತತ್ತ್ವಸಾರೈಃ ।
ಮೋಕ್ಷಾರ್ಥಿಭಿರ್ಮುನಿಭಿರಸ್ತಸಮಸ್ತದೋಷೈ-
ರ್ವಿದ್ಯಾಽಸಿ ಸಾ ಭಗವತೀ ಪರಮಾ ಹಿ ದೇವಿ ॥ ೭ ॥

ಶಬ್ದಾತ್ಮಿಕಾ ಸುವಿಮಲರ್ಗ್ಯಜುಷಾಂ ನಿಧಾನ-
ಮುದ್ಗೀಥರಮ್ಯಪದಪಾಠವತಾಂ ಚ ಸಾಮ್ನಾಮ್ ।
ದೇವೀ ತ್ರಯೀ ಭಗವತೀ ಭವಭಾವನಾಯ
ವಾರ್ತಾ ಚ ಸರ್ವಜಗತಾಂ ಪರಮಾರ್ತಿಹಂತ್ರೀ ॥ ೮ ॥

ಮೇಧಾಽಸಿ ದೇವಿ ವಿದಿತಾಖಿಲಶಾಸ್ತ್ರಸಾರಾ
ದುರ್ಗಾಽಸಿ ದುರ್ಗಭವಸಾಗರನೌರಸಂಗಾ ।
ಶ್ರೀಃ ಕೈಟಭಾರಿಹೃದಯೈಕಕೃತಾಧಿವಾಸಾ
ಗೌರೀ ತ್ವಮೇವ ಶಶಿಮೌಲಿಕೃತಪ್ರತಿಷ್ಠಾ ॥ ೯ ॥

ಈಷತ್ಸಹಾಸಮಮಲಂ ಪರಿಪೂರ್ಣಚಂದ್ರ-
ಬಿಂಬಾನುಕಾರಿ ಕನಕೋತ್ತಮಕಾಂತಿಕಾಂತಮ್ ।
ಅತ್ಯದ್ಭುತಂ ಪ್ರಹೃತಮಾತ್ತರುಷಾ ತಥಾಪಿ
ವಕ್ತ್ರಂ ವಿಲೋಕ್ಯ ಸಹಸಾ ಮಹಿಷಾಸುರೇಣ ॥ ೧೦ ॥

೬. ಯಾವ ಉಚ್ಚಾರಣೆಯಿಂದ ಸರ್ವಯಜ್ಞಗಳಲ್ಲಿಯೂ ಸಮಸ್ತ ದೇವತೆಗಳು ಸಂತುಷ್ಟಿಯನ್ನು ಹೊಂದುವರೋ ಅಂತಹ "ಸ್ವಾಹಾ" ಮಂತ್ರವೇ ನೀನು; ಪಿತೃಗಳಿಗೆ ತೃಪ್ತಿಯನ್ನು ಕೊಡುವ "ಸ್ವಧಾ" ಮಂತ್ರವೂ ನೀನೇ; ಆದುದರಿಂದ ಜನರು (ಸ್ವಾಹಾ, ಸ್ವಧಾ ಎಂದು) ಯಜ್ಞಕಾಲದಲ್ಲಿ ನಿನ್ನ ಹೆಸರನ್ನು ಉಚ್ಚರಿಸುವರು.

೭. ಹೇ ದೇವಿ, ಯಾವ ವಿದ್ಯೆಯು ಮುಕ್ತಿಗೆ ಕಾರಣವೋ ಮತ್ತು (ಯಾವ ವಿದ್ಯೆಗೆ) ಕಠಿಣವಾದ (ಯಮನಿಯಮಾದಿ) ಮಹಾವ್ರತಗಳು (ಸಾಧನವೋ), ಆ ಭಗವದ್ವಿಷಯಕವಾದ ಪರಮಾ ವಿದ್ಯೆಯು ನೀನೇ; ಆದುದರಿಂದ ಜಿತೇಂದ್ರಿಯರೂ, ತತ್ತ್ವನಿಷ್ಠರೂ, ಅಶೇಷದೋಷಶೂನ್ಯರೂ, ಮೋಕ್ಷಾಕಾಂಕ್ಷಿಗಳೂ ಆದ ಮುನಿಗಳು ಆ (ಪರಾವಿದ್ಯೆಯನ್ನು) ಅನುಷ್ಠಾನಮಾಡುತ್ತಾರೆ.

೮. ನೀನು ಶಬ್ದಾತ್ಮಿಕೆ; ನೀನೇ ಸುವಿಮಲವಾದ ಋಗ್ವೇದ-ಯಜುರ್ವೇದಗಳ ಮತ್ತು ಉದ್ಗೀಥದಿಂದಲೂ ರಮ್ಯವಾದ ಪದಪಾಠಗಳಿಂದಲೂ ಕೂಡಿದ ಸಾಮವೇದದ ಆಶ್ರಯಳು. ಸಕಲಾರ್ಥಪ್ರಕಾಶಕಳೂ, ಸರ್ವೈಶ್ವರ್ಯಮಯಿಯೂ ಆದ ವೇದಮಾತೆಯು ನೀನೇ; ಜಗತ್ಪರಿಪಾಲನೆಗೆ ಬೇಕಾದ ಜೀವನೋಪಾಯ ನೀನೇ; ಸಮಸ್ತ ಪ್ರಾಣಿಗಳ ದುಃಖವನ್ನು ನಾಶಮಾಡುವವಳು ನೀನೇ.

೯. ಹೇ ದೇವಿ, ಅಖಿಲಶಾಸ್ತ್ರಸಾರವನ್ನು ತಿಳಿದುಕೊಳ್ಳುವಂತೆ ಮಾಡುವ ಸರಸ್ವತೀದೇವಿಯು ನೀನೇ; ದುರ್ಗಮವಾದ ಭವಸಾಗರವನ್ನು ದಾಟಲು ನೌಕೆಯಂತಿರುವ ಅದ್ವಿತೀಯಳಾದ ದುರ್ಗಾದೇವಿಯು ನೀನೇ; ವಿಷ್ಣುವಿನ ಹೃದಯದಲ್ಲಿ ನೆಲೆಸಿರುವ ಲಕ್ಷ್ಮೀದೇವಿಯು ನೀನೇ; ಶಿವನೊಂದಿಗೆ ಪ್ರತಿಷ್ಠಿತಳಾದ ಗೌರೀದೇವಿಯು ನೀನೇ.

೧೦. ಮಂದಹಾಸಯುಕ್ತವೂ, ನಿರ್ಮಲವೂ, ಪೂರ್ಣಚಂದ್ರಬಿಂಬದಂತಿರುವುದೂ, ಉತ್ಕೃಷ್ಟ ಸ್ವರ್ಣಕಾಂತಿಯಂತೆ ಕಮನೀಯವೂ ಆದ ನಿನ್ನ ಮುಖವನ್ನು ನೋಡಿದರೂ ಕೂಡ ಕ್ರೋಧಾವಿಷ್ಟನಾದ ಮಹಿಷಾಸುರನು ನಿನ್ನನ್ನು ಹಠಾತ್ತಾಗಿ ಹೊಡೆದುದು ಆಶ್ಚರ್ಯ!

ದೃಷ್ಟ್ವಾ ತು ದೇವಿ ಕುಪಿತಂ ಭ್ರುಕುಟೀಕರಾಲ-
ಮುದ್ಯಚ್ಛಶಾಂಕಸದೃಶಚ್ಛವಿ ಯನ್ನ ಸದ್ಯಃ ।
ಪ್ರಾಣಾನ್ಮುಮೋಚ ಮಹಿಷಸ್ತದತೀವ ಚಿತ್ರಂ
ಕೈರ್ಜೀವ್ಯತೇ ಹಿ ಕುಪಿತಾಂತಕದರ್ಶನೇನ ॥ ೧೧ ॥

ದೇವಿ ಪ್ರಸೀದ ಪರಮಾ ಭವತೀ ಭವಾಯ
ಸದ್ಯೋ ವಿನಾಶಯಸಿ ಕೋಪವತೀ ಕುಲಾನಿ ।
ವಿಜ್ಞಾತಮೇತದಧುನೈವ ಯದಸ್ತಮೇತ-
ನ್ನೀತಂ ಬಲಂ ಸುವಿಪುಲಂ ಮಹಿಷಾಸುರಸ್ಯ ॥ ೧೨ ॥

ತೇ ಸಮ್ಮತಾ ಜನಪದೇಷು ಧನಾನಿ ತೇಷಾಂ
ತೇಷಾಂ ಯಶಾಂಸಿ ನ ಚ ಸೀದತಿ ಧರ್ಮವರ್ಗಃ ।
ಧನ್ಯಾಸ್ತ ಏವ ನಿಭೃತಾತ್ಮಜಭೃತ್ಯದಾರಾ
ಯೇಷಾಂ ಸದಾಭ್ಯುದಯದಾ ಭವತೀ ಪ್ರಸನ್ನಾ ॥ ೧೩ ॥

ಧರ್ಮ್ಯಾಣಿ ದೇವಿ ಸಕಲಾನಿ ಸದೈವ ಕರ್ಮಾ-
ಣ್ಯತ್ಯಾದೃತಃ ಪ್ರತಿದಿನಂ ಸುಕೃತೀ ಕರೋತಿ ।
ಸ್ವರ್ಗಃ ಪ್ರಯಾತಿ ಚ ತತೋ ಭವತೀ ಪ್ರಸಾದಾ-
ಲ್ಲೋಕತ್ರಯೇಽಪಿ ಫಲದಾ ನನು ದೇವಿ ತೇನ ॥ ೧೪ ॥

ದುರ್ಗೇ ಸ್ಮೃತಾ ಹರಸಿ ಭೀತಿಮಶೇಷಜಂತೋಃ
ಸ್ವಸ್ಥೈಃ ಸ್ಮೃತಾ ಮತಿಮತೀವ ಶುಭಾಂ ದದಾಸಿ ।
ದಾರಿದ್ರ್ಯದುಃಖಭಯಹಾರಿಣಿ ಕಾ ತ್ವದನ್ಯಾ
ಸರ್ವೋಪಕಾರಕರಣಾಯ ಸದಾರ್ದ್ರಚಿತ್ತಾ ॥ ೧೫ ॥

ಏಭಿರ್ಹತೈರ್ಜಗದುಪೈತಿ ಸುಖಂ ತಥೈತೇ
ಕುರ್ವಂತು ನಾಮ ನರಕಾಯ ಚಿರಾಯ ಪಾಪಮ್ ।
ಸಂಗ್ರಾಮಮೃತ್ಯುಮಧಿಗಮ್ಯ ದಿವಂ ಪ್ರಯಾಂತು
ಮತ್ವೇತಿ ನೂನಮಹಿತಾನ್ ವಿನಿಹಂಸಿ ದೇವಿ ॥ ೧೬ ॥

೧೧. ಹೇ ದೇವಿ, ಭ್ರುಕುಟಿಯಿಂದ ಕರಾಳವೂ, ಉದಯಿಸುತ್ತಿರುವ ಚಂದ್ರನಂತೆ ತೇಜೋಮಯವೂ, ಕ್ರುದ್ಧವೂ ಆದ ನಿನ್ನ ಮುಖವನ್ನು ನೋಡಿ ಆ ಮಹಿಷಾಸುರನು ಕೂಡಲೇ ತನ್ನ ಪ್ರಾಣವನ್ನು ಬಿಡದೆ ಇದ್ದುದು ಮಹತ್ತಾದ ಆಶ್ಚರ್ಯ! ಏಕೆಂದರೆ ಕುಪಿತನಾದ ಯಮನನ್ನು ನೋಡಿ ಯಾರು ತಾನೇ ಬದುಕಬಲ್ಲರು?

೧೨. ದೇವಿ ಪ್ರಸನ್ನಳಾಗು; ನೀನು ಪರಮ ಕೃಪಾಮಯಿಯು; ಕೋಪಗೊಂಡರೆ ಅಸುರರ ಕುಲವನ್ನೇ ಕ್ಷಣದಲ್ಲಿ ನಾಶಮಾಡಬಲ್ಲೆ. ಮಹಿಷಾಸುರನ ವಿಪುಲಸೈನ್ಯವೆಲ್ಲಾ ನಾಶವಾಗಿರುವುದರಿಂದಲೇ ಇದು ನಮಗೆ ಈಗ ತಾನೇ ವೇದ್ಯವಾಗಿರುವುದು.

೧೩. ಅಭೀಷ್ಟದಾಯಿನಿಯಾದ ನೀನು ಯಾರ ಮೇಲೆ ಪ್ರಸನ್ನಳಾಗುತ್ತೀಯೋ, ಅವರು ಎಲ್ಲಾ ಸ್ಥಳಗಳಲ್ಲಿಯೂ ಗೌರವಿಸಲ್ಪಡುತ್ತಾರೆ; ಅವರಿಗೇ ಸಂಪತ್ತು ದೊರೆಯುವುದು; ಅವರಿಗೇ ಯಶಸ್ಸು ಉಂಟಾಗುವುದು; ಅವರ ಧರ್ಮಾರ್ಥಕಾಮಮೋಕ್ಷಗಳಿಗೆ ಹಾನಿಯುಂಟಾಗುವುದಿಲ್ಲ; ಅವರು ಮಡದಿಮಕ್ಕಳೊಂದಿಗೆ ಬಾಳಿ ಧನ್ಯರಾಗುತ್ತಾರೆ.

೧೪. ಹೇ ದೇವಿ, ನಿನ್ನ ಅನುಗ್ರಹದಿಂದ ಸುಕೃತಿಯು ಯಾವಾಗಲೂ ಅತ್ಯಾದರದಿಂದ ಧರ್ಮವಿಹಿತವಾದ ಕರ್ಮಗಳನ್ನು ಪ್ರತಿದಿನವೂ ಮಾಡುತ್ತಾನೆ; ಅನಂತರ ಸ್ವರ್ಗವನ್ನು ಹೊಂದುತ್ತಾನೆ; ಆದಕಾರಣ ನೀನು ತ್ರಿಲೋಕಗಳಲ್ಲಿಯೂ ಏಕಮಾತ್ರ ಫಲದಾಯಿನಿ.

೧೫. ಸಂಕಟಕಾಲದಲ್ಲಿ ನಿನ್ನನ್ನು ಸ್ಮರಿಸಿದರೆ ಎಲ್ಲರ ಭಯವನ್ನೂ ನಾಶಮಾಡುತ್ತೀಯೆ; ಸುಖವಾಗಿರುವಾಗ ನಿನ್ನನ್ನು ಸ್ಮರಿಸಿದರೆ ಶುಭಬುದ್ಧಿಯನ್ನು ನೀಡುವೆ. ಹೇ ದಾರಿದ್ರ್ಯಹಾರಿಣಿ, ಹೇ ದುಃಖವಿನಾಶಿನಿ, ಹೇ ಭಯನಾಶಿನಿ, ನೀನಲ್ಲದೆ ಮತ್ತಾರು ಸರ್ವಪ್ರಾಣಿಗಳ ಉಪಕಾರಕ್ಕೋಸ್ಕರ ದಯಾರ್ದ್ರಚಿತ್ತರಾಗಿರುತ್ತಾರೆ?

೧೬. "ಈ ಅಸುರರು ನಾಶವಾದರೆ ಲೋಕಕ್ಕೆ ನೆಮ್ಮದಿ. ಈ ಅಸುರರು ಅನೇಕಕಾಲ ನರಕದಲ್ಲಿ ನರಳುವಂತಹ ಪಾಪವನ್ನು ಮಾಡಿದ್ದರೂ ನನ್ನೊಡನೆ ಯುದ್ಧಮಾಡಿ ಸ್ವರ್ಗವನ್ನು ಪಡೆಯಲಿ" ಎಂದು ಯೋಚಿಸಿ ಈ ಅಹಿತಚಿಂತಕರಾದ ಈ ಅಸುರರನ್ನು ಖಂಡಿತವಾಗಿ ನಾಶಮಾಡುವೆ.

ದೃಷ್ಟ್ವೈವ ಕಿಂ ನ ಭವತೀ ಪ್ರಕರೋತಿ ಭಸ್ಮ
ಸರ್ವಾಸುರಾನರಿಷು ಯತ್ಪ್ರಹಿಣೋಷಿ ಶಸ್ತ್ರಮ್ ।
ಲೋಕಾನ್ಪ್ರಯಾಂತು ರಿಪವೋಽಪಿ ಹಿ ಶಸ್ತ್ರಪೂತಾಃ
ಇತ್ಥಂ ಮತಿರ್ಭವತಿ ತೇಷ್ವಪಿ ತೇಽತಿಸಾಧ್ವೀ ॥ ೧೭ ॥

ಖಡ್ಗಪ್ರಭಾನಿಕರವಿಸ್ಫುರಣೈಸ್ತಥೋಗ್ರೈಃ
ಶೂಲಾಗ್ರಕಾಂತಿನಿವಹೇನ ದೃಶೋಽಸುರಾಣಾಮ್ ।
ಯನ್ನಾಗತಾ ವಿಲಯಮಂಶುಮದಿಂದುಖಂಡ-
ಯೋಗ್ಯಾನನಂ ತವ ವಿಲೋಕಯತಾಂ ತದೇತತ್ ॥ ೧೮ ॥

ದುರ್ವೃತ್ತವೃತ್ತಶಮನಂ ತವ ದೇವಿ ಶೀಲಂ
ರೂಪಂ ತಥೈತದವಿಚಿಂತ್ಯಮತುಲ್ಯಮನ್ಯೈಃ ।
ವೀರ್ಯಂ ಚ ಹಂತೃ ಹೃತದೇವಪರಾಕ್ರಮಾಣಾಂ
ವೈರಿಷ್ವಪಿ ಪ್ರಕಟಿತೈವ ದಯಾ ತ್ವಯೇತ್ಥಮ್ ॥ ೧೯ ॥

ಕೇನೋಪಮಾ ಭವತು ತೇಽಸ್ಯ ಪರಾಕ್ರಮಸ್ಯ
ರೂಪಂ ಚ ಶತ್ರುಭಯಕಾರ್ಯತಿಹಾರಿ ಕುತ್ರ ।
ಚಿತ್ತೇ ಕೃಪಾ ಸಮರನಿಷ್ಠುರತಾ ಚ ದೃಷ್ಟಾ
ತ್ವಯ್ಯೇವ ದೇವಿ ವರದೇ ಭುವನತ್ರಯೇಽಪಿ ॥ ೨೦ ॥

ತ್ರೈಲೋಕ್ಯಮೇತದಖಿಲಂ ರಿಪುನಾಶನೇನ
ತ್ರಾತಂ ತ್ವಯಾ ಸಮರಮೂರ್ಧನಿ ತೇಽಪಿ ಹತ್ವಾ ।
ನೀತಾ ದಿವಂ ರಿಪುಗಣಾ ಭಯಮಪ್ಯಪಾಸ್ತ-
ಮಸ್ಮಾಕಮುನ್ಮದಸುರಾರಿಭವಂ ನಮಸ್ತೇ ॥ ೨೧ ॥

ಶೂಲೇನ ಪಾಹಿ ನೋ ದೇವಿ ಪಾಹಿ ಖಡ್ಗೇನ ಚಾಂಬಿಕೇ ।
ಘಂಟಾಸ್ವನೇನ ನಃ ಪಾಹಿ ಚಾಪಜ್ಯಾನಿಃಸ್ವನೇನ ಚ ॥ ೨೨ ॥

೧೭. ನೋಟಮಾತ್ರದಿಂದ ಅಸುರರನ್ನೆಲ್ಲಾ ಬೂದಿಮಾಡಲು ನಿನಗೆ ಸಾಧ್ಯ ವಿಲ್ಲವೆ? ಆದರೂ ಶತ್ರುಗಳ ಮೇಲೆ ನೀನು ಶತ್ರುಪ್ರಹಾರ ಮಾಡಿರು ವುದಕ್ಕೆ ಒಂದು ಕಾರಣವುಂಟು; ಅಂತಹ (ಪಾಪಿಗಳೂ) ಕೂಡ ನಿನ್ನ ಆಯುಧಗಳಿಂದ ಪವಿತ್ರರಾಗಿ ಉತ್ತಮಗತಿಯನ್ನು ಪಡೆಯಲಿ ಎಂದು; ವೈರಿಗಳ ಮೇಲೂ ನಿನ್ನ ಕೃಪೆ ಇಂತಹದು.

೧೮. ನಿನ್ನ ಖಡ್ಗದಿಂದ ಹೊರಹೊಮ್ಮುತ್ತಿರುವ ಉಗ್ರವಾದ ತೇಜೋರಾಶಿ ಯಿಂದಾಗಲೀ ಅಥವಾ ನಿನ್ನ ಶೂಲಾಗ್ರಕಾಂತಿಯಿಂದಾಗಲೀ ಅಸುರರ ಕಣ್ಣು ಕುರುಡಾಗದೆ ಇದ್ದುದ್ದಕ್ಕೆ ಕಾರಣ ಅವರು ಅಮೃತಕಿರಣಗಳಿಂದ ರಂಜಿತವಾದ ನಿನ್ನ ಚಂದ್ರವದನವನ್ನು ನೋಡುತ್ತಿದ್ದುದೇ ಆಗಿದೆ.

೧೯. ಹೇ ದೇವಿ, ದುಷ್ಟರ ನಡತೆಯನ್ನು ಅಡಗಿಸುವ ಸ್ವಭಾವ ನಿನ್ನದು; ನಿನ್ನ ಸೌಂದರ್ಯ ಮನುಷ್ಯನ ಊಹನಾಶಕ್ತಿಗೆ ನಿಲುಕದೆ ಅಸದೃಶ ವಾಗಿದೆ; ನಿನ್ನ ಶಕ್ತಿ ದೇವತೆಗಳ ಪರಾಕ್ರಮವನ್ನು ಅಡಗಿಸಿದ ಅಸುರ ರನ್ನು ಸಂಹರಿಸಬಲ್ಲದು. ಶತ್ರುಗಳಿಗೆ ಕೂಡ ನಿನ್ನ ದಯೆಯು ಹೀಗೆ ಪ್ರಕಟಿತವಾಗಿದೆ.

೨೦. ಹೇ ದೇವಿ, ನಿನ್ನ ಪರಾಕ್ರಮವನ್ನು ಹೋಲಿಸುವುದೆಂತು? ಅತಿ ಮನೋ ಹರವಾದ ಸೌಂದರ್ಯ ಮತ್ತು ವೈರಿಗಳ ಎದೆಯನ್ನು ತಲ್ಲಣಿಸು ವಂತಹ ವೀರ್ಯ ಇವುಗಳನ್ನು ನೋಡುವುದೆಲ್ಲಿ? ಹೇ ವರದೆ, ಹೃದಯ ದಲ್ಲಿ ಕೃಪೆ ಮತ್ತು ಸಮರದಲ್ಲಿ ನಿರ್ದಯತೆ ಇವು ಮೂರು ಲೋಕ ಗಳಲ್ಲಿ ನಿನ್ನಲ್ಲಿಯೇ ಕಾಣುವುವು.

೨೧. ಶತ್ರುಗಳನ್ನು ನಾಶಮಾಡಿ ತ್ರಿಲೋಕಗಳನ್ನೂ ನೀನು ರಕ್ಷಿಸಿರುವೆ; ಶತ್ರುಗಣಗಳನ್ನು ಸಮರದಲ್ಲಿ ಸಂಹರಿಸಿ ಸ್ವರ್ಗಕ್ಕೆ ಒಯ್ದಿರುವೆ; ಉನ್ಮತ್ತರಾದ ಅಸುರರಿಂದ ಉಂಟಾದ ನಮ್ಮ ಭಯವೂ ಕೂಡ ಹೋಯಿತು; ನಿನಗೆ ನಮಸ್ಕಾರ.

೨೨. ಹೇ ಅಂಬಿಕೆ, ನಿನ್ನ ಶೂಲದಿಂದ ನಮ್ಮನ್ನು ಕಾಪಾಡು; ನಿನ್ನ ಖಡ್ಗ ದಿಂದ ನಮ್ಮನ್ನು ಕಾಪಾಡು; ನಿನ್ನ ಘಂಟೆಯ ಶಬ್ದದಿಂದಲೂ, ಬಿಲ್ಲಿನ ಟಂಕಾರದಿಂದಲೂ ನಮ್ಮನ್ನು ಕಾಪಾಡು.

ಪ್ರಾಚ್ಯಾಂ ರಕ್ಷ ಪ್ರತೀಚ್ಯಾಂ ಚ ಚಂಡಿಕೇ ರಕ್ಷ ದಕ್ಷಿಣೇ ।
ಭ್ರಾಮಣೇನಾತ್ಮಶೂಲಸ್ಯ ಉತ್ತರಸ್ಯಾಂ ತಥೇಶ್ವರಿ ॥ ೨೩ ॥

ಸೌಮ್ಯಾನಿ ಯಾನಿ ರೂಪಾಣಿ ತ್ರೈಲೋಕ್ಯೇ ವಿಚರಂತಿ ತೇ ।
ಯಾನಿ ಚಾತ್ಯಂತಘೋರಾಣಿ ತೈ ರಕ್ಷಾಸ್ಮಾಂಸ್ತಥಾ ಭುವಮ್
॥ ೨೪ ॥

ಖಡ್ಗಶೂಲಗದಾದೀನಿ ಯಾನಿ ಚಾಸ್ತ್ರಾಣಿ ತೇಽಬಿಂಕೇ ।
ಕರಪಲ್ಲವಸಂಗೀನಿ ತೈರಸ್ಮಾನ್ ರಕ್ಷ ಸರ್ವತಃ ॥ ೨೫ ॥

ದೇವೀಮಾಹಾತ್ಮ್ಯಮ್, IV, ೩-೨೭.

೨೩. ಹೇ ಚಂಡಿಕೆ, ಹೇ ಈಶ್ವರಿ, ನಿನ್ನ ಶೂಲಾಯುಧವನ್ನು ತಿರುಗಿಸುತ್ತ ನಮ್ಮನ್ನು ಪೂರ್ವಪಶ್ಚಿಮಗಳಲ್ಲಿ ಮತ್ತು ಉತ್ತರದಕ್ಷಿಣಗಳಲ್ಲಿ ರಕ್ಷಿಸು.

೨೪. ತ್ರಿಲೋಕಗಳಲ್ಲಿ ಸಂಚರಿಸುತ್ತಿರುವ ಅಥವಾ ವಿರಾಜಿಸುತ್ತಿರುವ ನಿನ್ನ ಸೌಮ್ಯರೂಪಗಳಿಂದಲೂ ಮತ್ತು ನಿನ್ನ ಘೋರರೂಪಗಳಿಂದಲೂ ನಮ್ಮನ್ನು ಮತ್ತು ಈ ಜಗತ್ತನ್ನು ರಕ್ಷಿಸು.

೨೫. ಹೇ ಅಂಬಿಕೆ, ನಿನ್ನ ಕರಪಲ್ಲವಗಳು ಹಿಡಿದಿರುವ ಖಡ್ಗ, ಶೂಲ, ಗದೆ ಮತ್ತು ಇತರ ಆಯುಧಗಳಿಂದ ನಮ್ಮನ್ನು ಎಲ್ಲಾ ಕಡೆಗಳಲ್ಲಿಯೂ ರಕ್ಷಿಸು.

# ದೇವೀಸ್ತುತಿಃ

೩

ನಮೋ ದೇವ್ಯೈ ಮಹಾದೇವ್ಯೈ ಶಿವಾಯೈ ಸತತಂ ನಮಃ ।
ನಮಃ ಪ್ರಕೃತ್ಯೈ ಭದ್ರಾಯೈ ನಿಯತಾಃ ಪ್ರಣತಾ ಸ್ಮ ತಾಮ್ ॥ ೧ ॥

ರೌದ್ರಾಯೈ ನಮೋ ನಿತ್ಯಾಯೈ ಗೌರ್ಯೈ ಧಾತ್ರ್ಯೈ ನಮೋ ನಮಃ ।
ಜ್ಯೋತ್ಸ್ನಾಯೈ ಚೇಂದುರೂಪಿಣ್ಯೈ ಸುಖಾಯೈ ಸತತಂ ನಮಃ ॥ ೨ ॥

ಕಲ್ಯಾಣ್ಯೈ ಪ್ರಣತಾ ವೃದ್ಧ್ಯೈ ಸಿದ್ಧ್ಯೈ ಕುರ್ಮೋ ನಮೋ ನಮಃ ।
ನೈರ್ಋತ್ಯೈ ಭೂಭೃತಾಂ ಲಕ್ಷ್ಮ್ಯೈ ಶರ್ವಾಣ್ಯೈ ತೇ
ನಮೋ ನಮಃ ॥ ೩ ॥

ದುರ್ಗಾಯೈ ದುರ್ಗಪಾರಾಯೈ ಸಾರಾಯೈ ಸರ್ವಕಾರಿಣ್ಯೈ ।
ಖ್ಯಾತ್ಯೈ ತಥೈವ ಕೃಷ್ಣಾಯೈ ಧೂಮ್ರಾಯೈ ಸತತಂ ನಮಃ ॥ ೪ ॥

ಅತಿಸೌಮ್ಯಾತಿರೌದ್ರಾಯೈ ನತಾಸ್ತಸ್ಯೈ ನಮೋ ನಮಃ ।
ನಮೋ ಜಗತ್ಪ್ರತಿಷ್ಠಾಯೈ ದೇವ್ಯೈ ಕೃತ್ಯೈ ನಮೋ ನಮಃ ॥ ೫ ॥

ಯಾ ದೇವೀ ಸರ್ವಭೂತೇಷು ವಿಷ್ಣುಮಾಯೇತಿ ಶಬ್ದಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೬ ॥

ಯಾ ದೇವಿ ಸರ್ವಭೂತೇಷು ಚೇತನೇತ್ಯಭಿಧೀಯತೇ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೭ ॥

ಯಾ ದೇವೀ ಸರ್ವಭೂತೇಷು ಬುದ್ಧಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೮ ॥

# ದೇವೀಸ್ತುತಿ

೩

೧. ಜ್ಯೋತಿರ್ಮಯಿಯಾದ ಮಹಾದೇವಿಗೆ ನಮಸ್ಕಾರ; ಮಂಗಳಾದೇವಿಗೆ ಸದಾ ನಮಸ್ಕಾರ; (ಸೃಷ್ಟಿಶಕ್ತಿರೂಪಳಾದ) ಪ್ರಕೃತಿಗೂ, (ಸ್ಥಿತಿಶಕ್ತಿರೂಪ ಳಾದ) ಭದ್ರೆಗೂ ನಮಸ್ಕಾರ; ನಾವು ಸಮಾಹಿತಚಿತ್ತರಾಗಿ ಆ ದೇವಿ ಯನ್ನು ನಮಸ್ಕರಿಸುತ್ತೇವೆ.

೨. ಸಂಹಾರಶಕ್ತಿರೂಪಳಾದ ದೇವಿಗೆ ನಮಸ್ಕಾರ; ನಿತ್ಯಳಾದ ದೇವಿಗೆ ನಮಸ್ಕಾರ; ಗೌರಿಗೆ, ಜಗದ್ಧಾತ್ರಿಗೆ ನಮಸ್ಕಾರ; ಜ್ಯೋತ್ಸ್ನಾರೂಪಳೂ, ಚಂದ್ರರೂಪಳೂ, ಆನಂದಸ್ವರೂಪಳೂ ಆದ ದೇವಿಗೆ ಸದಾ ನಮಸ್ಕಾರ.

೩. ಕಲ್ಯಾಣಿಗೆ ನಮಸ್ಕಾರ; ಯಾರು ಅಭಿವೃದ್ಧಿ ಮತ್ತು ಸಿದ್ಧಿಸ್ವರೂಪಳಾಗಿ ರುವಳೋ ಅವಳಿಗೆ ನಮಸ್ಕಾರ; ಅಲಕ್ಷ್ಮೀರೂಪಳೂ, ರಾಜರಿಗೆ ಲಕ್ಷ್ಮಿ ಯಂತೆ ಇರುವವಳೂ, ಆದ ಶರ್ವಾಣಿಗೆ ನಮಸ್ಕಾರ.

೪. ದುರ್ಗಮವಾದ ಸಂಸಾರದಿಂದ ಪಾರುಮಾಡುವವಳೂ, ಎಲ್ಲಕ್ಕೂ ಸಾರ ಭೂತಳೂ, ಸೃಷ್ಟಿಕರ್ತಳೂ, ಖ್ಯಾತಿರೂಪಳೂ, ಕೃಷ್ಣವರ್ಣವುಳ್ಳವಳೂ, ಧೂಮ್ರವರ್ಣವುಳ್ಳವಳೂ ಆದ ದುರ್ಗಾದೇವಿಗೆ ನಮಸ್ಕಾರ.

೫. ಅತಿಸೌಮ್ಯಳೂ, ಅತಿರೌದ್ರಳೂ ಆದ ದೇವಿಗೆ ನಮಸ್ಕಾರ; ಜಗತ್ತಿಗೆ ಆಧಾರಭೂತಳಾಗಿರುವವಳಿಗೆ ನಮಸ್ಕಾರ; ಕ್ರಿಯಾರೂಪಳಾದ ದೇವಿಗೆ ಪುನಃ ಪುನಃ ನಮಸ್ಕಾರ.

೬. ಯಾವ ದೇವಿಯು ಎಲ್ಲಾ ಜೀವಿಗಳಲ್ಲಿಯೂ ವಿಷ್ಣುಮಾಯೆಯೆಂದು (ಸರ್ವಾಗಮಗಳಲ್ಲಿ) ಪ್ರತಿಪಾದಿತಳಾಗಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೭. ಯಾವ ದೇವಿಯು ಎಲ್ಲಾ ಜೀವಿಗಳಲ್ಲಿಯೂ ಚೇತನೆಯೆಂದು ಹೇಳ ಲ್ಪಟ್ಟಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೮. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ಬುದ್ಧಿರೂಪದಿಂದ ನೆಲೆಸಿರು ವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

ಯಾ ದೇವೀ ಸರ್ವಭೂತೇಷು ನಿದ್ರಾರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೯ ॥

ಯಾ ದೇವೀ ಸರ್ವಭೂತೇಷು ಕ್ಷುಧಾರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೧೦ ॥

ಯಾ ದೇವೀ ಸರ್ವಭೂತೇಷು ಛಾಯಾರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೧೧ ॥

ಯಾ ದೇವೀ ಸರ್ವಭೂತೇಷು ಶಕ್ತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೧೨ ॥

ಯಾ ದೇವೀ ಸರ್ವಭೂತೇಷು ತೃಷ್ಣಾರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೧೩ ॥

ಯಾ ದೇವೀ ಸರ್ವಭೂತೇಷು ಕ್ಷಾಂತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೧೪ ॥

ಯಾ ದೇವೀ ಸರ್ವಭೂತೇಷು ಜಾತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೧೫ ॥

ಯಾ ದೇವೀ ಸರ್ವಭೂತೇಷು ಲಜ್ಜಾರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೧೬ ॥

ಯಾ ದೇವೀ ಸರ್ವಭೂತೇಷು ಶಾಂತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೧೭ ॥

ಯಾ ದೇವೀ ಸರ್ವಭೂತೇಷು ಶ್ರದ್ಧಾರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೧೮ ॥

ಯಾ ದೇವೀ ಸರ್ವಭೂತೇಷು ಕಾಂತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೧೯ ॥

ಯಾ ದೇವೀ ಸರ್ವಭೂತೇಷು ಲಕ್ಷ್ಮೀರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೨೦ ॥

೯. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ನಿದ್ರಾರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೧೦. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ಕ್ಷುಧಾರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೧೧. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ಛಾಯಾರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೧೨. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ಶಕ್ತಿರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೧೩. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ತೃಷ್ಣಾರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೧೪. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ಕ್ಷಮಾರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೧೫. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ಜಾತಿರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೧೬. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ಲಜ್ಜಾರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೧೭. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ಶಾಂತಿರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೧೮. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ಶ್ರದ್ಧಾರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೧೯. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ಕಾಂತಿರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೨೦. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ಲಕ್ಷ್ಮೀರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

ಯಾ ದೇವೀ ಸರ್ವಭೂತೇಷು ವೃತ್ತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೨೧ ॥
ಯಾ ದೇವೀ ಸರ್ವಭೂತೇಷು ಸ್ಮೃತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೨೨ ॥
ಯಾ ದೇವೀ ಸರ್ವಭೂತೇಷು ದಯಾರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೨೩ ॥
ಯಾ ದೇವೀ ಸರ್ವಭೂತೇಷು ತುಷ್ಟಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೨೪ ॥
ಯಾ ದೇವೀ ಸರ್ವಭೂತೇಷು ಮಾತೃರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೨೫ ॥
ಯಾ ದೇವೀ ಸರ್ವಭೂತೇಷು ಭ್ರಾಂತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೨೬ ॥
ಇಂದ್ರಿಯಾಣಾಮಧಿಷ್ಠಾತ್ರೀ ಭೂತಾನಾಂ ಚಾಖಿಲೇಷು ಯಾ ।
ಭೂತೇಷು ಸತತಂ ತಸ್ಯೈ ವ್ಯಾಪ್ತ್ಯೈ ದೇವ್ಯೈ ನಮೋ ನಮಃ ॥ ೨೭ ॥
ಚಿತಿರೂಪೇಣ ಯಾ ಕೃತ್ಸ್ನಮೇತದ್ವ್ಯಾಪ್ಯ ಸ್ಥಿತಾ ಜಗತ್ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ೨೮ ॥
ಸ್ತುತಾ ಸುರೈಃ ಪೂರ್ವಮಭೀಷ್ಟಸಂಶ್ರಯಾ-
ತ್ತಥಾ ಸುರೇಂದ್ರೇಣ ದಿನೇಷು ಸೇವಿತಾ ।
ಕರೋತು ಸಾ ನಃ ಶುಭಹೇತುರೀಶ್ವರೀ
ಶುಭಾನಿ ಭದ್ರಾಣ್ಯಭಿಹಂತು ಚಾಪದಃ ॥ ೨೯ ॥
ಯಾ ಸಾಂಪ್ರತಂ ಚೋದ್ಧತದೈತ್ಯತಾಪಿತೈ-
ರಸ್ಮಾಭಿರೀಶಾ ಚ ಸುರೈರ್ನಮಸ್ಯತೇ ।
ಯಾ ಚ ಸ್ಮೃತಾ ತತ್‍ಕ್ಷಣಮೇವ ಹಂತಿ ನಃ
ಸರ್ವಾಪದೋ ಭಕ್ತಿವಿನಮ್ರಮೂರ್ತಿಭಿಃ ॥ ೩೦ ॥

ದೇವೀಮಾಹಾತ್ಮ್ಯಮ್, V ೯–೮೨

೨೧. ಯಾವ ದೇವಿಯು ಸರ್ವಜೀವಿಗಳಲ್ಲಿಯೂ (ಕೃಷಿ, ವಾಣಿಜ್ಯ ಮುಂತಾದ) ವೃತ್ತಿರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೨೨. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ಸ್ಮೃತಿರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೨೩. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ದಯಾರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೨೪. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ತುಷ್ಟಿರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೨೫. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ಮಾತೃರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೨೬. ಯಾವ ದೇವಿಯು ಸರ್ವಜೀವಿಗಳಲ್ಲಿಯೂ ಭ್ರಾಂತಿರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರ.

೨೭. ಯಾವ ದೇವಿಯು ಇಂದ್ರಿಯಗಳ ಮತ್ತು (ಪೃಥ್ವೀ ಮುಂತಾದ) ಪಂಚಭೂತಗಳ ಅಧಿಷ್ಠಾತ್ರಿಯಾಗಿರುವಳೋ ಅಂತಹ ಸರ್ವವ್ಯಾಪಿನಿಯಾದ ದೇವಿಗೆ ಪುನಃ ಪುನಃ ನಮಸ್ಕಾರ.

೨೮. ಚಿದ್ರೂಪದಿಂದ ಇಡೀ ವಿಶ್ವವನ್ನು ವ್ಯಾಪಿಸಿರುವ ದೇವಿಗೆ ಪುನಃ ಪುನಃ ನಮಸ್ಕಾರ.

೨೯–೩೦. ಬ್ರಹ್ಮಾದಿ ದೇವತೆಗಳು ಪೂರ್ವದಲ್ಲಿ ಯಾರ ಸ್ತುತಿಯನ್ನು ಮಾಡಿದ್ದರೋ, ದೇವರಾಜನಾದ ಇಂದ್ರನು ತನ್ನ ಅಭೀಷ್ಟವನ್ನು (ಮಹಿಷಾಸುರವಧೆ) ಹೊಂದಿದನಂತರ ಪ್ರತಿದಿನವೂ ಯಾರ ಸೇವೆಯನ್ನು ಮಾಡುತ್ತಿರುವನೋ, (ಶುಂಭ ಮೊದಲಾದ) ಸೊಕ್ಕುಳ್ಳ ದೈತ್ಯರಿಂದ ಪೀಡಿತರಾಗಿ ಈಗಲೂ ಯಾವ ಈಶ್ವರಿಯನ್ನು ನಾವು ಕೊಂಡಾಡುತ್ತಿದ್ದೇವೋ ಮತ್ತು ಭಕ್ತಿಯಿಂದ ಬಾಗಿದ ನಮ್ಮಿಂದ ಸ್ಮರಿಸಲ್ಪಟ್ಟು ಯಾವಳು ಸರ್ವ ವಿಪತ್ತುಗಳನ್ನು ಈ ಕ್ಷಣವೇ ನಾಶಮಾಡುತ್ತಾಳೋ, ಆ ಮಂಗಳಸ್ವರೂಪಳಾದ ಪರಮೇಶ್ವರಿಯು ನಮಗೆ ಅತಿಶಯವಾದ ಶುಭವನ್ನು ಉಂಟುಮಾಡಲಿ ಮತ್ತು ವಿಪತ್ತುಗಳನ್ನು ನಾಶಮಾಡಲಿ.

# ದೇವೀಸ್ತುತಿಃ

೪

ದೇವಿ ಪ್ರಪನ್ನಾರ್ತಿಹರೇ ಪ್ರಸೀದ
ಪ್ರಸೀದ ಮಾತರ್ಜಗತೋಽಖಿಲಸ್ಯ ।
ಪ್ರಸೀದ ವಿಶ್ವೇಶ್ವರಿ ಪಾಹಿ ವಿಶ್ವಂ
ತ್ವಮೀಶ್ವರೀ ದೇವಿ ಚರಾಚರಸ್ಯ ॥ ೧ ॥

ಆಧಾರಭೂತಾ ಜಗತಸ್ತ್ವಮೇಕಾ
ಮಹೀಸ್ವರೂಪೇಣ ಯತಃ ಸ್ಥಿತಾಸಿ ।
ಅಪಾಂ ಸ್ವರೂಪಸ್ಥಿತಯಾ ತ್ವಯೈತತ್
ಆಪ್ಯಾಯತೇ ಕೃತ್ಸ್ನಮಲಂಘ್ಯವೀರ್ಯೇ ॥ ೨ ॥

ತ್ವಂ ವೈಷ್ಣವೀಶಕ್ತಿರನಂತವೀರ್ಯಾ
ವಿಶ್ವಸ್ಯ ಬೀಜಂ ಪರಮಾಸಿ ಮಾಯಾ ।
ಸಂಮೋಹಿತಂ ದೇವಿ ಸಮಸ್ತಮೇತತ್
ತ್ವಂ ವೈ ಪ್ರಸನ್ನಾ ಭುವಿ ಮುಕ್ತಿಹೇತುಃ ॥ ೩ ॥

ವಿದ್ಯಾಃ ಸಮಸ್ತಾಸ್ತವ ದೇವಿ ಭೇದಾಃ
ಸ್ತ್ರಿಯಃ ಸಮಸ್ತಾಃ ಸಕಲಾ ಜಗತ್ಸು ।
ತ್ವಯೈಕಯಾ ಪೂರಿತಮಂಬಯೈತತ್
ಕಾ ತೇ ಸ್ತುತಿಃ ಸ್ತವ್ಯಪರಾಪರೋಕ್ತಿಃ ॥ ೪ ॥

ಸರ್ವಭೂತಾ ಯದಾ ದೇವೀ ಸ್ವರ್ಗಮುಕ್ತಿಪ್ರದಾಯಿನೀ ।
ತ್ವಂ ಸ್ತುತಾ ಸ್ತುತಯೇ ಕಾ ವಾ ಭವಂತು ಪರಮೋಕ್ತಯಃ ॥ ೫ ॥

ಸರ್ವಸ್ಯ ಬುದ್ಧಿರೂಪೇಣ ಜನಸ್ಯ ಹೃದಿ ಸಂಸ್ಥಿತೇ ।
ಸ್ವರ್ಗಾಪವರ್ಗದೇ ದೇವಿ ನಾರಾಯಣಿ ನಮೋಽಸ್ತು ತೇ ॥ ೬ ॥

# ದೇವೀಸ್ತುತಿ

೪

೧. ಹೇ ಭಕ್ತದುಃಖಹಾರಿಣಿ, ನಮ್ಮಲ್ಲಿ ಪ್ರಸನ್ನಳಾಗು; ಹೇ ನಿಖಿಲವಿಶ್ವ ಜನನಿ ಪ್ರಸನ್ನಳಾಗು; ಹೇ ವಿಶ್ವೇಶ್ವರಿ, ನಮ್ಮನ್ನು ಅನುಗ್ರಹಿಸಿ ಜಗತ್ತನ್ನೆಲ್ಲಾ ಕಾಪಾಡು; ಹೇ ದೇವಿ, ಚರಾಚರಜಗತ್ತಿಗೆಲ್ಲಾ ನೀನೇ ಈಶ್ವರಿ.

೨. ಅತಿಕ್ರಮಿಸಲಾಗದ ಶಕ್ತಿಯುಳ್ಳವಳೇ, ಪ್ರಪಂಚಕ್ಕೆಲ್ಲಾ ನೀನೊಬ್ಬಳೇ ಅವಲಂಬನವಾಗಿರುವೆ; ಏಕೆಂದರೆ ನೀನು ಈ ಭೂಮಿಯ ರೂಪವನ್ನು ಧರಿಸಿ ಎಲ್ಲಕ್ಕೂ ಆಶ್ರಯವನ್ನು ಕೊಟ್ಟಿರುವೆ; ನೀರಿನ ಸ್ವರೂಪದಲ್ಲಿರುವ ನಿನ್ನಿಂದ ಈ ಪ್ರಪಂಚವೆಲ್ಲಾ ಪುಷ್ಟಿಯನ್ನು ಹೊಂದುವುದು.

೩. ಹೇ ದೇವಿ, ನೀನು ಅನಂತವೀರ್ಯವುಳ್ಳ ವಿಷ್ಣುವಿನ ಶಕ್ತಿ; ವಿಶ್ವದ ಆದಿ ಕಾರಣವಾದ ಮಹಾಮಾಯೆ ನೀನೇ; ಜಗತ್ತನ್ನೆಲ್ಲಾ ಮೋಹಗೊಳಿಸಿರುವವಳು ನೀನೇ; (ಮತ್ತು ಪುನಃ) ನೀನು ಪ್ರಸನ್ನಳಾದರೆ ಮುಕ್ತಿಗೆ ಕಾರಣಳಾಗುವೆ.

೪. ಹೇ ದೇವಿ, ಸಮಸ್ತ ವಿದ್ಯೆಗಳೂ ನಿನ್ನ ಅಂಶಗಳು; ಸೌಂದರ್ಯಲಾವಣ್ಯಾದಿಗಳಿಂದ ಕೂಡಿದ ಸಕಲ ಸ್ತ್ರೀಯರು ಕೂಡ ನಿನ್ನ ಆವಿರ್ಭಾವವೆ; ನಿನ್ನೊಬ್ಬಳಿಂದಲೇ ಈ ಪ್ರಪಂಚ ವ್ಯಾಪ್ತವಾಗಿದೆ; ಸ್ತೋತ್ರಕ್ಕೆ ಸಂಬಂಧಪಟ್ಟ ಮುಖ್ಯ ಮತ್ತು ಗೌಣವಾದ ಉಕ್ತಿಗಳು ನೀನೇ ಆಗಿರುವುದರಿಂದ ನಿನ್ನನ್ನು ಸ್ತುತಿಸುವುದು ಹೇಗೆ?

೫. ನೀನು ಸರ್ವಭೂತಸ್ವರೂಪಳು, ಭುಕ್ತಿಮುಕ್ತಿಗಳನ್ನು ನೀಡುವವಳು, ಪ್ರಕಾಶಸ್ವರೂಪಳು ಎಂದು ಸ್ತುತಿಸಿದ ಮೇಲೆ, ನಿನ್ನ ಸ್ತೋತ್ರಕ್ಕೆ ಯೋಗ್ಯವಾದ ಇನ್ನು ಯಾವ ಪರಮೋಕ್ತಿಗಳು ಇರುವುವು?

೬. ಹೇ ನಾರಾಯಣೀದೇವಿ, ಎಲ್ಲರ ಹೃದಯದಲ್ಲಿ ಬುದ್ಧಿರೂಪದಿಂದ ನೆಲೆಸಿರುವ ಮತ್ತು ಭುಕ್ತಿಮುಕ್ತಿಗಳನ್ನು ನೀಡುವ ನಿನಗೆ ನಮಸ್ಕಾರ.

ಕಲಾಕಾಷ್ಠಾದಿರೂಪೇಣ ಪರಿಣಾಮಪ್ರದಾಯಿನಿ ।
ವಿಶ್ವಸ್ಯೋಪರತೌ ಶಕ್ತೇ ನಾರಾಯಣಿ ನಮೋಽಸ್ತು ತೇ ॥ ೭ ॥

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ಗೌರಿ ನಾರಾಯಣಿ ನಮೋಽಸ್ತು ತೇ ॥ ೮ ॥

ಸೃಷ್ಟಿಸ್ಥಿತಿವಿನಾಶಾನಾಂ ಶಕ್ತಿಭೂತೇ ಸನಾತನಿ ।
ಗುಣಾಶ್ರಯೇ ಗುಣಮಯೇ ನಾರಾಯಣಿ ನಮೋಽಸ್ತು ತೇ ॥ ೯ ॥

ಶರಣಾಗತ-ದೀನಾರ್ತ-ಪರಿತ್ರಾಣಪರಾಯಣೇ ।
ಸರ್ವಸ್ಯಾರ್ತಿಹರೇ ದೇವಿ ನಾರಾಯಣಿ ನಮೋಽಸ್ತು ತೇ ॥ ೧೦ ॥

ಹಂಸಯುಕ್ತವಿಮಾನಸ್ಥೇ ಬ್ರಹ್ಮಾಣೀರೂಪಧಾರಿಣಿ ।
ಕೌಶಾಂಭಃಕ್ಷರಿಕೇ ದೇವಿ ನಾರಾಯಣಿ ನಮೋಽಸ್ತು ತೇ ॥ ೧೧ ॥

ತ್ರಿಶೂಲಚಂದ್ರಾಹಿಧರೇ ಮಹಾವೃಷಭವಾಹಿನಿ ।
ಮಾಹೇಶ್ವರೀಸ್ವರೂಪೇಣ ನಾರಾಯಣಿ ನಮೋಽಸ್ತು ತೇ ॥ ೧೨ ॥

ಮಯೂರಕುಕ್ಕುಟವೃತೇ ಮಹಾಶಕ್ತಿಧರೇಽನಘೇ ।
ಕೌಮಾರೀರೂಪಸಂಸ್ಥಾನೇ ನಾರಾಯಣಿ ನಮೋಽಸ್ತು ತೇ ॥ ೧೩ ॥

ಶಂಖ-ಚಕ್ರ-ಗದಾ-ಶಾರ್ಙ್ಗ-ಗೃಹೀತ-ಪರಮಾಯುಧೇ ।
ಪ್ರಸೀದ ವೈಷ್ಣವೀರೂಪೇ ನಾರಾಯಣಿ ನಮೋಽಸ್ತು ತೇ ॥ ೧೪ ॥

೭. ಹೇ ನಾರಾಯಣಿ, ಕಾಲದ ಸೂಕ್ಷ್ಮ ಭಾಗಗಳಾದ ಕಲಾ, ಕಾಷ್ಠ ಮುಂತಾದುವುಗಳಿಂದ ಜಗತ್ತಿನಲ್ಲಿ ಪರಿಣಾಮವನ್ನುಂಟುಮಾಡುತ್ತಿರುವ ಮತ್ತು ಪ್ರಪಂಚದ ಸಂಹಾರಕಾರ್ಯದಲ್ಲಿ ಶಕ್ತಳಾಗಿರುವ ನಿನಗೆ ನಮಸ್ಕಾರ.

೮. ಹೇ ನಾರಾಯಣಿ, ಸರ್ವಮಂಗಲಮಾಂಗಲ್ಯಳೂ, ಶಿವಸ್ವರೂಪಳೂ, ಸರ್ವಾರ್ಥಗಳನ್ನು ಸಾಧಿಸುವವಳೂ, ಶರಣ್ಯಳೂ, ತ್ರಿಭುವನಜನನಿಯೂ, ಗೌರಿಯೂ ಆದ ನಿನಗೆ ನಮಸ್ಕಾರ.

೯. ಹೇ ನಾರಾಯಣಿ, ಸೃಷ್ಟಿ-ಸ್ಥಿತಿ-ವಿನಾಶಗಳ ಶಕ್ತಿರೂಪಳೂ, ಸನಾತನಿಯೂ, ತ್ರಿಗುಣಗಳಿಗೆ ಆಶ್ರಯಳೂ, ತ್ರಿಗುಣಮಯಳೂ ಆದ ನಿನಗೆ ನಮಸ್ಕಾರ.

೧೦. ಹೇ ನಾರಾಯಣಿ, ಶರಣಾಗತರು, ದೀನರು, ಆರ್ತರು ಮುಂತಾದವರ ರಕ್ಷಣೆಯಲ್ಲಿ ನಿರತಳಾಗಿರುವವಳೂ, ಎಲ್ಲರ ದುಃಖವನ್ನೂ ನಾಶಮಾಡುವವಳೂ ಆದ ನಿನಗೆ ನಮಸ್ಕಾರ.

೧೧. ಹೇ ನಾರಾಯಣಿ, ಬ್ರಹ್ಮಾಣೀರೂಪದಿಂದ ಹಂಸಯುಕ್ತವಾದ ವಿಮಾನದಲ್ಲಿ ಕುಳಿತು ಕಮಂಡಲುವಿನಿಂದ ದರ್ಭೋದಕವನ್ನು ಪ್ರೋಕ್ಷಿಸುತ್ತ ಶತ್ರುಗಳನ್ನು ನಾಶಮಾಡುವ ನಿನಗೆ ನಮಸ್ಕಾರ.

೧೨. ಹೇ ನಾರಾಯಣಿ, ತ್ರಿಶೂಲ, ಅರ್ಧಚಂದ್ರ, ಸರ್ಪ ಇವುಗಳನ್ನು ಧರಿಸಿ, ಮಾಹೇಶ್ವರೀರೂಪದಿಂದ ಮಹಾವೃಷಭವಾಹಿನಿಯಾಗಿರುವ ನಿನಗೆ ನಮಸ್ಕಾರ.

೧೩. ಹೇ ನಾರಾಯಣಿ, ನವಿಲು-ಕುಕ್ಕುಟಗಳಿಂದ ಕೂಡಿದವಳೂ, ನಿತ್ಯಶುದ್ಧಳೂ, ಮಹಾಶಕ್ತಿಯನ್ನು ಧರಿಸಿದವಳೂ, ಕುಮಾರನ ಶಕ್ತಿಸ್ವರೂಪಳೂ ಆದ ನಿನಗೆ ನಮಸ್ಕಾರ.

೧೪. ಹೇ ನಾರಾಯಣಿ, ನಮ್ಮಲ್ಲಿ ಪ್ರಸನ್ನಳಾಗು; ಶಂಖ, ಚಕ್ರ, ಗದೆ, ಶಾರ್ಙ್ಗ ಮುಂತಾದ ಆಯುಧಗಳನ್ನು ಧರಿಸಿರುವವಳೂ ವಿಷ್ಣುವಿನ ಶಕ್ತಿಸ್ವರೂಪಳೂ ಆದ ನಿನಗೆ ನಮಸ್ಕಾರ.

ಗೃಹಿತೋಗ್ರಮಹಾಚಕ್ರೇ ದಂಷ್ಟ್ರೋದ್ಧೃತವಸುಂಧರೇ ।
ವರಾಹರೂಪಿಣಿ ಶಿವೇ ನಾರಾಯಣಿ ನಮೋಽಸ್ತು ತೇ ॥ ೧೫ ॥

ನೃಸಿಂಹರೂಪೇಣೋಗ್ರೇಣ ಹಂತುಂ ದೈತ್ಯಾನ್ ಕೃತೋದ್ಯಮೇ ।
ತ್ರೈಲೋಕ್ಯತ್ರಾಣಸಹಿತೇ ನಾರಾಯಣಿ ನಮೋಽಸ್ತು ತೇ ॥ ೧೬ ॥

ಕಿರೀಟಿನಿ ಮಹಾವಜ್ರೇ ಸಹಸ್ರನಯನೋಜ್ಜ್ವಲೇ ।
ವೃತ್ರಪ್ರಾಣಹರೇ ಚೈಂದ್ರಿ ನಾರಾಯಣಿ ನಮೋಽಸ್ತು ತೇ ॥ ೧೭ ॥

ಶಿವದೂತೀಸ್ವರೂಪೇಣ ಹತದೈತ್ಯಮಹಾಬಲೇ ।
ಘೋರರೂಪೇ ಮಹಾರಾವೇ ನಾರಾಯಣಿ ನಮೋಽಸ್ತು ತೇ ॥ ೧೮ ॥

ದಂಷ್ಟ್ರಾಕರಾಲವದನೇ ಶಿರೋಮಾಲವಿಭೂಷಣೇ ।
ಚಾಮುಂಡೇ ಮುಂಡಮಥನೇ ನಾರಾಯಣಿ ನಮೋಽಸ್ತು ತೇ ॥ ೧೯ ॥

ಲಕ್ಷ್ಮಿ ಲಜ್ಜೇ ಮಹಾವಿದ್ಯೇ ಶ್ರದ್ಧೇ ಪುಷ್ಟಿ ಸ್ವಧೇ ಧ್ರುವೇ ।
ಮಹಾರಾತ್ರಿ ಮಹಾವಿದ್ಯೇ ನಾರಾಯಣಿ ನಮೋಽಸ್ತು ತೇ ॥ ೨೦ ॥

ಮೇಧೇ ಸರಸ್ವತಿ ವರೇ ಭೂತಿ ಬಾಭ್ರವಿ ತಾಮಸಿ ।
ನಿಯತೇ ತ್ವಂ ಪ್ರಸೀದೇಶೇ ನಾರಾಯಣಿ ನಮೋಽಸ್ತು ತೇ ॥ ೨೧ ॥

ಸರ್ವಸ್ವರೂಪೇ ಸರ್ವೇಶೇ ಸರ್ವಶಕ್ತಿಸಮನ್ವಿತೇ ।
ಭಯೇಭ್ಯಸ್ತ್ರಾಹಿ ನೋ ದೇವಿ ದುರ್ಗೇ ದೇವಿ ನಮೋಽಸ್ತು ತೇ ॥ ೨೨ ॥

೧೫. ಹೇ ನಾರಾಯಣಿ, ವರಾಹರೂಪವನ್ನು ಧರಿಸಿ ಮಹಾಚಕ್ರವನ್ನು ಹಿಡಿದು ಕೋರೇಹಲ್ಲಿನಿಂದ ನೀರಿನಲ್ಲಿ ಮುಳುಗಿದ ಭೂಮಿಯನ್ನು ಉದ್ಧರಿಸಿದ ಮಂಗಳಸ್ವರೂಪಳಾದ ನಿನಗೆ ನಮಸ್ಕಾರ.

೧೬. ಹೇ ನಾರಾಯಣಿ, ಉಗ್ರವಾದ ನೃಸಿಂಹರೂಪದಿಂದ ರಾಕ್ಷಸರನ್ನು ಸಂಹರಿಸಲು ಉದ್ಯಮಶೀಲಳಾದ ಮತ್ತು ತ್ರಿಲೋಕಸಂರಕ್ಷಣೆಯಲ್ಲಿ ನಿರತಳಾಗಿರುವ ನಿನಗೆ ನಮಸ್ಕಾರ.

೧೭. ಹೇ ನಾರಾಯಣಿ, ಕಿರೀಟ ಮತ್ತು ಮಹಾವಜ್ರಗಳನ್ನು ಧರಿಸಿ, ಸಹಸ್ರ ನಯನಗಳಿಂದ ಪ್ರಜ್ವಲಿಸುತ್ತಾ ವೃತ್ರಾಸುರರನ್ನು ಸಂಹಾರಮಾಡಿದ ಇಂದ್ರಶಕ್ತಿರೂಪಳಾದ ನಿನಗೆ ನಮಸ್ಕಾರ.

೧೮. ಹೇ ನಾರಾಯಣಿ, ಶಿವದೂತಿರೂಪದಿಂದ ದೈತ್ಯರನ್ನು ನಾಶಮಾಡಿದ, ಘೋರರೂಪವುಳ್ಳ ಮತ್ತು ಮಹಾನಾದವನ್ನು ಮಾಡಿದ ನಿನಗೆ ನಮಸ್ಕಾರ.

೧೯. ಹೇ ನಾರಾಯಣಿ, ಚಾಮುಂಡಾಂಬಿಕೆ, ಕೋರೇದಾಡೆಗಳಿಂದ ಭಯಂಕರವಾದ ಮುಖವುಳ್ಳ, ನರಮುಂಡಗಳಿಂದ ಅಲಂಕೃತಳಾದ, ಮುಂಡಾಸುರನನ್ನು ಸಂಹರಿಸಿದ ನಿನಗೆ ನಮಸ್ಕಾರ.

೨೦. ಹೇ ನಾರಾಯಣಿ, ಲಕ್ಷ್ಮೀಸ್ವರೂಪಳೂ, ಲಜ್ಜಾಸ್ವರೂಪಳೂ, ಬ್ರಹ್ಮ ವಿದ್ಯಾಸ್ವರೂಪಳೂ, ಶ್ರದ್ಧಾಸ್ವರೂಪಳೂ, ಪುಷ್ಟಿಸ್ವರೂಪಳೂ, ಸ್ವಧಾ ಮಂತ್ರರೂಪಳೂ, ನಿತ್ಯಳೂ, ಮಹಾಪ್ರಳಯಕಾಲದ ರಾತ್ರಿಸ್ವರೂಪಳೂ ಎಲ್ಲರನ್ನೂ ಮೋಹಗೊಳಿಸುವ ಅವಿದ್ಯಾಸ್ವರೂಪಳೂ ಆದ ನಿನಗೆ ನಮಸ್ಕಾರ.

೨೧. ಹೇ ನಾರಾಯಣಿ, ಪ್ರಸನ್ನಳಾಗು; ಮೇಧಾಸ್ವರೂಪಳೂ, ಸರಸ್ವತೀ ಸ್ವರೂಪಳೂ, ಸರ್ವಶ್ರೇಷ್ಠಳೂ, ಸತ್ತ್ವರಜಸ್ತಮೋಗುಣಗಳಿಂದ ಕೂಡಿದವಳೂ, ಈಶ್ವರಿಯೂ ಆದ ನಿನಗೆ ನಮಸ್ಕಾರ.

೨೨. ಹೇ ನಾರಾಯಣಿ, ನಮ್ಮನ್ನು ಸರ್ವಭಯಗಳಿಂದಲೂ ಪಾರುಮಾಡು; ಸರ್ವಸ್ವರೂಪಳೂ, ಸರ್ವೇಶ್ವರಿಯೂ, ಸರ್ವಶಕ್ತಿಗಳಿಂದ ಕೂಡಿದವಳೂ, ದುರ್ಗಾದೇವಿಯೂ ಆದ ನಿನಗೆ ನಮಸ್ಕಾರ.

ಏತತ್ತೇ ವದನಂ ಸೌಮ್ಯಂ ಲೋಚನತ್ರಯಭೂಷಿತಮ್ ।
ಪಾತು ನಃ ಸರ್ವಭೂತೇಭ್ಯಃ ಕಾತ್ಯಾಯನಿ ನಮೋಽಸ್ತು ತೇ ॥ ೨೩ ॥

ಜ್ವಾಲಾಕರಾಲಮತ್ಯುಗ್ರಮಶೇಷಾಸುರಸೂದನಮ್ ।
ತ್ರಿಶೂಲಂ ಪಾತು ನೋ ಭೀತೇರ್ಭದ್ರಕಾಲಿ ನಮೋಽಸ್ತು ತೇ ॥ ೨೪ ॥

ಹಿನಸ್ತಿ ದೈತ್ಯತೇಜಾಂಸಿ ಸ್ವನೇನಾಪೂರ್ಯ ಯಾ ಜಗತ್ ।
ಸಾ ಘಂಟಾ ಪಾತು ನೋ ದೇವಿ ಪಾಪೇಭ್ಯೋ ನಃ ಸುತಾನಿವ ॥ ೨೫ ॥

ಅಸುರಾಸೃಗ್ವಸಾಪಂಕಚರ್ಚಿತಸ್ತೇ ಕರೋಜ್ಜ್ವಲಃ ।
ಶುಭಾಯ ಖಡ್ಗೋ ಭವತು ಚಂಡಿಕೇ ತ್ವಾಂ ನತಾ ವಯಮ್ ॥ ೨೬ ॥

ರೋಗಾನಶೇಷಾನಪಹಂಸಿ ತುಷ್ಟಾ
ರುಷ್ಟಾ ತು ಕಾಮಾನ್ ಸಕಲಾನಭೀಷ್ಟಾನ್ ।
ತ್ವಾಮಾಶ್ರಿತಾನಾಂ ನ ವಿಪನ್ನರಾಣಾಂ
ತ್ವಾಮಾಶ್ರಿತಾ ಹ್ಯಾಶ್ರಯತಾಂ ಪ್ರಯಾಂತಿ ॥ ೨೭ ॥

ಏತತ್ಕೃತಂ ಯತ್ಕದನಂ ತ್ವಯಾದ್ಯ
ಧರ್ಮದ್ವಿಷಾಂ ದೇವಿ ಮಹಾಸುರಾಣಾಮ್ ।
ರೂಪೈರನೇಕೈರ್ಬಹುಧಾತ್ಮಮೂರ್ತಿಂ
ಕೃತ್ವಾಂಬಿಕೇ ತತ್ ಪ್ರಕರೋತಿ ಕಾಽನ್ಯಾ ॥ ೨೮ ॥

ವಿದ್ಯಾಸು ಶಾಸ್ತ್ರೇಷು ವಿವೇಕದೀಪೇ-
ಷ್ವಾದ್ಯೇಷು ವಾಕ್ಯೇಷು ಚ ಕಾ ತ್ವದನ್ಯಾ ।
ಮಮತ್ವಗರ್ತೇಽತಿಮಹಾಂಧಕಾರೇ
ವಿಭ್ರಾಮಯತ್ಯೇತದತೀವ ವಿಶ್ವಂ ॥ ೨೯ ॥

೨೩. ಹೇ ಕಾತ್ಯಾಯನಿ, ಮೂರು ಕಣ್ಣುಗಳಿಂದ ಶೋಭಿತವಾದ ನಿನ್ನ ಸೌಮ್ಯ ವದನವು ನಮ್ಮನ್ನು ಸರ್ವ ಭೂತಗಳ ಉಪದ್ರವದಿಂದ ಕಾಪಾಡಲಿ; ನಿನಗೆ ನಮಸ್ಕಾರ.

೨೪. ಹೇ ಭದ್ರಕಾಳಿ, ಜ್ವಾಲೆಗಳಿಂದ ಭಯಂಕರವೂ, ಅತ್ಯುಗ್ರವೂ, ಅಸಂಖ್ಯಾಸುರನಾಶಕವೂ ಆದ ನಿನ್ನ ತ್ರಿಶೂಲ ನಮ್ಮನ್ನು ಭಯದಿಂದ ಪಾರುಮಾಡಲಿ; ನಿನಗೆ ನಮಸ್ಕಾರ.

೨೫. ಹೇ ದೇವಿ, ನಿನ್ನ ಯಾವ ಘಂಟೆಯು ತನ್ನ ಧ್ವನಿಯನ್ನು ಜಗತ್ತಿನಲ್ಲೆಲ್ಲಾ ತುಂಬಿ ದೈತ್ಯರ ತೇಜಸ್ಸನ್ನು ನಾಶಮಾಡುವುದೋ, ಅದು ನಮ್ಮನ್ನು—ತಾಯಿಯು ಮಕ್ಕಳನ್ನು ಕಾಪಾಡುವ ಹಾಗೆ— ರಕ್ಷಿಸಲಿ.

೨೬. ಹೇ ಚಂಡಿಕೆ, ಅಸುರರ ರಕ್ತ ಮತ್ತು ಕೊಬ್ಬಿನ ಕೆಸರಿನಿಂದ ಲೇಪಿತವಾಗಿ ತೇಜೋಮಯವಾಗಿರುವ ನಿನ್ನ ಖಡ್ಗವು ನಮಗೆ ಶುಭವನ್ನುಂಟು ಮಾಡಲಿ; ನಿನಗೆ ನಮಸ್ಕಾರವನ್ನು ಮಾಡುತ್ತೇವೆ.

೨೭. ನೀನು ಸಂತುಷ್ಟಳಾದರೆ ಎಲ್ಲಾ ರೋಗಗಳನ್ನೂ ನಾಶಮಾಡುವೆ; ನೀನು ಕುಪಿತಳಾದರೆ ಅಭೀಷ್ಟಗಳನ್ನು ನಾಶಮಾಡುವೆ, ನಿನ್ನಲ್ಲಿ ಆಶ್ರಿತರಾದವರಿಗೆ ಯಾವ ವಿಪತ್ತೂ ಬರುವದಿಲ್ಲ; ನಿನ್ನಲ್ಲಿ ಆಶ್ರಯವನ್ನು ಪಡೆದವರು ಇತರರಿಗೆ ಆಶ್ರಯವನ್ನು ನೀಡಬಲ್ಲರು.

೨೮. ಹೇ ದೇವಿ, ನೀನು ಈಗ (ಬ್ರಾಹ್ಮೀ, ಕಾಳೀ) ಮುಂತಾದ ರೂಪಗಳ ಮೂಲಕ ನಿನ್ನ ಆತ್ಮರೂಪವನ್ನು ಬಹು ಪ್ರಕಾರ ಪ್ರಕಟಮಾಡಿ ಧರ್ಮದ್ವೇಷಿಗಳಾದ ಮಹಾಸುರರನ್ನು ನಾಶಮಾಡಿದಂತೆ ಹೇ ಅಂಬಿಕೆ, ಮತ್ತಾರು ಮಾಡಬಲ್ಲರು?

೨೯. ಹೇ ದೇವಿ, ಐಹಿಕ ವಿದ್ಯೆಗಳಲ್ಲಿ, (ಮನುಸ್ಮೃತ್ಯಾದಿ ಪ್ರವೃತ್ತಿಪರ) ಶಾಸ್ತ್ರಗಳಲ್ಲಿ, (ನಿವೃತ್ತಿಪರವಾದ) ವೇದಾಂತವಾಕ್ಯಗಳಲ್ಲಿ ನಿನ್ನನ್ನು ಬಿಟ್ಟರೆ ಮತ್ತಾರು ಪ್ರವೃತ್ತಿಯನ್ನು ಉಂಟುಮಾಡಬಲ್ಲರು? ಮಹಾಂಧಕಾರರೂಪವೂ ಮಮತ್ವಪೂರ್ಣವೂ ಆದ ಸಂಸಾರವೆಂಬ ಗರ್ತದಲ್ಲಿ ನೀನಲ್ಲದೆ ಮತ್ತಾರು ಮನುಷ್ಯನನ್ನು ಸುತ್ತುತ್ತಿರುವಂತೆ ಮಾಡುವರು?

ರಕ್ಷಾಂಸಿ ಯತ್ರೋಗ್ರವಿಷಾಶ್ಚ ನಾಗಾ
ಯತ್ರಾರಯೋ ದಸ್ಯುಬಲಾನಿ ಯತ್ರ ।
ದಾವಾನಲೋ ಯತ್ರ ತಥಾಬ್ಧಿಮಧ್ಯೇ
ತತ್ರ ಸ್ಥಿತಾ ತ್ವಂ ಪರಿಪಾಸಿ ವಿಶ್ವಮ್ ॥ ೩೦ ॥

ವಿಶ್ವೇಶ್ವರಿ ತ್ವಂ ಪರಿಪಾಸಿ ವಿಶ್ವಂ
ವಿಶ್ವಾತ್ಮಿಕಾ ಧಾರಯಸೀತಿ ವಿಶ್ವಮ್ ।
ವಿಶ್ವೇಶವಂದ್ಯಾ ಭವತೀ ಭವಂತಿ
ವಿಶ್ವಾಶ್ರಯಾ ಯೇ ತ್ವಯಿ ಭಕ್ತಿನಮ್ರಾಃ ॥ ೩೧ ॥

ದೇವಿ ಪ್ರಸೀದ ಪರಿಪಾಲಯ ನೋಽರಿ-
ಭೀತೇರ್ನಿತ್ಯಂ ಯಥಾಽಸುರವಧಾದಧುನೈವ ಸದ್ಯಃ ।
ಪಾಪಾನಿ ಸರ್ವಜಗತಾಂ ಪ್ರಶಮಂ ನಯಾಶು
ಉತ್ಪಾತಪಾಕಜನಿತಾಂಶ್ಚ ಮಹೋಪಸರ್ಗಾನ್ ॥ ೩೨ ॥

ಪ್ರಣತಾನಾಂ ಪ್ರಸೀದ ತ್ವಂ ದೇವಿ ವಿಶ್ವಾರ್ತಿಹಾರಿಣಿ ।
ತ್ರೈಲೋಕ್ಯವಾಸಿನಾಮೀಡ್ಯೇ ಲೋಕಾನಾಂ ವರದಾ ಭವ ॥ ೩೩ ॥

ದೇವೀಮಾಹಾತ್ಮ್ಯಮ್, XI, ೩–೩೫

೩೦. ರಾಕ್ಷಸರು, ಉಗ್ರವಿಷವುಳ್ಳ ಸರ್ಪಗಳು, ಶತ್ರುಗಳು ಮತ್ತು ದಸ್ಯು ಬಲಗಳು ಇರುವ ಸ್ಥಳಗಳಲ್ಲಿ, ಕಾಡ್ಗಿಚ್ಚಿನಲ್ಲಿ ಮತ್ತು ಸಮುದ್ರಮಧ್ಯ ದಲ್ಲಿ ನೀನು ನಿಂತು ವಿಶ್ವವನ್ನು ಪರಿಪಾಲಿಸುವೆ.

೩೧. ವಿಶ್ವೇಶ್ವರಿ, ನೀನೇ ವಿಶ್ವವನ್ನು ಸಂರಕ್ಷಿಸುತ್ತಿರುವೆ; ನೀನು ವಿಶ್ವಾತ್ಮಳಾ ಗಿರುವುದರಿಂದ ವಿಶ್ವವನ್ನು ಧರಿಸಿರುವೆ; ಬ್ರಹ್ಮಾದಿಗಳ ವಂದನೆಗೆ ಯೋಗ್ಯಳಾದವಳು ನೀನು; ಯಾರು ಭಕ್ತಿಯಿಂದ ನಿನಗೆ ನಮಿಸು ವರೋ ಅವರು ಜಗತ್ತಿಗೆ ಆಶ್ರಯವನ್ನು ಕೊಡುವವರಾಗುವರು.

೩೨. ಹೇ ದೇವಿ, ಪ್ರಸನ್ನಳಾಗು; ನೀನು ಈಗತಾನೆ ದೈತ್ಯರನ್ನು ಸಂಹರಿಸಿ ನಮ್ಮನ್ನು ರಕ್ಷಿಸಿದಂತೆ ಇನ್ನು ಮುಂದೆ ಕೂಡ ನಮ್ಮನ್ನು ಶತ್ರುಭಯ ದಿಂದ ಅನವರತ ರಕ್ಷಿಸು; ದೇವಿ, ಇಡೀ ಜಗತ್ತಿನ ಪಾಪವನ್ನೂ ಮತ್ತು ಅಧರ್ಮದಿಂದ ಉಂಟಾದ (ದುರ್ಭಿಕ್ಷಾದಿ) ಮಹೋಪದ್ರವಗಳನ್ನೂ ಶೀಘ್ರವಾಗಿ ನಾಶಮಾಡು.

೩೩. ಹೇ ವಿಶ್ವಾರ್ತಿಹಾರಿಣೀದೇವಿ, ನೀನು ಪ್ರಸನ್ನಳಾಗು; ತ್ರಿಭುವನ ವಾಸಿಗಳ ಆರಾಧ್ಯಳೆ, ನಿನ್ನನ್ನು ನಮಿಸುತ್ತಿರುವ ಜನರಿಗೆ ವರವನ್ನು ಅನುಗ್ರಹಿಸುವವಳಾಗು.

# ಗೌರೀದಶಕಮ್

ಲೀಲಾಲಬ್ಧಸ್ಥಾಪಿತಲುಪ್ತಾಖಿಲಲೋಕಾಂ
ಲೋಕಾತೀತೈರ್ಯೋಗಿಭಿರಂತಶ್ಚಿರಮೃಗ್ಯಾಮ್ ।
ಬಾಲಾದಿತ್ಯಶ್ರೇಣಿಸಮಾನದ್ಯುತಿಪುಂಜಾಂ
ಗೌರೀಮಂಬಾಮಂಬುರುಹಾಕ್ಷೀಮಹಮೀಡೇ ॥ ೧ ॥

ಪ್ರತ್ಯಾಹಾರಧ್ಯಾನಸಮಾಧಿಸ್ಥಿತಿಭಾಜಾಂ
ನಿತ್ಯಂ ಚಿತ್ತೇ ನಿರ್ವೃತ್ತಿಕಾಷ್ಠಾಂ ಕಲಯಂತೀಮ್ ।
ಸತ್ಯಜ್ಞಾನಾನಂದಮಯೀಂ ತಾಂ ತನುರೂಪಾಂ
ಗೌರೀಮಂಬಾಮಂಬುರುಹಾಕ್ಷೀಮಹಮೀಡೇ ॥ ೨ ॥

ಚಂದ್ರಾಪೀಡಾನಂದಿತಮಂದಸ್ಮಿತವಕ್ತ್ರಾಂ
ಚಂದ್ರಾಪೀಡಾಲಂಕೃತನೀಲಾಲಕಭಾರಾಮ್ ।
ಇಂದ್ರೋಪೇಂದ್ರಾದ್ಯರ್ಚಿತಪಾದಾಂಬುಜಯುಗ್ಮಾಂ
ಗೌರೀಮಂಬಾಮಂಬುರುಹಾಕ್ಷೀಮಹಮೀಡೇ ॥ ೩ ॥

ಆದಿಕ್ಷಾಂತಾಮಕ್ಷರಮೂರ್ತ್ಯಾ ವಿಲಸಂತೀಂ
ಭೂತೇ ಭೂತೇ ಭೂತಕದಂಬಪ್ರಸವಿತ್ರೀಮ್ ।
ಶಬ್ದಬ್ರಹ್ಮಾನಂದಮಯೀಂ ತಾಂ ತಟಿದಾಭಾಂ
ಗೌರೀಮಂಬಾಮಂಬುರುಹಾಕ್ಷೀಮಹಮೀಡೇ ॥ ೪ ॥

ಮೂಲಾಧಾರಾದುತ್ಥಿತವೀಥ್ಯಾ ವಿಧಿರಂಧ್ರಂ
ಸೌರಂ ಚಾಂದ್ರಂ ವ್ಯಾಪ್ಯ ವಿಹಾರಜ್ವಲಿತಾಂಗೀಮ್ ।
ಯೇಯಂ ಸೂಕ್ಷ್ಮಾತ್ಸೂಕ್ಷ್ಮತನುಸ್ತಾಂ ಸುಖರೂಪಾಂ
ಗೌರೀಮಂಬಾಮಂಬುರುಹಾಕ್ಷೀಮಹಮೀಡೇ ॥ ೫ ॥

# ಗೌರೀದಶಕ

೧. ಯಾವಳು ಸಮಸ್ತಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ಲೀಲಾಜಾಲವಾಗಿ ಮಾಡುತ್ತಾಳೆಯೋ, ಯಾವಳನ್ನು ಲೋಕಾತೀತರಾದ ಯೋಗಿಗಳು ತಮ್ಮ ಹೃದಯದಲ್ಲಿ ಹುಡುಕುತ್ತಿರುವರೋ, ಯಾವಳ ಕಾಂತಿಯು ಬಾಲ ಸೂರ್ಯನ ಕಿರಣಗಳಂತೆ ಹೊಳೆಯುತ್ತದೆಯೋ ಅಂತಹ ಕಮಲಾಕ್ಷಿ ಯಾದ ಗೌರೀಮಾತೆಯನ್ನು ಸ್ತುತಿಸುವೆನು.

೨. ಯಾವಳು ಪ್ರತ್ಯಾಹಾರ–ಧ್ಯಾನ–ಸಮಾಧಿಗಳಲ್ಲಿ ನಿರತರಾಗಿರುವ ಯೋಗಿ ಗಳ ಚಿತ್ತದಲ್ಲಿ ಸದಾ ಪರಮಾನಂದವನ್ನು ಬೀರುತ್ತಾಳೆಯೋ, ಅಂತಹ ಸತ್ಯ–ಜ್ಞಾನ–ಆನಂದ ಸ್ವರೂಪಳಾದ, ಸೂಕ್ಷ್ಮರೂಪಳಾದ, ಕಮಲಾಕ್ಷಿ ಯಾದ ಗೌರೀಮಾತೆಯನ್ನು ಸ್ತುತಿಸುವೆನು.

೩. ಯಾವಳ ಮಂದಹಾಸಯುಕ್ತ ಶ್ರೀಮುಖವು ಶಿವನನ್ನು ಆನಂದಗೊಳಿಸು ತ್ತದೆಯೋ, ಯಾವಳ ನೀಲಕೇಶರಾಶಿ ಚಂದ್ರಾಪೀಡವೆಂಬ ಆಭರಣ ದಿಂದ ಶೋಭಿಸುತ್ತದೆಯೋ, ಯಾವಳ ದಿವ್ಯ ಪಾದಕಮಲಗಳು ಇಂದ್ರ, ಉಪೇಂದ್ರರಿಂದ ಪೂಜಿಸಲ್ಪಡುತ್ತವೆಯೋ, ಅಂತಹ ಕಮಲಾಕ್ಷಿಯಾದ ಗೌರೀಮಾತೆಯನ್ನು ಸ್ತುತಿಸುವೆನು.

೪. ಯಾವಳು 'ಅ' ಕಾರದಿಂದ 'ಕ್ಷ' ಕಾರದ ವರೆಗಿನ ಸಮಸ್ತವರ್ಣ ಮಾಲೆಯ ಮೂರ್ತಸ್ವರೂಪಳಾಗಿ ವಿರಾಜಿಸುತ್ತಿರುವಳೋ, ಯಾವಳು ಪ್ರತಿಯೊಂದು ವಿಧದ ಪ್ರಾಣಿವರ್ಗದಲ್ಲಿಯೂ ಆಯಾ ವರ್ಗದ ಪ್ರಾಣಿ ಸಂತತಿಗೆ ಜನ್ಮದಾತೆಯೋ, ಅಂತಹ ವಿದ್ಯುತ್ಪ್ರಭೆಯಿಂದ ಕೂಡಿದ ಶಬ್ದ ಬ್ರಹ್ಮಾನಂದಮಯಳಾದ ಕಮಲಾಕ್ಷಿಯಾದ ಗೌರೀಮಾತೆಯನ್ನು ಸ್ತುತಿ ಸುವೆನು.

೫. ಯಾವಳು ಮೂಲಾಧಾರದಿಂದ ಬ್ರಹ್ಮರಂಧ್ರ(ಸಹಸ್ರಾರ)ದ ವರೆಗೆ ಪಸರಿ ಸಿರುವ ಸುಷುಮ್ನಾನಾಡೀ ಪಥವನ್ನೂ, ಅದರ ಎಡ–ಬಲಗಳಲ್ಲಿರುವ ಇಡಾ–ಪಿಂಗಳಾ ನಾಡಿಗಳನ್ನೂ ವ್ಯಾಪಿಸಿ ಜಾಜ್ವಲ್ಯಮಾನಳಾಗಿ ವಿಹರಿ ಸುತ್ತಾಳೆಯೋ, ಯಾವಳು ಈ ಬಗೆಯಲ್ಲಿ ಸೂಕ್ಷ್ಮಗಳಲ್ಲಿಯೂ ಕಡು ಸೂಕ್ಷ್ಮವೆನಿಸುವ ಶರೀರವುಳ್ಳವಳೋ ಮತ್ತು ಸುಖಸ್ವರೂಪಳೋ ಅಂತಹ ಕಮಲಾಕ್ಷಿಯಾದ ಗೌರೀಮಾತೆಯನ್ನು ಸ್ತುತಿಸುವೆನು.

ನಿತ್ಯಃ ಶುದ್ಧೋ ನಿಷ್ಕಲ ಏಕೋ ಜಗದೀಶಃ
ಸಾಕ್ಷೀ ಯಸ್ಯಾಃ ಸರ್ಗವಿಧೌ ಸಂಹರಣೇ ಚ ।
ವಿಶ್ವತ್ರಾಣಕ್ರೀಡನಲೋಲಾಂ ಶಿವಪತ್ನೀಂ
ಗೌರೀಮಂಬಾಮಂಬುರುಹಾಕ್ಷೀಮಹಮೀಡೇ ॥ ೬ ॥

ಯಸ್ಯಾಃ ಕುಕ್ಷೌ ಲೀನಮಖಂಡಂ ಜಗದಂಡಂ
ಭೂಯೋ ಭೂಯಃ ಪ್ರಾದುರಭೂದುತ್ಥಿತಮೇವ ।
ಪತ್ಯಾ ಸಾರ್ಧಂ ತಾಂ ರಜತಾದ್ರೌ ವಿಹರಂತೀಂ
ಗೌರೀಮಂಬಾಮಂಬುರುಹಾಕ್ಷೀಮಹಮೀಡೇ ॥ ೭ ॥

ಯಸ್ಯಾಮೋತಂ ಪ್ರೋತಮಶೇಷಂ ಮಣಿಮಾಲಾ
ಸೂತ್ರೇ ಯದ್ವತ್ಕ್ವಾಪಿ ಚರಂ ಚಾಪ್ಯಚರಂ ಚ ।
ತಾಮಧ್ಯಾತ್ಮಜ್ಞಾನಪದವ್ಯಾ ಗಮನೀಯಾಂ
ಗೌರೀಮಂಬಾಮಂಬುರುಹಾಕ್ಷೀಮಹಮೀಡೇ ॥ ೮ ॥

ನಾನಾಕಾರೈಃ ಶಕ್ತಿಕದಂಬೈರ್ಭುವನಾನಿ
ವ್ಯಾಪ್ಯ ಸ್ವೈರಂ ಕ್ರೀಡತಿ ಯೇಯಂ ಸ್ವಯಮೇಕಾ ।
ಕಲ್ಯಾಣೀಂ ತಾಂ ಕಲ್ಪಲತಾಮಾನತಿಭಾಜಾಂ
ಗೌರೀಮಂಬಾಮಂಬುರುಹಾಕ್ಷೀಮಹಮೀಡೇ ॥ ೯ ॥

ಆಶಾಪಾಶಕ್ಲೇಶವಿನಾಶಂ ವಿದಧಾನಾಂ
ಪಾದಾಂಭೋಜಧ್ಯಾನಪರಾಣಾಂ ಪುರುಷಾಣಾಮ್ ।
ಈಶಾಮೀಶಾರ್ಧಾಂಗಹರಾಂ ತಾಮಭಿರಾಮಾಂ
ಗೌರೀಮಂಬಾಮಂಬುರುಹಾಕ್ಷೀಮಹಮೀಡೇ ॥ ೧೦ ॥

# ಗೌರೀದಶಕ

೬. ನಿತ್ಯನೂ ಶುದ್ಧನೂ ನಿರವಯವನೂ ಅದ್ವಿತೀಯನೂ ಆದ ಜಗದೀಶ್ವರನು ಯಾವಳ ಸೃಷ್ಟಿಸ್ಥಿತಿಸಂಹಾರಕಾರ್ಯಗಳ ಸಾಕ್ಷಿಯೋ, ಯಾವಳು ವಿಶ್ವರಕ್ಷಣೆಯ ಕ್ರೀಡೆಯಲ್ಲಿ ರಮಿಸುತ್ತಾಳೆಯೋ, ಅಂತಹ ಶಿವಪತ್ನಿ ಯಾದ ಕಮಲಾಕ್ಷಿಯಾದ ಗೌರೀಮಾತೆಯನ್ನು ಸ್ತುತಿಸುವೆನು.

೭. ಯಾವಳ ಗರ್ಭದಲ್ಲಿ ಈ ಅಖಂಡ ಬ್ರಹ್ಮಾಂಡವು ಅಡಕವಾಗಿದ್ದು ಪುನಃ ಪುನಃ ಉದ್ಭವವಾಗುತ್ತದೆಯೋ, ಯಾವಳು ತನ್ನ ಪತಿಯಾದ ಶಿವ ನೊಡನೆ ರಜತಗಿರಿಯಲ್ಲಿ ವಿಹರಿಸುತ್ತಾಳೆಯೋ, ಅಂತಹ ಕಮಲಾಕ್ಷಿ ಯಾದ ಗೌರೀಮಾತೆಯನ್ನು ಸ್ತುತಿಸುವೆನು.

೮. ಯಾವಳಲ್ಲಿ ಸಕಲಚರಾಚರವಸ್ತುಗಳು ದಾರದಲ್ಲಿ ಪೋಣಿಸಿದ ಮಣಿ ಗಳಂತೆ ಓತಪ್ರೋತವಾಗಿ ನೆಲಸಿವೆಯೋ, ಯಾವಳನ್ನು ಅಧ್ಯಾತ್ಮಿಕ ಜ್ಞಾನಪಥದ ಮೂಲಕ ಹೊಂದಬಹುದೋ, ಅಂತಹ ಕಮಲಾಕ್ಷಿ ಯಾದ ಗೌರೀಮಾತೆಯನ್ನು ಸ್ತುತಿಸುವೆನು.

೯. ಯಾವಳು ಬಹುವಿಧರೂಪಗಳಿಂದ ಮತ್ತು ನಾನಾಬಗೆಯ ಶಕ್ತಿ ಸಮೂಹಗಳಿಂದ ಚತುರ್ದಶಭುವನಗಳನ್ನು ವ್ಯಾಪಿಸಿ ಒಬ್ಬಳೇ ಸ್ವೇಚ್ಛೆ ಯಿಂದ ನಿರಾತಂಕವಾಗಿ ಕ್ರೀಡಿಸುತ್ತಾಳೆಯೋ ಅಂತಹ ಕಲ್ಯಾಣ ಸ್ವರೂಪಳೂ ಶರಣಾಗತರಿಗೆ ಕಲ್ಪಲತಾಸದೃಶಳೂ, ಕಮಲಾಕ್ಷಿಯೂ ಆದ ಗೌರೀಮಾತೆಯನ್ನು ಸ್ತುತಿಸುವೆನು.

೧೦. ಯಾವಳು ತನ್ನ ಚರಣಕಮಲಗಳಲ್ಲಿ ಧ್ಯಾನಸಕ್ತರಾದ ಮನುಷ್ಯರ ಆಶಾ ಪಾಶಗಳನ್ನು ಕಿತ್ತೊಗೆದು ಅವರ ಕಷ್ಟ-ಸಂಕಟಗಳನ್ನು ದೂರಮಾಡು ವಳೋ, ಯಾವಳು ಈಶ್ವರನ ಅರ್ಧಾಂಗವನ್ನಾಕ್ರಮಿಸಿ ಜಗದೊಡತಿ ಯಾಗಿ ಲೋಕದ ಕಣ್ಣುಗಳಿಗೆ ಹಬ್ಬವಾಗಿದ್ದಾಳೋ, ಅಂತಹ ಕಮ ಲಾಕ್ಷಿಯಾದ ಗೌರೀಮಾತೆಯನ್ನು ಸ್ತುತಿಸುವೆನು.

# ತ್ರಿಪುರಸುಂದರ್ಯಷ್ಟಕಮ್

ಕದಂಬವನಚಾರಿಣೀಂ ಮುನಿಕದಂಬಕಾದಂಬಿನೀಂ
ನಿತಂಬಜಿತಭೂಧರಾಂ ಸುರನಿತಂಬಿನೀಸೇವಿತಾಮ್ ।
ನವಾಂಬುರುಹಲೋಚನಾಮಭಿನವಾಂಬುದಶ್ಯಾಮಲಾಂ
ತ್ರಿಲೋಚನಕುಟುಂಬಿನೀಂ ತ್ರಿಪುರಸುಂದರೀಮಾಶ್ರಯೇ ॥ ೧ ॥

ಕದಂಬವನವಾಸಿನೀಂ ಕನಕವಲ್ಲರೀಧಾರಿಣೀಂ
ಮಹಾರ್ಹಮಣಿಹಾರಿಣೀಂ ಮುಖಸಮುಲ್ಲಸದ್ವಾರುಣೀಮ್ ।
ದಯಾವಿಭವಕಾರಿಣೀಂ ವಿಶದಲೋಚನೀಂ ತಾರಿಣೀಂ
ತ್ರಿಲೋಚನಕುಟುಂಬಿನೀಂ ತ್ರಿಪುರಸುಂದರೀಮಾಶ್ರಯೇ ॥ ೨ ॥

ಕದಂಬವನಶಾಲಯಾ ಕುಚಭರೋಲ್ಲಸನ್ಮಾಲಯಾ
ಕುಚೋಪಮಿತಶೈಲಯಾ ಗುರುಕೃಪಾಲಸದ್ವೇಲಯಾ ।
ಮದಾರುಣಕಪೋಲಯಾ ಮಧುರಗೀತವಾಚಾಲಯಾ
ಕಯಾಪಿ ಘನನೀಲಯಾ ಕವಚಿತಾ ವಯಂ ಲೀಲಯಾ ॥ ೩ ॥

ಕದಂಬವನಮಧ್ಯಗಾಂ ಕನಕಮಂಡಲೋಪಸ್ಥಿತಾಂ
ಷಡಂಬುರುಹವಾಸಿನೀಂ ಸತತಸಿದ್ಧಸೌದಾಮಿನೀಮ್ ।
ವಿಡಂಬಿತಜಪಾರುಚಿಂ ವಿಕಚಚಂದ್ರಚೂಡಾಮಣಿಂ
ತ್ರಿಲೋಚನಕುಟುಂಬಿನೀಂ ತ್ರಿಪುರಸುಂದರೀಮಾಶ್ರಯೇ ॥ ೪ ॥

# ತ್ರಿಪುರಸುಂದರೀ–ಅಷ್ಟಕ

೧. ಕದಂಬವನದಲ್ಲಿ ವಿಹರಿಸುವವಳೂ, ಋಷಿಸಮೂಹದ ಹೃದಯಾಕಾಶದಲ್ಲಿ ಆನಂದವನ್ನು ವರ್ಷಿಸುವ ಮೇಘದಂತಿರುವವಳೂ, ಮನೋಹರವಾದ ಆಕಾರವುಳ್ಳವಳೂ, ಸುರಸುಂದರಿಯಿಂದ ಸೇವಿಸಲ್ಪಡುವವಳೂ, ಹೊಸದಾಗಿ ಅರಳಿದ ಕಮಲದಂತೆ ಕಣ್ಣುಗಳುಳ್ಳವಳೂ, ಹೊಸ ಮೇಘದಂತೆ ಶ್ಯಾಮಲವರ್ಣದ ದೇಹಕಾಂತಿಯುಳ್ಳವಳೂ, ಮುಕ್ಕಣ್ಣನಾದ ಪರಮೇಶ್ವರನ ಪ್ರಿಯಪತ್ನಿಯಾಗಿರುವವಳೂ ಆದ ತ್ರಿಪುರಸುಂದರಿಯನ್ನು ನಾನು ಆಶ್ರಯಿಸುತ್ತೇನೆ.

೨. ಕದಂಬವನದಲ್ಲಿ ವಾಸಿಸುವವಳೂ, ಬಂಗಾರದ ವೀಣೆಯನ್ನು ಹಿಡಿದಿರುವವಳೂ, ಅನರ್ಘ್ಯವಾದ ರತ್ನಹಾರವನ್ನು ಧರಿಸಿರುವವಳೂ, ವಾರುಣೀಪಾನದಿಂದ ಕಾಂತಿಯುಕ್ತವಾಗಿರುವ ಮುಖವುಳ್ಳವಳೂ, ತನ್ನ ದಯೆಯಿಂದ ಸಮಸ್ತ ವೈಭವಗಳನ್ನು ನೀಡುವವಳೂ, ವಿಶಾಲವಾದ ನೇತ್ರಗಳುಳ್ಳವಳೂ, ಭಕ್ತರನ್ನು ಉದ್ಧರಿಸುವವಳೂ, ಮುಕ್ಕಣ್ಣನಾದ ಪರಮೇಶ್ವರನ ಪ್ರಿಯಪತ್ನಿಯಾಗಿರುವವಳೂ ಆದ ತ್ರಿಪುರಸುಂದರಿಯನ್ನು ನಾನು ಆಶ್ರಯಿಸುತ್ತೇನೆ.

೩. ಕದಂಬವನವೇ ತನ್ನ ಮನೆಯಾಗಿರುವವಳೂ, ಉಬ್ಬಿದ ತನ್ನ ಎದೆಯಲ್ಲಿ ಹಾರವನ್ನು ಧರಿಸಿರುವವಳೂ, ಚೆಲುವಾದ ಸ್ತನಗಳುಳ್ಳವಳೂ, ಅತ್ಯಂತ ಕೃಪಾಮಯಿಯಾದವಳೂ, ಮದ್ಯದಿಂದ ಕೆಂಪಾದ ಕೆನ್ನೆಗಳುಳ್ಳವಳೂ, ಮಧುರವಾದ ಸಂಗೀತವನ್ನು ಸದಾ ಹಾಡುತ್ತಿರುವವಳೂ, ನೀಲಮೇಘದಂತೆ ದೇಹಕಾಂತಿಯುಳ್ಳವಳೂ ಆದ ದೇವಿಯು ವಜ್ರಕವಚದಂತೆ ಲೀಲಾಜಾಲವಾಗಿ ನಮ್ಮನ್ನು ರಕ್ಷಿಸಲಿ.

೪. ಕದಂಬವನ ಮಧ್ಯದಲ್ಲಿ ಸಂಚರಿಸುವವಳೂ, ಕನಕಮಂಡಲದ ಮೇಲೆ ಕುಳಿತಿರುವವಳೂ, ಷಟ್ಚಕ್ರಗಳಲ್ಲಿ ವಾಸಿಸುವವಳೂ, ಸಿದ್ಧಪುರುಷರ ಹೃದಯದಲ್ಲಿ ಸದಾ ಮಿಂಚಿನಂತೆ ಹೊಳೆಯುತ್ತಿರುವವಳೂ, ಕೆಂಪು ದಾಸವಾಳದ ಕಾಂತಿಯನ್ನು ತಿರಸ್ಕರಿಸುವಂತಹ ಕಾಂತಿಯುಳ್ಳವಳೂ, ಪೂರ್ಣಚಂದ್ರನನ್ನು ತಲೆಯ ಆಭರಣವಾಗಿ ಧರಿಸಿರುವವಳೂ, ಮುಕ್ಕಣ್ಣನಾದ ಪರಮೇಶ್ವರನ ಪ್ರಿಯಪತ್ನಿಯಾಗಿರುವವಳೂ, ಆದ ತ್ರಿಪುರಸುಂದರಿಯನ್ನು ನಾನು ಆಶ್ರಯಿಸುತ್ತೇನೆ.

ಕುಚಾಂಚಿತವಿಪಂಚಿಕಾಂ ಕುಟಿಲಕುಂತಲಾಲಂಕೃತಾಂ
ಕುಶೇಶಯನಿವಾಸಿನೀಂ ಕುಟಿಲಚಿತ್ತವಿದ್ವೇಷಿಣೀಂ ।
ಮದಾರುಣವಿಲೋಚನಾಂ ಮನಸಿಜಾರಿಸಂಮೋಹಿನೀಂ
ಮತಂಗಮುನಿಕನ್ಯಕಾಂ ಮಧುರಭಾಷಿಣೀಮಾಶ್ರಯೇ ॥ ೫ ॥

ಸ್ಮರೇತ್ಪ್ರಥಮಪುಷ್ಪಿಣೀಂ ರುಧಿರಬಿಂದುನೀಲಾಂಬರಾಂ
ಗೃಹೀತ ಮಧುಪಾತ್ರಿಕಾಂ ಮಧುವಿಘೂರ್ಣನೇತ್ರಾಂಚಲಾಮ್ ।
ಘನಸ್ತನಭರೋನ್ನತಾಂ ಗಲಿತಚೂಲಿಕಾಂ ಶ್ಯಾಮಲಾಂ
ತ್ರಿಲೋಚನಕುಟುಂಬಿನೀಂ ತ್ರಿಪುರಸುಂದರೀಮಾಶ್ರಯೇ ॥ ೬ ॥

ಸಕುಂಕುಮವಿಲೇಪನಾಮಲಕಚುಂಬಿಕಸ್ತೂರಿಕಾಂ
ಸಮಂದಹಸಿತೇಕ್ಷಣಾಂ ಸಶರಚಾಪಪಾಶಾಂಕುಶಾಮ್ ।
ಅಶೇಷಜನಮೋಹಿನೀಮರುಣಮಾಲ್ಯಭೂಷಾಂಬರಾಂ
ಜಪಾಕುಸುಮಭಾಸುರಾಂ ಜಪವಿಧೌ ಸ್ಮರಾಮ್ಯಂಬಿಕಾಮ್ ॥ ೭ ॥

ಪುರಂದರಪುರಂಧ್ರಿಕಾಚಿಕುರಬಂಧಸೈರಂಧ್ರಿಕಾಂ
ಪಿತಾಮಹಪತಿವ್ರತಾಂ ಪಟುಪಟೀರಚರ್ಚಾರತಾಮ್ ।
ಮುಕುಂದರಮಣೀಂ ಮಣೀಲಸದಲಂಕ್ರಿಯಾಕಾರಿಣೀಮ್
ಭಜಾಮಿ ಭುವನಾಂಬಿಕಾಂ ಸುರವಧೂಟಿಕಾಚೇಟಿಕಾಮ್ ॥ ೮ ॥

೫. ಕುಚಸ್ಥಳದಲ್ಲಿ ವೀಣೆಯನ್ನು ಇಟ್ಟುಕೊಂಡಿರುವವಳೂ, ಗುಂಗುರು ಗುಂಗುರಾದ ಮುಂಗುರುಳಿನಿಂದ ಅಲಂಕೃತಳಾಗಿರುವವಳೂ, ಕಮಲ ಮಧ್ಯದಲ್ಲಿ ವಾಸಿಸುವವಳೂ, ಕುಟಿಲಚಿತ್ತರನ್ನು ದ್ವೇಷದಿಂದ ನಾಶ ಮಾಡುವವಳೂ, ಮಧುಪಾನದಿಂದ ಕೆಂಪಾದ ಕಣ್ಣುಗಳುಳ್ಳವಳೂ, ಮನ್ಮಥಧ್ವಂಸಿಯಾದ ಪರಶಿವನ ಮನವನ್ನು ಮೋಹಗೊಳಿಸುವವಳೂ, ಮತಂಗಋಷಿಯ ಪ್ರಿಯಪುತ್ರಿಯೂ ಮಧುರವಾಗಿ ಮಾತಾಡುವವಳೂ ಆದ ತ್ರಿಪುರಸುಂದರಿಯನ್ನು ನಾನು ಆಶ್ರಯಿಸುತ್ತೇನೆ.

೬. ಮೊದಲ ಯೌವನವನ್ನು ಪಡೆದವಳೂ, ರಕ್ತಬಿಂದುವಿನಿಂದ ಕೂಡಿದ ನೀಲವಸನವುಳ್ಳವಳೂ, ಮಧುಪಾತ್ರೆಯನ್ನು ಹಿಡಿದಿರುವವಳೂ, ಮಧು ಸೇವನೆಯಿಂದ ಹೊರಳುತ್ತಿರುವ ಕಣ್ಣುಗಳುಳ್ಳವಳೂ, ತುಂಬಿದ ಎದೆ ಯಿಂದ ಸುಂದರಾಕಾರಳಾದವಳೂ, ಬಿಚ್ಚಿ ಕೆದರಿದ ಜಡೆಯುಳ್ಳವಳೂ, ಶ್ಯಾಮಲವರ್ಣಳೂ, ಮುಕ್ಕಣ್ಣನಾದ ಪರಮೇಶ್ವರನ ಪ್ರಿಯಪತ್ನಿಯಾ ಗಿರುವವಳೂ, ಆದ ತ್ರಿಪುರಸುಂದರಿಯನ್ನು ನಾನು ಆಶ್ರಯಿಸುತ್ತೇನೆ.

೭. ಕುಂಕುಮವನ್ನು ಲೇಪಿಸಿಕೊಂಡಿರುವವಳೂ, ಮುಂಗುರುಳುಗಳನ್ನು ಚುಂಬಿಸುತ್ತಿರುವ (ಸ್ಪರ್ಶಿಸುತ್ತಿರುವ) ಮುಖದಲ್ಲಿ ತಿಲಕವಾಗಿ ಧರಿಸಿದ ಕಸ್ತೂರಿಯುಳ್ಳವಳೂ, ಮುಗುಳ್ನಗೆ ತುಂಬಿದ ಕಣ್ಣುಗಳುಳ್ಳವಳೂ, ಬಾಣ, ಬಿಲ್ಲು, ಪಾಶ, ಅಂಕುಶಗಳನ್ನು ಧರಿಸಿರುವವಳೂ, ಸಮಸ್ತರನ್ನೂ ಮೋಹಗೊಳಿಸುವವಳೂ, ಕೆಂಪುಬಣ್ಣದ ಪುಷ್ಪಮಾಲಿಕೆ, ವಸ್ತ್ರಾಭರಣ ಗಳನ್ನು ಧರಿಸಿರುವವಳೂ, ಜಪಾಕುಸುಮದಂತೆ ಪ್ರಕಾಶವಾಗಿರು ವವಳೂ ಆದ ತ್ರಿಪುರಾಂಬಿಕೆಯನ್ನು ಜಪಕಾಲದಲ್ಲಿ ನಾನು ಧ್ಯಾನ ಮಾಡುತ್ತೇನೆ.

೮. ದೇವೇಂದ್ರನ ಪತ್ನಿಯಾಗಿರುವವಳೂ, ಜಡೆಹೆಣೆದುಕೊಳ್ಳುವುದರಲ್ಲಿ ಕುಶಲಳಾಗಿರುವವಳೂ, ಬ್ರಹ್ಮನ ಧರ್ಮಪತ್ನಿಯಾಗಿರುವವಳೂ, ಶ್ರೀ ಗಂಧವನ್ನು ಲೇಪಿಸಿಕೊಳ್ಳುವುದರಲ್ಲಿ ನಿಷ್ಣಾತಳಾಗಿರುವವಳೂ, ವಿಷ್ಣು ಪತ್ನಿಯಾಗಿರುವವಳೂ, ರತ್ನಖಚಿತವಾದ ಆಭರಣಗಳಿಂದ ಅಲಂಕೃತ ಳಾಗಿರುವವಳೂ, ಸುರವನಿತೆಯರಿಂದ ಸೇವೆಯನ್ನು ಕೈಕೊಳ್ಳುವವಳೂ ಆದ ಜಗದಂಬಿಕೆಯನ್ನು ನಾನು ಭಜಿಸುತ್ತೇನೆ.

# ದೇವ್ಯಪರಾಧಕ್ಷಮಾಪಣಸ್ತೋತ್ರಮ್

ನ ಮಂತ್ರಂ ನೋ ಯಂತ್ರಂ ತದಪಿ ಚ ನ ಜಾನೇ ಸ್ತುತಿಮಹೋ
ನ ಚಾಹ್ವಾನಂ ಧ್ಯಾನಂ ತದಪಿ ಚ ನ ಜಾನೇ ಸ್ತುತಿಕಥಾಃ ।
ನ ಜಾನೇ ಮುದ್ರಾಸ್ತೇ ತದಪಿ ಚ ನ ಜಾನೇ ವಿಲಪನಂ
ಪರಂ ಜಾನೇ ಮಾತಸ್ತ್ವದನುಸರಣಂ ಕ್ಲೇಶಹರಣಮ್ ॥ ೧ ॥

ವಿಧೇರಜ್ಞಾನೇನ ದ್ರವಿಣವಿರಹೇಣಾಲಸತಯಾ
ವಿಧೇಯಾಶಕ್ಯತ್ವಾತ್ತವ ಚರಣಯೋರ್ಯಾ ಚ್ಯುತಿರಭೂತ್ ।
ತದೇತತ್ ಕ್ಷಂತವ್ಯಂ ಜನನಿ ಸಕಲೋದ್ಧಾರಿಣಿ ಶಿವೇ
ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ ॥ ೨ ॥

ಪೃಥಿವ್ಯಾಂ ಪುತ್ರಾಸ್ತೇ ಜನನಿ ಬಹವಃ ಸಂತಿ ಕೃತಿನಃ
ಪರಂ ತೇಷಾಂ ಮಧ್ಯೇ ವಿರಲತರಲೋಽಹಂ ತವ ಸುತಃ ।
ಮದೀಯೋಽಯಂ ತ್ಯಾಗಃ ಸಮುಚಿತಮಿದಂ ನೋ ತವ ಶಿವೇ
ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ ॥ ೩ ॥

ಜಗನ್ಮಾತರ್ಮಾತಸ್ತವ ಚರಣಸೇವಾ ನ ರಚಿತಾ
ನ ವಾ ದತ್ತಂ ದೇವಿ ದ್ರವಿಣಮಪಿ ಭೂಯಸ್ತವ ಮಯಾ ।
ತಥಾಪಿ ತ್ವಂ ಸ್ನೇಹಂ ಮಯಿ ನಿರುಪಮಂ ಯತ್ಪ್ರಕುರುಷೇ
ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ ॥ ೪ ॥

# ದೇವ್ಯಪರಾಧಕ್ಷಮಾಪಣಸ್ತೋತ್ರ

೧. ಅಯ್ಯೋ! ನನಗೆ ನಿನ್ನ ಮಂತ್ರವಾಗಲೀ ಯಂತ್ರವಾಗಲೀ ಸ್ತುತಿಯಾಗಲೀ ಗೊತ್ತಿಲ್ಲ; ನಿನ್ನ ಆಹ್ವಾನವನ್ನಾಗಲೀ ಧ್ಯಾನವನ್ನಾಗಲೀ ಸ್ತುತಿಕಥೆಯನ್ನಾಗಲೀ ನಾನರಿಯೆ; ನಿನ್ನ ಮುದ್ರೆಯೂ ನನಗೆ ತಿಳಿದಿಲ್ಲ; ನಿನ್ನ ಮುಂದೆ ಮೊರೆಯಿಡುವುದನ್ನೂ ನಾನರಿಯೆ; ಆದರೆ ಅಮ್ಮಾ, ನನಗೆ ಇಷ್ಟು ಮಾತ್ರ ಗೊತ್ತು—ನಿನ್ನನ್ನು ಅನುಸರಿಸಿದರೆ ಸಂಕಟವೆಲ್ಲವೂ ನಾಶವಾಗುತ್ತದೆ.

೨. ಹೇ ಜನನಿ, ವಿಧಿವಿಲಾಸದಿಂದಲೂ, ನನ್ನ ದಾರಿದ್ರ್ಯದಿಂದಲೂ, ಆಲಸ್ಯದಿಂದಲೂ ಮತ್ತು ನಿನಗೆ ವಿಧೇಯನಾಗಿರಲು ಅಶಕ್ಯವಾದುದರಿಂದಲೂ ನಿನ್ನ ಅಡಿದಾವರೆಗಳಿಂದ ಚ್ಯುತನಾದೆನು; ಹೇ ಸಕಲೋದ್ಧಾರಿಣಿ, ಹೇ ಶಿವೇ, ನೀನು ನನ್ನ ಸಕಲ ಲೋಪದೋಷಗಳನ್ನೂ ಕ್ಷಮಿಸು; ಲೋಕದಲ್ಲಿ ಕುಪುತ್ರ ಹುಟ್ಟಿದರೂ ಹುಟ್ಟಬಹುದು; ಆದರೆ ಕುಮಾತೆ ಎಲ್ಲಿಯೂ ಕಾಣಬರುವದಿಲ್ಲ.

೩. ಅಮ್ಮಾ, ಈ ಜಗತ್ತಿನಲ್ಲಿ ನಿನಗೆ ಪುಣ್ಯಪುರುಷರಾದ ಎಷ್ಟೋ ಮಕ್ಕಳಿದ್ದಾರೆ; ಅವರ ಮಧ್ಯದಲ್ಲಿ ಈ ನಿನ್ನ ಮಗನಾದ ನಾನು ಕೇವಲ ಅತ್ಯಲ್ಪನಾದವನು. ಹೇ ಮಂಗಳದಾಯಕಿ, ನಾನು ನಿನ್ನನ್ನು ಬಿಟ್ಟಿರುವುದು ಉಚಿತವಾಗಿರಬಹುದು, ಆದರೆ ನೀನು ನನ್ನನ್ನು ಬಿಟ್ಟಿರುವುದು ಉಚಿತವಲ್ಲ; ಏಕೆಂದರೆ ಕುಪುತ್ರ ಹುಟ್ಟಿದರೂ ಹುಟ್ಟಬಹುದು, ಕುಮಾತೆ ಎಲ್ಲಿಯೂ ಕಾಣಬರುವದಿಲ್ಲ.

೪. ಹೇ ಜಗನ್ಮಾತೆ, ಅಮ್ಮಾ, ಎಂದೂ ನಿನ್ನ ಚರಣಸೇವೆಯನ್ನು ಮಾಡಿದವನಲ್ಲ; ಅಥವಾ ನಿನ್ನ ಹೆಸರಿನಲ್ಲಿ ಬೇಕಾದಷ್ಟು ಐಶ್ವರ್ಯವನ್ನು ದಾನ ಮಾಡಿದವನೂ ಅಲ್ಲ. ಆದರೂ ನಿನಗೆ ನನ್ನಲ್ಲಿರುವ ಪ್ರೇಮ ಅನುಪಮವಾದುದು; ಏಕೆಂದರೆ ಕುಪುತ್ರ ಹುಟ್ಟಿದರೂ ಹುಟ್ಟಬಹುದು; ಕುಮಾತೆ ಎಲ್ಲಿಯೂ ಕಾಣಬರುವದಿಲ್ಲ.

ಪರಿತ್ಯಕ್ತ್ವಾ ದೇವಾನ್ ವಿವಿಧವಿಧಿಸೇವಾಕುಲತಯಾ
ಮಯಾ ಪಂಚಾಶೀತೇರಧಿಕಮುಪನೀತೇ ತು ವಯಸಿ ।
ಇದಾನೀಂ ಚೇನ್ಮಾತಸ್ತವ ಯದಿ ಕೃಪಾ ನಾಪಿ ಭವಿತಾ
ನಿರಾಲಂಬೋ ಲಂಬೋದರಜನನಿ ಕಂ ಯಾಮಿ ಶರಣಮ್ ॥ ೫ ॥

ಶ್ವಪಾಕೋ ಜಲ್ಪಾಕೋ ಭವತಿ ಮಧುಪಾಕೋಪಮಗಿರಾ
ನಿರಾತಂಕೋ ರಂಕೋ ವಿಹರತಿ ಚಿರಂ ಕೋಟಿಕನಕೈಃ ।
ತವಾಪರ್ಣೇ ಕರ್ಣೇ ವಿಶತಿ ಮನುವರ್ಣೇ ಫಲಮಿದಂ
ಜನಃ ಕೋ ಜಾನೀತೇ ಜನನಿ ಜಪನೀಯಂ ಜಪವಿಧೌ ॥ ೬ ॥

ಚಿತಾಭಸ್ಮಾಲೇಪೋ ಗರಲಮಶನಂ ದಿಕ್ಪಟಧರೋ
ಜಟಾಧಾರೀ ಕಂಠೇ ಭುಜಗಪತಿಹಾರೀ ಪಶುಪತಿಃ ।
ಕಪಾಲೀ ಭೂತೇಶೋ ಭಜತಿ ಜಗದೀಶೈಕಪದವೀಂ
ಭವಾನಿ ತ್ವತ್ಪಾಣಿಗ್ರಹಣಪರಿಪಾಟೀಫಲಮಿದಮ್ ॥ ೭ ॥

ನ ಮೋಕ್ಷಸ್ಯಾಕಾಂಕ್ಷಾ ನ ಚ ವಿಭವವಾಂಛಾಪಿ ಚ ನ ಮೇ
ನ ವಿಜ್ಞಾನಾಪೇಕ್ಷಾ ಶಶಿಮುಖಿ ಸುಖೇಚ್ಛಾಪಿ ನ ಪುನಃ ।
ಅತಸ್ತ್ವಾಂ ಸಂಯಾಚೇ ಜನನಿ ಜನನಂ ಯಾತು ಮಮ ವೈ
ಮೃಡಾನೀ ರುದ್ರಾಣೀ ಶಿವಶಿವ ಭವಾನೀತಿ ಜಪತಃ ॥ ೮ ॥

ನಾರಾಧಿತಾಸಿ ವಿಧಿನಾ ವಿವಿಧೋಪಚಾರೈಃ
ಕಿಂ ರುಕ್ಷಚಿಂತನಪರೈರ್ನ ಕೃತಂ ವಚೋಭಿಃ ।
ಶ್ಯಾಮೇ ತ್ವಮೇವ ಯದಿ ಕಿಂಚನ ಮಯ್ಯನಾಥೇ
ಧತ್ಸೇ ಕೃಪಾಮುಚಿತಮಂಬ ಪರಂ ತವೈವ ॥ ೯ ॥

೫. ಹೇ ಗಣೇಶಮಾತೆ, ಪೂಜೆಯ ವಿವಿಧವಿಧಿಗಳನ್ನು ನಾನು ಅರಿಯೆನಾದ್ದರಿಂದ ಇತರ ದೇವತೆಗಳ ಪೂಜೆಯನ್ನು ನಾನು ಪರಿತ್ಯಜಿಸಿದ್ದೇನೆ; ನನಗೀಗಲೇ ಎಂಬತ್ತೈದಕ್ಕಿಂತಲೂ ಹೆಚ್ಚು ವಯಸ್ಸಾಗಿದೆ; ಅಮ್ಮಾ, ಈಗಲಾದರೂ ನನ್ನಲ್ಲಿ ನೀನು ಕೃಪೆದೋರದಿದ್ದರೆ ನಿರಾಶ್ರಿತನಾದ ನಾನು ಯಾರ ಶರಣುವನ್ನು ಹೊಂದಲಿ?

೬. ಚಂಡಾಲನು ಮಧುವಾಕಸದೃಶವಾದ ಮಾತುಗಳನ್ನಾಡುವನು; ದಟ್ಟ ದರಿದ್ರನಾದವನು ಕೋಟಿಸುವರ್ಣಾಧಿಕಾರಿಯಾಗಿ ಯಾವ ಆತಂಕವೂ ಇಲ್ಲದೆ ಬಹುಕಾಲ ವಿಹರಿಸುವನು—ಹೇ ಅಪರ್ಣೆ, ಇದು ನಿನ್ನ ಮಂತ್ರ ವರ್ಣ ಕಿವಿಯಲ್ಲಿ ಬಿದ್ದ ಫಲ; ಹೀಗಿರುವಾಗ ಹೇ ತಾಯಿ, ವಿಧಿ ಪ್ರಕಾರ ಜಪಿಸುವವನಿಗೆ ಎಂತಹ ಫಲದೊರೆಯಬಹುದೆಂದು ಯಾರು ಹೇಳಬಲ್ಲರು?

೭. ವಿಷವನ್ನು ಕುಡಿದು, ಚಿತೆಯ ಭಸ್ಮವನ್ನು ಮೈಗೆಲ್ಲಾ ಬಳಿದುಕೊಂಡು ದಿಕ್ಕುಗಳನ್ನೇ ಬಟ್ಟೆಯಾಗಿ ಉಟ್ಟು, ಜಟೆಯನ್ನು ಧರಿಸಿ, ಕಂಠದಲ್ಲಿ ಹಾವನ್ನು ಹಾರವಾಗಿ ಹಾಕಿಕೊಂಡು, ತಲೆಯೋಡನ್ನು ಭಿಕ್ಷಾಪಾತ್ರೆಯಾಗಿ ಕೈಯ್ಯಲ್ಲಿ ಹಿಡಿದು ಭೂತಗಳ ಮಧ್ಯೆ ವಾಸಿಸುವ ಪಶುಪತಿಯಾದ ಶಿವನು ಅದ್ವಿತೀಯವಾದ ಜಗದೀಶ್ವರನ ಪದವಿಯನ್ನು ಹೊಂದಿದನು—ಭವಾನಿ, ಇದೂ ನಿನ್ನ ಪಾಣಿಗ್ರಹಣದ ಫಲವೇ!

೮. ಹೇ ಚಂದ್ರಮುಖಿ, ನನಗೆ ಮೋಕ್ಷದ ಆಶೆಯಿಲ್ಲ; ಧನಸಂಪತ್ತುಗಳ ಇಚ್ಛೆಯಿಲ್ಲ; ಜ್ಞಾನದ ಅಪೇಕ್ಷೆಯಿಲ್ಲ; ಸುಖದ ಇಚ್ಛೆಯೂ ಇಲ್ಲ; ಹೇ ತಾಯಿ, ನಿನ್ನ ಮುಂದೆ ಇಷ್ಟು ಮಾತ್ರ ಯಾಚಿಸುತ್ತೇನೆ—ಮೃಡಾಣಿ, ರುದ್ರಾಣಿ, ಶಿವ, ಶಿವ, ಭವಾನಿ ಎಂದು ಜಪಿಸುತ್ತಾ ನನ್ನ ಜನ್ಮವೆಲ್ಲವೂ ಕಳೆದುಹೋಗಲಿ!

೯. ವಿಧಿಪೂರ್ವಕವಾದ ವಿವಿಧೋಪಚಾರಗಳಿಂದ ನಾನು ಎಂದೂ ನಿನ್ನನ್ನು ಪೂಜಿಸಿಲ್ಲ; ಶುಷ್ಕಚಿಂತಾಪರವಾದ ಹರಟೆಗಳಿಂದ ಕಾಲವನ್ನು ಕಳೆದು ನಾನು ಯಾವ ತಪ್ಪನ್ನು ತಾನೇ ಮಾಡಿಲ್ಲ! ಆದರೂ ಹೇ ಶ್ಯಾಮೆ, ಅನಾಥನಾದ ನನ್ನಲ್ಲಿ ಸ್ವಲ್ಪ ಕೃಪೆಯನ್ನು ತೋರುವೆಯಾದರೆ ಅದು ನಿನಗೆ ಉಚಿತವೇ ಆಗಿರುವುದು.

ಆಪತ್ಸು ಮಗ್ನಃ ಸ್ಮರಣಂ ತ್ವದೀಯಂ
ಕರೋಮಿ ದುರ್ಗೇ ಕರುಣಾರ್ಣವೇಶಿ ।
ನೈತಚ್ಛಠತ್ವಂ ಮಮ ಭಾವಯೇಥಾಃ
ಕ್ಷುಧಾತೃಷಾರ್ತಾ ಜನನೀಂ ಸ್ಮರಂತಿ ॥ ೧೦ ॥

ಜಗದಂಬ ವಿಚಿತ್ರಮತ್ರ ಕಿಂ
ಪರಿಪೂರ್ಣಾ ಕರುಣಾಽಸ್ತಿ ಚೇನ್ಮಯಿ ।
ಅಪರಾಧಪರಂಪರಾವೃತಂ ನಹಿ
ಮಾತಾ ಸಮುಪೇಕ್ಷತೇ ಸುತಮ್ ॥ ೧೧ ॥

ಮತ್ಸಮಃ ಪಾತಕೀ ನಾಸ್ತಿ
ಪಾಪಘ್ನೀ ತ್ವತ್ಸಮಾ ನಹಿ ।
ಏವಂ ಜ್ಞಾತ್ವಾ ಮಹಾದೇವಿ
ಯಥಾ ಯೋಗ್ಯಂ ತಥಾ ಕುರು ॥ ೧೨ ॥

೧೦. ಹೇ ದುರ್ಗಾದೇವಿ, ಕರುಣಾರ್ಣವೇಶ್ವರಿ, ಆಪತ್ತಿನಲ್ಲಿ ಮುಳುಗಿ ನಿನ್ನನ್ನು ಸ್ಮರಿಸುತ್ತಿದ್ದೇನೆ; ಇದನ್ನು ಮೋಸವೆಂದು ತಿಳಿಯಬೇಡ; (ಏಕೆಂದರೆ) ಹಸಿವೆಯಾದಾಗ, ಬಾಯಾರಿಕೆಯಾದಾಗ ಮಕ್ಕಳು ತಾಯಿಯನ್ನು ಸ್ಮರಿಸಿಕೊಳ್ಳುತ್ತವೆ.

೧೧. ಹೇ ಲೋಕಮಾತೆ, ನೀನು ನನ್ನಲ್ಲಿ ಸಂಪೂರ್ಣ ಕರುಣಾಮಯಳಾಗಿದ್ದರೆ ಅದರಲ್ಲಿ ಆಶ್ಚರ್ಯವೇನು? ಏಕೆಂದರೆ ಸಾವಿರಾರು ಅಪರಾಧಗಳನ್ನು ಮಾಡಿದ್ದರೂ ತಾಯಿ ಮಗನನ್ನು ಉಪೇಕ್ಷಿಸುವುದಿಲ್ಲ.

೧೨. ನನ್ನಂತಹ ಪಾತಕಿಯೂ ಇಲ್ಲ, ನಿನ್ನಂತಹ ಪಾಪನಾಶಕಳೂ ಇಲ್ಲ; ಹೇ ಮಹಾದೇವಿ, ಇದನ್ನು ಅರಿತು ಯಾವುದು ಉಚಿತವೋ ಅದನ್ನೇ ಮಾಡು.

# ಅನ್ನಪೂರ್ಣಾಸ್ತೋತ್ರಮ್

ನಿತ್ಯಾನಂದಕರೀ ವರಾಭಯಕರೀ ಸೌಂದರ್ಯರತ್ನಾಕರೀ
ನಿರ್ಧೂತಾಖಿಲಘೋರಪಾವನಕರೀ ಪ್ರತ್ಯಕ್ಷಮಾಹೇಶ್ವರೀ ।
ಪ್ರಾಲೇಯಾಚಲವಂಶಪಾವನಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥ ೧ ॥

ನಾನಾರತ್ನವಿಚಿತ್ರಭೂಷಣಕರೀ ಹೇಮಾಂಬರಾಡಂಬರೀ
ಮುಕ್ತಾಹಾರವಿಲಂಬಮಾನವಿಲಸದ್ವಕ್ಷೋಜಕುಂಭಾಂತರೀ ।
ಕಾಶ್ಮೀರಾಗುರುವಾಸಿತಾ ರುಚಿಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥ ೨ ॥

ಯೋಗಾನಂದಕರೀ ರಿಪುಕ್ಷಯಕರೀ ಧರ್ಮಾರ್ಥನಿಷ್ಠಾಕರೀ
ಚಂದ್ರಾರ್ಕಾನಲಭಾಸಮಾನಲಹರೀ ತ್ರೈಲೋಕ್ಯರಕ್ಷಾಕರೀ ।
ಸರ್ವೈಶ್ವರ್ಯಸಮಸ್ತವಾಂಛಿತಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥ ೩ ॥

ಕೈಲಾಸಾಚಲಕಂದರಾಲಯಕರೀ ಗೌರೀ ಉಮಾ ಶಂಕರೀ
ಕೌಮಾರೀ ನಿಗಮಾರ್ಥಗೋಚರಕರೀ ಓಂಕಾರಬೀಜಾಕ್ಷರೀ ।
ಮೋಕ್ಷದ್ವಾರಕಪಾಟಪಾಟನಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥ ೪ ॥

# ಅನ್ನಪೂರ್ಣಾಸ್ತೋತ್ರ

೧. ನೀನು ಶಾಶ್ವತವಾದ ಆನಂದವನ್ನು ಕೊಡುವವಳು, ವರ ಮತ್ತು ಅಭಯಗಳನ್ನು ನೀಡುವವಳು, ಸೌಂದರ್ಯಸಮುದ್ರಳಾಗಿರುವವಳು, ಪಾಪಗಳನ್ನೆಲ್ಲಾ ತೊಳೆದು ಪಾವನಮಾಡುವವಳು, ಸಾಕ್ಷಾತ್ ಮಾಹೇಶ್ವರಿಯಾಗಿರುವವಳು, ಹಿಮವಂತನ ವಂಶವನ್ನು ಪಾವನಗೊಳಿಸಿದವಳು; ನೀನು ಕಾಶೀಪುರಾಧೀಶ್ವರಿ, ಕೃಪಾಮಯಿಯಾದ ಮಾತೆ ಮತ್ತು ಈಶ್ವರಿಯಾದ ಅನ್ನಪೂರ್ಣೆ; ನೀನು ನನಗೆ ಭಿಕ್ಷವನ್ನು ನೀಡು.

೨. ನೀನು ಬಗೆಬಗೆಯಾದ, ಚಿತ್ರವಿಚಿತ್ರವಾದ ರತ್ನಾಭರಣಗಳನ್ನು ಧರಿಸಿದವಳು, ಬಂಗಾರದ ವಸ್ತ್ರಗಳಿಂದ ಶೋಭಿತಳಾದವಳು; ತೂಗಾಡುತ್ತಿರುವ ಮುತ್ತಿನಹಾರದಿಂದ ನಿನ್ನ ವಕ್ಷಸ್ಥಳವು ಪ್ರಕಾಶಿಸುತ್ತಿದೆ; ನೀನು ಕೇಸರಿ ಮತ್ತು ಅಗುರುಗಳಿಂದ ಸುವಾಸನೆಯುಳ್ಳವಳಾಗಿರುವೆ ಮತ್ತು ಕಾಂತಿಯುಕ್ತಳಾಗಿರುವೆ; ನೀನು ಕಾಶೀಪುರಾಧೀಶ್ವರಿ, ಕೃಪಾಮಯಿಯಾದ ಮಾತೆ ಮತ್ತು ಈಶ್ವರಿಯಾದ ಅನ್ನಪೂರ್ಣೆ; ನನಗೆ ಭಿಕ್ಷವನ್ನು ನೀಡು.

೩. ನೀನು ಯೋಗಾನಂದವನ್ನು ನೀಡುವವಳು, ಶತ್ರುಗಳನ್ನು ನಾಶಮಾಡುವವಳು, ಧರ್ಮ ಮತ್ತು ಅರ್ಥಗಳಲ್ಲಿ ನಿಷ್ಠೆಯನ್ನು ಉಂಟುಮಾಡುವವಳು, ಚಂದ್ರ ಸೂರ್ಯ ಅಗ್ನಿಗಳ ಕಾಂತಿಸಮೂಹಕ್ಕೆ ಸಮಾನವಾದ ಕಾಂತಿಲಹರಿಯುಳ್ಳವಳು, ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳನ್ನೂ ಸಂರಕ್ಷಿಸುವವಳು ಮತ್ತು ಸಮಸ್ತ ಐಶ್ವರ್ಯಗಳನ್ನೂ, ಇಷ್ಟಾರ್ಥಗಳನ್ನೂ ಸಲ್ಲಿಸುವವಳು; ನೀನು ಕಾಶೀಪುರಾಧೀಶ್ವರಿ, ಕೃಪಾಮಯಿಯಾದ ಮಾತೆ ಮತ್ತು ಈಶ್ವರಿಯಾದ ಅನ್ನಪೂರ್ಣೆ; ನನಗೆ ಭಿಕ್ಷವನ್ನು ನೀಡು.

೪. ನೀನು ಕೈಲಾಸಪರ್ವತದ ಕಂದರವನ್ನು ಆಲಯವನ್ನಾಗಿ ಮಾಡಿಕೊಂಡಿರುವವಳು; ನೀನೇ ಗೌರೀ, ಉಮಾ, ಶಂಕರೀ ಮತ್ತು ಕೌಮಾರೀ; ನೀನು ವೇದಗಳ ಅರ್ಥವನ್ನು ಗೋಚರಿಸುವವಳು, ಓಂಕಾರಬೀಜದ ಅಕ್ಷರಸ್ವರೂಪಳು, ಮೋಕ್ಷದ ಹೆಬ್ಬಾಗಿಲನ್ನುತೆರೆಯುವವಳು; ನೀನು ಕಾಶೀಪುರಾಧೀಶ್ವರಿ, ಕೃಪಾಮಯಿಯಾದ ಮಾತೆ ಮತ್ತು ಈಶ್ವರಿಯಾದ ಅನ್ನಪೂರ್ಣೆ; ನನಗೆ ಭಿಕ್ಷೆಯನ್ನು ನೀಡು.

ದೃಶ್ಯಾದೃಶ್ಯಪ್ರಭೂತವಾಹನಕರೀ ಬ್ರಹ್ಮಾಂಡಭಾಂಡೋದರೀ
ಲೀಲಾನಾಟಕಸೂತ್ರಭೇದನಕರೀ ವಿಜ್ಞಾನದೀಪಾಂಕುರೀ ।
ಶ್ರೀವಿಶ್ವೇಶಮನಃಪ್ರಸಾದನಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥ ೫ ॥

ಉರ್ವೀಸರ್ವಜನೇಶ್ವರೀ ಭಗವತೀ ಮಾತಾನ್ನಪೂರ್ಣೇಶ್ವರೀ
ವೇಣೀನೀಲಸಮಾನಕುಂತಲಧರೀ ನಿತ್ಯಾನ್ನದಾನೇಶ್ವರೀ ।
ಸರ್ವಾನಂದಕರೀ ದಶಾಶುಭಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥ ೬ ॥

ಆದಿಕ್ಷಾಂತಸಮಸ್ತವರ್ಣನಕರೀ ಶಂಭೋಸ್ತ್ರಿಭಾವಾಕರೀ
ಕಾಶ್ಮೀರಾ ತ್ರಿಜನೇಶ್ವರೀ ತ್ರಿಲಹರೀ ನಿತ್ಯಾಂಕುರಾ ಶರ್ವರೀ ।
ಕಾಮಾಕಾಂಕ್ಷಕರೀ ಜನೋದಯಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥ ೭ ॥

ದರ್ವೀ ಸ್ವರ್ಣವಿಚಿತ್ರರತ್ನರಚಿತಾ ದಕ್ಷೇ ಕರೇ ಸಂಸ್ಥಿತಾ
ವಾಮೇ ಸ್ವಾದುಪಯೋಧರೀ ಸಹಚರೀ ಸೌಭಾಗ್ಯಮಾಹೇಶ್ವರೀ ।
ಭಕ್ತಾಭೀಷ್ಟಕರೀ ದೃಶಾ ಶುಭಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥ ೮ ॥

೫. ನೀನು ಜಗತ್ತಿನಲ್ಲಿ ಗೋಚರಿಸುವ ಮತ್ತು ಅಗೋಚರವಾದ ಎಲ್ಲಾ ವಸ್ತುಗಳನ್ನು ವಹಿಸಿರುತ್ತೀಯೆ, ಇಡೀ ಬ್ರಹ್ಮಾಂಡವೇ ನಿನ್ನ ಉದರದಲ್ಲಿದೆ; ಸಂಸಾರಲೀಲಾರೂಪವಾದ ನಾಟಕದ ಪ್ರಸ್ತಾವನೆಯನ್ನು ಭೇದಿಸಬಲ್ಲವಳು ನೀನು; ವಿಜ್ಞಾನವೆಂಬ ದೀಪಕ್ಕೆ ನೀನೇ ಕಾರಣಕರ್ತಳು. ಶ್ರೀವಿಶ್ವೇಶ್ವರನ ಚಿತ್ತಪ್ರಸಾದವನ್ನು ತರುವವಳು ನೀನು. ನೀನು ಕಾಶೀಪುರಾಧೀಶ್ವರಿ, ಕೃಪಾಮಯಿಯಾದ ಮಾತೆ ಮತ್ತು ಈಶ್ವರಿಯಾದ ಅನ್ನಪೂರ್ಣೆ; ನನಗೆ ಭಿಕ್ಷವನ್ನು ನೀಡು.

೬. ನೀನು ಪೃಥ್ವಿಯ ಸರ್ವಜನರಿಗೂ ಈಶ್ವರೀ, ಭಗವತಿ, ಮಾತೆ, ಅನ್ನಪೂರ್ಣೆ, ಈಶ್ವರೀ; ಕಪ್ಪಾದ ಕೂದಲುಗಳನ್ನು ಜಡೆಹೆಣೆದುಕೊಂಡು ಸುಂದರಳಾಗಿರುವವಳು ನೀನು; ನೀನು ನಿತ್ಯವೂ ಅನ್ನದಾನವನ್ನು ಮಾಡುವವಳು ಮತ್ತು ಸರ್ವರಿಗೂ ಆನಂದವನ್ನೂ, ಸೌಭಾಗ್ಯವನ್ನೂ ಉಂಟು ಮಾಡುವವಳು; ನೀನು ಕಾಶೀಪುರಾಧೀಶ್ವರಿ, ಕೃಪಾಮಯಿಯಾದ ಮಾತೆ ಮತ್ತು ಈಶ್ವರಿಯಾದ ಅನ್ನಪೂರ್ಣೆ; ನನಗೆ ಭಿಕ್ಷವನ್ನು ನೀಡು.

೭. 'ಅ' ಕಾರದಿಂದ 'ಕ್ಷ' ಕಾರದ ವರೆಗಿರುವ ಸಮಸ್ತವರ್ಣಗಳನ್ನೂ ಸೃಷ್ಟಿಸಿದವಳು ನೀನು; ಶಂಭುವಿನ ಅವಸ್ಥಾತ್ರಯಕ್ಕೆ (ಈಶ್ವರ, ಹಿರಣ್ಯಗರ್ಭ ಮತ್ತು ವಿರಾಟ) ಕಾರಣಕರ್ತಳೂ, ಕುಂಕುಮವರ್ಣವುಳ್ಳವಳೂ, ತ್ರಿಲೋಕಗಳ ಮಹಾರಾಜ್ಞಿಯೂ ನೀನೇ; ಸೃಷ್ಟಿಸ್ಥಿತಿಲಯಗಳೆಂಬ ಮೂರು ತರಂಗಸ್ವರೂಪಳೂ, ಸದಾ ಕಾರಣಸ್ವರೂಪಳೂ, ಪ್ರಳಯದ ಅಂಧಕಾರಸ್ವರೂಪಳೂ ನೀನೇ; ಎಲ್ಲರ ಅಪೇಕ್ಷೆಗಳನ್ನೂ ಪೂರ್ತಿಗೊಳಿಸುವವಳೂ, ಜನರನ್ನು ಉದ್ಧರಿಸುವವಳೂ ನೀನೇ; ನೀನು ಕಾಶೀಪುರಾಧೀಶ್ವರಿ, ಕೃಪಾಮಯಿಯಾದ ಮಾತೆ ಮತ್ತು ಈಶ್ವರಿಯಾದ ಅನ್ನಪೂರ್ಣೆ; ನೀನು ನನಗೆ ಭಿಕ್ಷವನ್ನು ನೀಡು.

೮. ನೀನು ನಿನ್ನ ಬಲಗೈಯಲ್ಲಿ ರತ್ನಖಚಿತವಾದ ಬಂಗಾರದ ಸೌಟನ್ನೂ, ಎಡಗೈಯಲ್ಲಿ ರುಚಿಕರವಾದ ಅಮೃತದ ಪಾತ್ರೆಯನ್ನೂ ಹಿಡಿದಿರುವೆ; ಸಕಲ ಸೌಭಾಗ್ಯಗಳಿಗೂ ನೀನು ಒಡೆಯಳಾಗಿರುವೆ; ನೀನು ಭಕ್ತರ ಅಭೀಷ್ಟಗಳನ್ನೆಲ್ಲಾ ಸಲ್ಲಿಸುವೆ, ಅವರಿಗೆ ಕಟಾಕ್ಷದಿಂದಲೇ ಶುಭವನ್ನು ಅನುಗ್ರಹಿಸುವೆ; ನೀನು ಕಾಶೀಪುರಾಧೀಶ್ವರಿ, ಕೃಪಾಮಯಿಯಾದ ಮತ್ತು ಈಶ್ವರಿಯಾದ ಅನ್ನಪೂರ್ಣೆ; ನೀನು ನನಗೆ ಭಿಕ್ಷವನ್ನು ನೀಡು.

ಚಂದ್ರಾರ್ಕಾನಲಕೋಟಿಕೋಟಿಸದೃಶಾ ಚಂದ್ರಾಂಶುಬಿಂಬಾಧರೀ
ಚಂದ್ರಾರ್ಕಾಗ್ನಿಸಮಾನಕುಂಡಲಧರೀ ಚಂದ್ರಾರ್ಕವರ್ಣೇಶ್ವರೀ ।
ಮಾಲಾಪುಸ್ತಕಪಾಶಾಂಕುಶಧರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥ ೯ ॥

ಕ್ಷತ್ರತ್ರಾಣಕರೀ ಮಹಾಭಯಕರೀ ಮಾತಾ ಕೃಪಾಸಾಗರೀ
ಸಾಕ್ಷಾನ್ಮೋಕ್ಷಕರೀ ಸದಾ ಶಿವಕರೀ ವಿಶ್ವೇಶ್ವರೀ ಶ್ರೀಧರೀ
ದಕ್ಷಾಕ್ರಂದಕರೀ ನಿರಾಮಯಕರೀ ಕಾಶೀಪುರಾಧೀಶ್ವರೀ
ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನ-
ಪೂರ್ಣೇಶ್ವರೀ ॥ ೧೦ ॥

ಅನ್ನಪೂರ್ಣೇ ಸದಾಪೂರ್ಣೇ ಶಂಕರಪ್ರಾಣವಲ್ಲಭೇ ।
ಜ್ಞಾನವೈರಾಗ್ಯಸಿದ್ಧ್ಯರ್ಥಂ ಭಿಕ್ಷಾಂ ದೇಹಿ ಚ ಪಾರ್ವತಿ ॥ ೧೧ ॥

ಮಾತಾ ಮೇ ಪಾರ್ವತೀ ದೇವೀ ಪಿತಾ ದೇವೋ ಮಹೇಶ್ವರಃ ।
ಬಾಂಧವಾಃ ಶಿವಭಕ್ತಾಶ್ಚ ಸ್ವದೇಶೋ ಭುವನತ್ರಯಂ ॥ ೧೨ ॥

೯. ಕೋಟ್ಯಾನುಕೋಟಿ ಚಂದ್ರ-ಸೂರ್ಯಾಗ್ನಿಗಳಿಗೆ ಸಮಾನವಾದ ತೇಜಸ್ಸುಳ್ಳವಳು ನೀನು; ನಿನ್ನ ತುಟಿಗಳು ಚಂದ್ರನ ಕಿರಣಗಳನ್ನು ಪ್ರತಿಬಿಂಬಿಸುತ್ತಿವೆ; ನಿನ್ನ ಕರ್ಣಾಭರಣಗಳು ಅಗ್ನಿ ಸೂರ್ಯ ಚಂದ್ರರಂತೆ ಉಜ್ವಲವಾಗಿವೆ; ನಿನ್ನ ಬಣ್ಣವು ಚಂದ್ರಸೂರ್ಯರಂತೆ ಕಾಂತಿಯುಕ್ತವಾಗಿದೆ; ನಿನ್ನ ಕೈಗಳಲ್ಲಿ ಮಾಲೆ, ಪುಸ್ತಕ, ಪಾಶ, ಅಂಕುಶಗಳನ್ನು ಧರಿಸಿರುವೆ; ನೀನು ಕಾಶೀಪುರಾಧೀಶ್ವರಿ, ಕೃಪಾಮಯಿಯಾದ ಮಾತೆ ಮತ್ತು ಈಶ್ವರಿಯಾದ ಅನ್ನಪೂರ್ಣೆ; ನನಗೆ ಭಿಕ್ಷೆಯನ್ನು ನೀಡು.

೧೦. ನೀನು ಕ್ಷತ್ರಿಯರ ಸಂರಕ್ಷಕಳು, ಅತ್ಯಂತ ಅಭಯಪ್ರದಳು, ಕರುಣಾಸಾಗರಳು, ಪ್ರತ್ಯಕ್ಷಮೋಕ್ಷವನ್ನೇ ನೀಡುವವಳು, ಸದಾ ಮಂಗಳವನ್ನುಂಟುಮಾಡುವವಳು, ಜಗದೀಶ್ವರಿಯಾಗಿರುವವಳು, ವಿಶ್ವೇಶ್ವರನ ಸಂಪತ್ತನ್ನು ವರ್ಧಿಸುವವಳು, ದಕ್ಷನಿಗೆ ದುಃಖವನ್ನುಂಟುಮಾಡಿದವಳು ಮತ್ತು ರೋಗಗಳನ್ನೆಲ್ಲಾ ಹೋಗಲಾಡಿಸುವವಳು; ನೀನು ಕಾಶೀಪುರಾಧೀಶ್ವರಿ, ಕೃಪಾಮಯಿಯಾದ ಮಾತೆ ಮತ್ತು ಈಶ್ವರಿಯಾದ ಅನ್ನಪೂರ್ಣೆ; ನನಗೆ ಭಿಕ್ಷೆಯನ್ನು ನೀಡು.

೧೧. ಸದಾ ಪೂರ್ಣಳಾಗಿರುವ ಅನ್ನಪೂರ್ಣೆ; ಶಂಕರನ ಪ್ರಾಣಪ್ರಿಯೆ, ಹೇ ಪಾರ್ವತಿ, ಜ್ಞಾನವೈರಾಗ್ಯಗಳು ಸಿದ್ಧಿಸುವಂತೆ ನನಗೆ ಭಿಕ್ಷೆಯನ್ನು ನೀಡು.

೧೨. ಪಾರ್ವತೀದೇವಿಯು ನನ್ನ ತಾಯಿ; ದೇವನಾದ ಮಹೇಶ್ವರನು ನನ್ನ ತಂದೆ, ಶಿವಭಕ್ತರೇ ನನ್ನ ಬಾಂಧವರು, ಮೂರು ಲೋಕಗಳೇ ನನ್ನ ಸ್ವದೇಶ.

# ಜಗದ್ಧಾತ್ರೀಸ್ತೋತ್ರಮ್

ಆಧಾರಭೂತೇ ಚಾಧೇಯೇ ಧೃತಿರೂಪೇ ಧುರಂಧರೇ ।
ಧ್ರುವೇ ಧ್ರುವಪದೇ ಧೀರೇ ಜಗದ್ಧಾತ್ರಿ ನಮೋಽಸ್ತು ತೇ ॥ ೧ ॥

ಶವಾಕಾರೇ ಶಕ್ತಿರೂಪೇ ಶಕ್ತಿಸ್ಥೇ ಶಕ್ತಿವಿಗ್ರಹೇ ।
ಶಾಕ್ತಾಚಾರಪ್ರಿಯೇ ದೇವಿ ಜಗದ್ಧಾತ್ರಿ ನಮೋಽಸ್ತು ತೇ ॥ ೨ ॥

ಜಯದೇ ಜಗದಾನಂದೇ ಜಗದೇಕಪ್ರಪೂಜಿತೇ ।
ಜಯ ಸರ್ವಗತೇ ದುರ್ಗೇ ಜಗದ್ಧಾತ್ರಿ ನಮೋಽಸ್ತು ತೇ ॥ ೩ ॥

ಸೂಕ್ಷ್ಮಾತಿಸೂಕ್ಷ್ಮರೂಪೇ ಚ ಪ್ರಾಣಾಪಾನಾದಿರೂಪಿಣಿ ।
ಭಾವಾಭಾವಸ್ವರೂಪೇ ಚ ಜಗದ್ಧಾತ್ರಿ ನಮೋಽಸ್ತು ತೇ ॥ ೪ ॥

ಕಾಲಾದಿರೂಪೇ ಕಾಲೇಶೇ ಕಾಲಾಕಾಲವಿಭೇದಿನಿ ।
ಸರ್ವಸ್ವರೂಪೇ ಸರ್ವಜ್ಞೇ ಜಗದ್ಧಾತ್ರಿ ನಮೋಽಸ್ತು ತೇ ॥ ೫ ॥

ಮಹಾವಿಘ್ನೇ ಮಹೋತ್ಸಾಹೇ ಮಹಾಮಾಯೇ ವರಪ್ರದೇ ।
ಪ್ರಪಂಚಸಾರೇ ಸಾಧ್ವೀಶೇ ಜಗದ್ಧಾತ್ರಿ ನಮೋಽಸ್ತು ತೇ ॥ ೬ ॥

ಅಗಮ್ಯೇ ಜಗತಾಮಾದ್ಯೇ ಮಾಹೇಶ್ವರಿ ವರಾಂಗನೇ ।
ಅಶೇಷರೂಪೇ ರೂಪಸ್ಥೇ ಜಗದ್ಧಾತ್ರಿ ನಮೋಽಸ್ತು ತೇ ॥ ೭ ॥

# ಜಗದ್ಧಾತ್ರಿಸ್ತೋತ್ರ

೧. ಜಗತ್ತಿಗೆಲ್ಲಾ ಆಧಾರಭೂತಳು ನೀನೇ, ಆಧೇಯಳೂ ನೀನೇ, ಧಾರಣ ಶಕ್ತಿಸ್ವರೂಪಳು ಮತ್ತು ಸರ್ವೋತ್ತಮಳು ನೀನು; ಶಾಶ್ವತಳು, ಶಾಶ್ವತ ಸ್ಥಾನಳು ಮತ್ತು ಅಚಲಸ್ವಭಾವವುಳ್ಳವಳು ನೀನು; ಹೇ ಜಗದ್ಧಾತ್ರಿ, ನಿನಗೆ ನಮಸ್ಕಾರ.

೨. ಹೇ ದೇವಿ, ನೀನೇ ನಿರ್ಗುಣಶಿವಸ್ವರೂಪಳು ಮತ್ತು ಶಕ್ತಿ; ನೀನೇ ಸಮಸ್ತ ಶಕ್ತಿಗಳಲ್ಲಿಯೂ ನೆಲೆಸಿರುವೆ; ಶಕ್ತಿವಿಗ್ರಹಳೂ ಮತ್ತು ಶಾಕ್ತ ರಿಗೆ ಉಚಿತವಾದ ಆಚಾರದಿಂದ ಸಂತುಷ್ಟಳಾಗುವವಳೂ ನೀನೇ; ಹೇ ಜಗದ್ಧಾತ್ರಿ, ನಿನಗೆ ನಮಸ್ಕಾರ.

೩. ಹೇ ದುರ್ಗಾದೇವಿ, ನೀನು ಜಯವನ್ನು ನೀಡುವವಳು, ಜಗದಾನಂದ ಸ್ವರೂಪಳು; ಜಗತ್ತಿನಲ್ಲಿ ನೀನೊಬ್ಬಳೇ ಪ್ರಕೃಷ್ಟರೂಪದಿಂದ ಪೂಜಿತ ಳಾದವಳು; ನೀನು ಸರ್ವವ್ಯಾಪಿನಿ, ನಿನಗೆ ಜಯವಾಗಲಿ; ಹೇ ಜಗದ್ಧಾತ್ರಿ, ನಿನಗೆ ನಮಸ್ಕಾರ.

೪. ನೀನು ಸೂಕ್ಷ್ಮಕ್ಕಿಂತಲೂ ಸೂಕ್ಷ್ಮಳಾದವಳು, ಜಗತ್ತಿನ ಜೀವಿಗಳ ಪ್ರಾಣಾ ಪಾನಾದಿರೂಪಳು; ಭಾವಸ್ವರೂಪಿಣಿಯೂ ನೀನೇ, ಅಭಾವಸ್ವರೂಪಿ ಣಿಯೂ ನೀನೇ; ಹೇ ಜಗದ್ಧಾತ್ರಿ, ನಿನಗೆ ನಮಸ್ಕಾರ.

೫. ನೀನು ಕಾಲ ಮೊದಲಾದುವುಗಳ ಸ್ವರೂಪಳು, ಕಾಲದ ಈಶ್ವರೀ; ಕಾಲ ಮತ್ತು ಕಾಲಾತೀತವಸ್ತುಗಳ ಭೇದಕ್ಕೆ ಕಾರಣಳು ನೀನು; ನೀನು ಸರ್ವ ಸ್ವರೂಪಳು ಮತ್ತು ಸರ್ವಜ್ಞೆ; ಹೇ ಜಗದ್ಧಾತ್ರಿ, ನಿನಗೆ ನಮಸ್ಕಾರ.

೬. ಮಹಾ ವಿಷ್ಣುಸ್ವರೂಪಳೂ, ಮಹಾ ಉತ್ಸಾಹರೂಪಿಣಿಯೂ, ಮಹಾ ಮಾಯೆಯೂ ಮತ್ತು ವರಪ್ರದಳೂ ನೀನೇ; ನೀನು ಜಗತ್ತಿನ ಸಾರ ಸ್ವರೂಪಳು ಮತ್ತು ಸಾಧುವೃಂದಗಳ ಈಶ್ವರೀ; ಹೇ ಜಗದ್ಧಾತ್ರಿ, ನಿನಗೆ ನಮಸ್ಕಾರ.

೭. ನೀನು ಅಗಮ್ಯಳು, ಜಗತ್ತಿನ ಆದಿಕಾರಣಳು, ಮಹೇಶ್ವರನ ಪತ್ನಿ, ಅತ್ಯಂತ ಶ್ರೇಷ್ಠಳಾದವಳು; ನೀನು ಅಖಿಲ-ಸೌಂದರ್ಯಸ್ವರೂಪಳು, ಸರ್ವಸ್ವರೂಪಳು, ಹೇ ಜಗದ್ಧಾತ್ರಿ, ನಿನಗೆ ನಮಸ್ಕಾರ.

ತೀರ್ಥಯಜ್ಞತಪೋದಾನಯೋಗಸಾರೇ ಜಗನ್ಮಯಿ ।
ತ್ವಮೇವ ಸರ್ವಂ ಸರ್ವಸ್ಥೇ ಜಗದ್ಧಾತ್ರಿ ನಮೋಽಸ್ತು ತೇ ॥ ೮ ॥

ದಯಾರೂಪೇ ದಯಾದೃಷ್ಟೇ ದಯಾರ್ದ್ರೇ ದುಃಖಮೋಚನಿ ।
ಸರ್ವಾಪತ್ತಾರಿಕೇ ದುರ್ಗೇ ಜಗದ್ಧಾತ್ರಿ ನಮೋಽಸ್ತು ತೇ ॥ ೯ ॥

ಅಗಮ್ಯಧಾಮಧಾಮಸ್ಥೇ ಮಹಾಯೋಗೀಶಹೃತ್ಪುರೇ ।
ಅಮೇಯಭಾವಕೂಟಸ್ಥೇ ಜಗದ್ಧಾತ್ರಿ ನಮೋಽಸ್ತು ತೇ ॥ ೧೦ ॥

೮. ತೀರ್ಥ ಯಜ್ಞ ತಪಸ್ಸು ದಾನ ಯೋಗ—ಇವುಗಳ ಸಾರವೇ ನೀನು; ನೀನು ಜಗನ್ಮಯಿ, ಎಲ್ಲವೂ ನೀನೆ, ಎಲ್ಲದರಲ್ಲಿಯೂ ನೀನು ವ್ಯಾಪಿಸಿರುವೆ; ಹೇ ಜಗದ್ಧಾತ್ರಿ, ನಿನಗೆ ನಮಸ್ಕಾರ.

೯. ಹೇ ದುರ್ಗಾದೇವಿ, ನೀನು ದಯಾರೂಪಳು, ದಯಾದೃಷ್ಟಿಯುಳ್ಳವಳು, ದಯಾರ್ದ್ರಹೃದಯಳು, ದುಃಖವನ್ನು ನಾಶಮಾಡುವವಳು; ಸಮಸ್ತ ಆಪತ್ತುಗಳಿಂದಲೂ ಸಂರಕ್ಷಿಸುವವಳು ನೀನು; ಹೇ ಜಗದ್ಧಾತ್ರಿ, ನಿನಗೆ ನಮಸ್ಕಾರ.

೧೦. ನೀನು ಅಗಮ್ಯವಾದ ಪ್ರಕಾಶರೂಪಧಾಮದಲ್ಲಿ ನೆಲಸಿರುವೆ; ನೀನು ಮಹಾಯೋಗಿಗಳ ಹೃದಯವೆಂಬ ಪಟ್ಟಣದಲ್ಲಿ ನೆಲಸಿರುವೆ; ನೀನು ಅಮೇಯವಾದ ಭಾವರಾಶಿಯಲ್ಲಿ ನೆಲಸಿರುವೆ; ಹೇ ಜಗದ್ಧಾತ್ರಿ ನಿನಗೆ ನಮಸ್ಕಾರ.

# ಅಂಬಾಸ್ತೋತ್ರಮ್

ಕಾ ತ್ವಂ ಶುಭೇ ಶಿವಕರೇ ಸುಖದುಃಖಹಸ್ತೇ
ಆಘೂರ್ಣಿತಂ ಭವಜಲಂ ಪ್ರಬಲೋರ್ಮಿಭಂಗೈಃ ।
ಶಾಂತಿಂ ವಿಧಾತುಮಿಹ ಕಿಂ ಬಹುಧಾ ವಿಭಗ್ನಾಂ
ಮಾತಃ ಪ್ರಯತ್ನಪರಮಾಸಿ ಸದೈವ ವಿಶ್ವೇ ॥ ೧ ॥

ಸಂಪಾದಯತ್ಯವಿರತಂ ತ್ವವಿರಾಮವೃತ್ತಾ
ಯಾ ವೈ ಸ್ಥಿತಾ ಕೃತಫಲಂ ತ್ವಕೃತಸ್ಯ ನೇತ್ರೀ ।
ಸಾ ಮೇ ಭವತ್ವನುದಿನಂ ವರದಾ ಭವಾನೀ
ಜಾನಾಮ್ಯಹಂ ಧ್ರುವಮಿದಂ ಧೃತಕರ್ಮಪಾಶಾ ॥ ೨ ॥

ಕೋ ವಾ ಧರ್ಮಃ ಕಿಮಕೃತಂ ಕಃ ಕಪಾಲಲೇಖಃ
ಕಿಂ ವಾದೃಷ್ಟಂ ಫಲಮಿಹಾಸ್ತಿ ಹಿ ಯಾಂ ವಿನಾ ಭೋಃ ।
ಇಚ್ಛಾಪಾಶೈರ್ನಿಯಮಿತಾ ನಿಯಮಾಃ ಸ್ವತಂತ್ರೈಃ
ಯಸ್ಯಾ ನೇತ್ರೀ ಭವತು ಸಾ ಶರಣಂ ಮಮಾದ್ಯಾ ॥ ೩ ॥

ಸಂತಾನಯಂತಿ ಜಲಧಿಂ ಜನಿಮೃತ್ಯುಜಾಲಂ
ಸಂಭಾವಯಂತ್ಯವಿಕೃತಂ ವಿಕೃತಂ ವಿಭಗ್ನಮ್ ।
ಯಸ್ಯಾ ವಿಭೂತಯ ಇಹಾಮಿತಶಕ್ತಿಪಾಲಾಃ
ನಾಶ್ರಿತ್ಯ ತಾಂ ವದ ಕುತಃ ಶರಣಂ ವ್ರಜಾಮಃ ॥ ೪ ॥

# ಅಂಬಾಸ್ತೋತ್ರ

೧. ಸುಖದುಃಖಗಳನ್ನು ತನ್ನ ಕೈಗಳೊಳಗೆ ಇಟ್ಟುಕೊಂಡಿರುವವಳೇ,(ದರ್ಶನ ಮಾತ್ರದಿಂದ) ಶಾಂತಿಸುಖವನ್ನು ಬೀರುತ್ತಿರುವ ಮಂಗಳಸ್ವರೂಪಿಣಿಯೇ, ನೀನಾವಳು? ಈ ವಿಶ್ವದಲ್ಲಿ ಸಂಸಾರಸಾಗರದ ನೀರು ಪ್ರಬಲವಾದ ಅಲೆಗಳ ಏರಿಳಿತಗಳಿಂದ ಕ್ಷೋಭವನ್ನು ಹೊಂದಿ ಸುಳಿಗಳಿಂದ ಕೂಡಿದೆ. ಎಲೈ ತಾಯೆ, ಈ ಭವಸಾಗರದಲ್ಲಿ ಅನೇಕ ವಿಧದಿಂದ ನಷ್ಟವಾದ ಶಾಂತಿಯನ್ನು ಸ್ಥಾಪಿಸುವುದಕ್ಕಾಗಿ ನೀನು ಅನವರತವೂ ಅತ್ಯಂತವಾಗಿ ಪ್ರಯತ್ನಿಸುತ್ತಿರುವೆಯಾ?

೨. ಯಾವಳು ವಿರಾಮವಿಲ್ಲದೆ ದುಡಿಯುತ್ತಾ ಅನವರತವೂ ಜೀವಿಗಳಿಗೆ ಪ್ರಾರಬ್ಧಕರ್ಮಗಳ ಫಲವನ್ನು ನೀಡುತ್ತಲೂ, ವರ್ತಮಾನಭವಿಷ್ಯತ್ಕಾಲಗಳಲ್ಲಿ ಮಾಡತಕ್ಕ ಕರ್ಮಗಳಿಗೆ ಜೀವಿಗಳನ್ನು ಒಯ್ಯುತ್ತಲೂ ಇರುವಳೋ, ಆ ಭವಾನಿಯು ನನಗೆ ಅನುದಿನವೂ ಅಭೀಷ್ಟವನ್ನು ಅನುಗ್ರಹಿಸುವವಳಾಗಲಿ; ಅವಳೇ ಕರ್ಮಪಾಶವನ್ನು ಹಿಡಿದಿರುವಳೆಂದು ನಾನು ತಿಳಿದಿದ್ದೇನೆ; ಮತ್ತು ಇದು ಖಂಡಿತವಾದ ಮಾತು.

೩. ಎಲೈ ಜೀವಿಗಳೇ, ಯಾವ ಧರ್ಮವು, ಯಾವ (ಜೀವಿಗಳ) ವರ್ತಮಾನ ಭವಿಷ್ಯತ್ಕಾಲಗಳ ಕರ್ಮವು, ಯಾವ ಹಣೆಬರಹವು ಮತ್ತು ಯಾವ ಅದೃಷ್ಟಫಲವು ತಾನೇ ಆ ಭವಾನಿಯನ್ನು ಬಿಟ್ಟು ಇದೆ? (ಅಂದರೆ ಸರ್ವವೂ ಅವಳ ಇಚ್ಛಾಧೀನ.) ಎಲ್ಲಾ ನಿಯಮಗಳೂ ಅವಳ ಸ್ವತಂತ್ರವಾದ ಇಚ್ಛಾಪಾಶಗಳಿಂದ ಕಟ್ಟಲ್ಪಟ್ಟಿವೆ. ಜಗತ್ತಿನ ಪ್ರಥಮಮಾರ್ಗದರ್ಶಿಕೆಯಾದ ಆ ಭವಾನಿಯು ನನಗೆ ರಕ್ಷಕಳಾಗಿರಲಿ.

೪. ಯಾವ ನಿನ್ನ ಅಮಿತವಾದ ಶಕ್ತಿಯುಳ್ಳ ವಿಭೂತಿಗಳು (ಪ್ರಭಾವಗಳು) ಈ ವಿಶ್ವದಲ್ಲಿ ಜನನಮರಣಪರಂಪರೆ (ಜಾಲ) ಗಳುಳ್ಳ ಭವಸಾಗರವನ್ನು ಉಕ್ಕಿಸುತ್ತವೆಯೋ ಮತ್ತು ವಿಕಾರವಿಲ್ಲದ ಅಖಂಡಬ್ರಹ್ಮವಸ್ತುವನ್ನು ನಾಮರೂಪಗಳಿಂದ ವಿಕಾರವುಳ್ಳದ್ದನ್ನಾಗಿಯೂ, ಅನೇಕ ಜೀವಾತ್ಮಗಳ ರೂಪದಿಂದ ಖಂಡಖಂಡಗಳನ್ನಾಗಿಯೂ ಮಾಡಿ ಕೊನೆಯಲ್ಲಿ ಆ ಜೀವಾತ್ಮಗಳನ್ನು ಪರಮಾತ್ಮನಲ್ಲಿ ಲೀನಗಳನ್ನಾಗಿ ಮಾಡುತ್ತವೆಯೋ, ಅಂತಹ ನಿನ್ನನ್ನು ಆಶ್ರಯಿಸದೆ ಮತ್ತಾರಿಂದ ನಾವು ರಕ್ಷಣೆಯನ್ನು ಹೊಂದಬಲ್ಲೆವು? ಹೇಳು.

ಮಿತ್ರೇ ಶತ್ರೌ ಅವಿಷಮಂ ತವ ಪದ್ಮನೇತ್ರಂ
ಸ್ವಸ್ಥೇ ದುಃಸ್ಥೇ ತ್ವವಿತಥಂ ತವ ಹಸ್ತಪಾತಃ ।
ಮೃತ್ಯುಚ್ಛಾಯಾ ತವ ದಯಾ ಅಮೃತಂ ಚ ಮಾತಃ
ಮಾ ಮಾಂ ಮುಂಚಂತು ಪರಮೇ ಶುಭದೃಷ್ಟಯಸ್ತೇ ॥ ೫ ॥

ಕ್ವಾಂಬಾ ಸರ್ವಾ ಕ್ವ ಗೃಣನಂ ಹೀನಬುದ್ಧೇಃ
ಧರ್ತುಂ ದೋರ್ಭ್ಯಾಮಿವ ಮತಿರ್ಜಗದೇಕಧಾತ್ರೀಮ್ ।
ಶ್ರೀಸಂಚಿಂತ್ಯಂ ಸುಚರಣಂ ಅಭಯಪ್ರತಿಷ್ಠಂ
ಸೇವಾಸಾರ್ಯೈರಭಿನುತಂ ಶರಣಂ ಪ್ರಪದ್ಯೇ ॥ ೬ ॥

ಯಾ ಮಾಮಾಜನ್ಮ ವಿನಯತ್ಯತಿದುಃಖಮಾರ್ಗೈಃ
ಆಸಂಸಿದ್ಧೈಃ ಸ್ವಕಲಿತೈರ್ಲಲಿತೈರ್ವಿಲಾಸೈಃ ।
ಯಾ ಮೇ ಬುದ್ಧಿಂ ಸುವಿದಧೇ ಸತತಂ ಧರಣ್ಯಾಂ
ಸಾಂಬಾ ಸರ್ವಾ ಮಮ ಗತಿಃ ಸಫಲೇಽಫಲೇವಾ ॥ ೭ ॥

೫. ನಿನ್ನ ಕಮಲನೇತ್ರಗಳು ಮಿತ್ರರಲ್ಲಿಯೂ ಶತ್ರುಗಳಲ್ಲಿಯೂ ವೈಷಮ್ಯವಿಲ್ಲದೆ ಸಮಾನದೃಷ್ಟಿಯನ್ನು ಬೀರುತ್ತವೆ; ಸ್ವಸ್ಥನಾಗಿದ್ದವನಲ್ಲಿಯೂ ದುರವಸ್ಥೆಯನ್ನು ಅನುಭವಿಸುತ್ತಿರುವವನಲ್ಲಿಯೂ ನಿನ್ನ (ಅಭಯ) ಹಸ್ತದ ಸ್ಪರ್ಶವು ನಿಜವಾಗಿಯೂ ಸಮಾನವಾಗಿಯೇ ಇದೆ. ಎಲೈ ತಾಯೆ, ಮೃತ್ಯುವಿನ ಛಾಯೆ (ಈ ಭೂಲೋಕದಲ್ಲಿ ಸಂಸಾರಿಯಾಗಿರುವಿಕೆ) ಮತ್ತು ಮೋಕ್ಷ ಇವೆರಡೂ ನಿನ್ನ ಕೃಪಾಪ್ರಸಾದಗಳೇ ಆಗಿವೆ. ಎಲೈ ಪರಮಾತ್ಮಸ್ವರೂಪಳೇ, ನಿನ್ನ ಮಂಗಲಕರವಾದ ದೃಷ್ಟಿಗಳು ನನ್ನಿಂದ ವಿಮುಖಗಳಾಗದಿರಲಿ.

೬. ವಿಶ್ವಸ್ವರೂಪಳೂ ಜಗನ್ಮಾತೆಯೂ ಆದ ನೀನೆಲ್ಲಿ? ಅತ್ಯಲ್ಪಮತಿಯಾದ ನನ್ನ ಈ ಸ್ತೋತ್ರವೆಲ್ಲಿ? ಲೋಕವನ್ನು ತಾನೊಬ್ಬಳೇ ಧರಿಸಿಕೊಂಡಿರುವವಳಾದ ನಿನ್ನನ್ನು ನನ್ನ (ಈ ಚಿಕ್ಕ) ಕೈಗಳಿಂದ ಧರಿಸಿಕೊಳ್ಳಲು ನನ್ನ ಮನಸ್ಸು ಉದ್ಯುಕ್ತವಾದಂತಿದೆ. ಶ್ರೀದೇವಿಯಿಂದ ಸತತವೂ ಧ್ಯಾನಿಸಲ್ಪಡುತ್ತಿರುವ, ಅಭಯಕ್ಕೆ ಆಧಾರವಾದ ಮತ್ತು ನಿನ್ನ ಸೇವೆಯೇ ಪ್ರಧಾನವಾಗಿಯುಳ್ಳ (ಭಕ್ತಾಗ್ರಣಿಗಳಿಂದ) ಸ್ತುತಿಸಲ್ಪಡುವ ನಿನ್ನ ಶೋಭನವಾದ ಚರಣಗಳನ್ನು ನಾನು ಶರಣುಹೊಂದಿದ್ದೇನೆ.

೭. ಯಾವ ಮಾತೆಯು ನನ್ನ ಜನ್ಮದಿಂದ ಆರಂಭಿಸಿ ತನ್ನದೇ ಆದ ಲಲಿತ ವಿಲಾಸಗಳಿಂದ ಸಂಸಿದ್ಧಿ (ಮೋಕ್ಷಪ್ರಾಪ್ತಿ) ಯವರೆಗೂ ಅತ್ಯಂತ ದುಃಖಕರವಾದ ಮಾರ್ಗಗಳ ಮೂಲಕ ನನ್ನನ್ನು ಕೊಂಡೊಯ್ಯುತ್ತಿದ್ದಾಳೋ, ಯಾವಳು ಈ ಜಗತ್ತಿನಲ್ಲಿ ನನ್ನ ಬುದ್ಧಿಯನ್ನು ಯಾವಾಗಲೂ ಪ್ರಚೋದಿಸಿದಳೋ ಆ ಮಾತೆಯೇ — ನಾನು ಫಲಸಹಿತನಾಗಲಿ ಅಥವಾ ಫಲರಹಿತನಾಗಲಿ — ನನಗೆ ಗತಿ ಮತ್ತು ಸರ್ವಸ್ವ.

# ಶ್ರೀಸೂಕ್ತಮ್

ಹಿರಣ್ಯವರ್ಣಾಂ ಹರಿಣೀಂ ಸುವರ್ಣರಜತಸ್ರಜಾಮ್ ।
ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ ॥ ೧ ॥

ತಾಂ ಮ ಆವಹ ಜಾತವೇದೋ
ಲಕ್ಷ್ಮೀಮನಪಗಾಮಿನೀಮ್ ।
ಯಸ್ಯಾಂ ಹಿರಣ್ಯಂ ವಿಂದೇಯಂ
ಗಾಮಶ್ವಂ ಪುರುಷಾನಹಮ್ ॥ ೨ ॥

ಅಶ್ವಪೂರ್ವಾಂ ರಥಮಧ್ಯಾಂ
ಹಸ್ತಿನಾದಪ್ರಬೋಧಿನೀಮ್ ।
ಶ್ರಿಯಂ ದೇವೀಮುಪಹ್ವಯೇ
ಶ್ರೀರ್ಮಾದೇವೀ ಜುಷತಾಮ್ ॥ ೩ ॥

ಕಾಂ ಸೋಸ್ಮಿತಾಂ ಹಿರಣ್ಯಪ್ರಾಕಾರಮಾರ್ದ್ರಾಂ
ಜ್ವಲಂತೀಂ ತೃಪ್ತಾಂ ತರ್ಪಯಂತೀಮ್ ।
ಪದ್ಮೇ ಸ್ಥಿತಾಂ ಪದ್ಮವರ್ಣಾಂ
ತಾಮಿಹೋಪಹ್ವಯೇ ಶ್ರಿಯಮ್ ॥ ೪ ॥

# ಶ್ರೀಸೂಕ್ತ

೧. ಹೇ ಜಾತವೇದ (ಲಕ್ಷ್ಮೀಪತಿ), ಚಿನ್ನದ ಬಣ್ಣವುಳ್ಳವಳೂ (ಅಥವಾ ಹಿತ ರಮಣೀಯಳೂ), ಹೆಣ್ಣುಜಿಂಕೆಯಂತೆ ಆಕರ್ಷಣಶಕ್ತಿಯುಳ್ಳವಳೂ (ಅಥವಾ ಆಶ್ರಿತರ ಪಾಪಗಳನ್ನು ನಾಶಮಾಡುವ ಶೀಲವುಳ್ಳವಳೂ), [ತನ್ನ ಸೌಂದರ್ಯ–ಲಾವಣ್ಯಗಳಿಗೆ ಅನುಗುಣವಾದ ನಿತ್ಯ–ನಿರ್ಮಲವಾದ] ಪುಷ್ಪಮಾಲೆಯನ್ನು ಧರಿಸಿರುವವಳೂ, ಚಂದ್ರನಂತೆ ಎಲ್ಲರಿಗೂ ಆಹ್ಲಾದವನ್ನುಂಟುಮಾಡುವವಳೂ, ಹಿರಣ್ಯ ಮೊದಲಾದ ಸರ್ವೈಶ್ವರ್ಯದ ಪ್ರಾಚುರ್ಯವುಳ್ಳವಳೂ ಆದ ಲಕ್ಷ್ಮೀಯನ್ನು ನನಗೆ (ನಾನು ಮಾಡುವ ಪೂಜೆಯನ್ನು ಸ್ವೀಕರಿಸಲು) ಕಳುಹಿಸಿಕೊಡು.

೨. ಹೇ ಜಾತವೇದ, ಯಾವಳ ಕೃಪೆಯಿಂದ ಹಿರಣ್ಯವನ್ನು, ದನಕರುಗಳನ್ನು, ಕುದುರೆಗಳನ್ನು, ಸೇವಕರನ್ನು ಹೊಂದುವೆವೋ ಆ ನನ್ನನ್ನು ಅಗಲದ ಲಕ್ಷ್ಮಿಯನ್ನು ನಾನು ಮಾಡುವ ಸೇವೆಯನ್ನು ಸ್ವೀಕರಿಸಲು ಕಳುಹಿಸಿ ಕೊಡು.

೩. ಯಾವಳಿಗೆ ವಿಷ್ಣುವು ಮುಂದಾಳಾಗಿರುವನೋ, ಯಾವಳು ಮನುಷ್ಯರ ಹೃದಯದಲ್ಲಿ ನೆಲಸಿರುವಳೋ, ಯಾವಳು ಗಜೇಂದ್ರನೇ ಮೊದಲಾದ ಆರ್ತರ ಕೂಗಿನಿಂದ ಎಚ್ಚರಗೊಳ್ಳುವಳೋ ಆ ಶ್ರೀದೇವಿಯನ್ನು ಆಹ್ವಾನ ಮಾಡುತ್ತೇನೆ; ಅವಳು ನನ್ನಲ್ಲಿ ಪ್ರೀತಿಯನ್ನು ಹೊಂದಲಿ.

೪. ಆನಂದಸ್ವರೂಪಳೂ, ಮುಗುಳುನಗೆಯುಳ್ಳವಳೂ, ಹಿರಣ್ಮಯವಾದ ದಿವ್ಯಮಂಟಪದಲ್ಲಿ ಇರುವವಳೂ, ದಯಾರ್ದ್ರಹೃದಯಳೂ, ಪ್ರಭೆ ಸೂಸುತ್ತಿರುವವಳೂ, (ಭಕ್ತರ ಸೇವೆಯಿಂದ) ತೃಪ್ತಳಾದವಳೂ, (ವರಗಳನ್ನು ಅನುಗ್ರಹಿಸಿ) ಭಕ್ತರನ್ನು ತೃಪ್ತಿಪಡಿಸುವವಳೂ, ಪದ್ಮದಲ್ಲಿ ವಾಸಿಸುವವಳೂ, ಪದ್ಮವರ್ಣವುಳ್ಳವಳೂ, ಶ್ರೀದೇವಿಯೂ ಆದ ನಿನ್ನನ್ನು ಆಹ್ವಾನಮಾಡುತ್ತೇನೆ.

ಚಂದ್ರಾಂ ಪ್ರಭಾಸಾಂ ಯಶಸಾ ಜ್ವಲಂತೀಂ
ಶ್ರಿಯಂ ಲೋಕೇ ದೇವಜುಷ್ಟಾಮುದಾರಾಮ್ ।
ತಾಂ ಪದ್ಮನೇಮಿಂ ಶರಣಮಹಂ ಪ್ರಪದ್ಯೇಽ-
ಲಕ್ಷ್ಮೀರ್ಮೇ ನಶ್ಯತಾಂ ತ್ವಾಂ ವೃಣೇ ॥ ೫ ॥

ಆದಿತ್ಯವರ್ಣೇ ತಪಸೋಽಧಿಜಾತೋ
ವನಸ್ಪತಿಸ್ತವ ವೃಕ್ಷೋಽಥ ಬಿಲ್ವಃ ।
ತಸ್ಯ ಫಲಾನಿ ತಪಸಾ ನುದಂತು ಮಾಯಾಂತ-
ರಾಯಾಶ್ಚ ಬಾಹ್ಯಾ ಅಲಕ್ಷ್ಮೀಃ ॥ ೬ ॥

ಉಪೈತು ಮಾಂ ದೇವಸಖಃ
ಕೀರ್ತಿಶ್ಚ ಮಣಿನಾ ಸಹ ।
ಪ್ರಾದುರ್ಭೂತೋಽಸ್ಮಿ ರಾಷ್ಟ್ರೇಽಸ್ಮಿನ್
ಕೀರ್ತಿಮೃದ್ಧಿಂ ದದಾತು ಮೇ ॥ ೭ ॥

ಕ್ಷುತ್ಪಿಪಾಸಾಂ ಮಲಾಂ ಜ್ಯೇಷ್ಠಾ-
ಮಲಕ್ಷ್ಮೀಂ ನಾಶಯಾಮ್ಯಹಮ್ ।
ಅಭೂತಿಮಸಮೃದ್ಧಿಂ ಚ
ಸರ್ವಾನ್ ನಿರ್ಣುದ ಮೇ ಗೃಹಾತ್ ॥ ೮ ॥

ಗಂಧದ್ವಾರಾಂ ದುರಾಧರ್ಷಾಂ
ನಿತ್ಯಪುಷ್ಟಾಂ ಕರೀಷಿಣೀಮ್ ।
ಈಶ್ವರೀಂ ಸರ್ವಭೂತಾನಾಂ
ತಾಮಿಹೋಪಹ್ವಯೇ ಶ್ರಿಯಮ್ ॥ ೯ ॥

೫. ನಿರತಿಶಯಾನಂದ–ಸ್ವರೂಪಳೂ, (ಲೋಕಗಳನ್ನೆಲ್ಲಾ) ಪ್ರಕಾಶಿಸುತ್ತಿರುವವಳೂ, ಯಶಸ್ಸಿನಿಂದ ಪ್ರಜ್ವಲಿಸುತ್ತಿರುವವಳೂ, ಎಲ್ಲಾ ಲೋಕಗಳಲ್ಲೂ ದೇವತೆಗಳಿಂದ ಸೇವಿಸಲ್ಪಟ್ಟವಳೂ, ಉದಾರಸ್ವಭಾವವುಳ್ಳವಳೂ, (ಆಶ್ರಿತರ ಅನಿಷ್ಟವನ್ನು ಹೋಗಲಾಡಿಸಲು) ಕೈಯಲ್ಲಿ ಪದ್ಮವನ್ನೇ ಸಾಧನವನ್ನಾಗಿ ಇಟ್ಟುಕೊಂಡಿರುವವಳೂ ಆದ ಸರ್ವೇಶ್ವರಿಯಲ್ಲಿ ನಾನು ಶರಣಾಗತಿಯನ್ನು ಮಾಡುತ್ತೇನೆ. ಹೇ ದೇವಿ, ನಾನು ಪ್ರಾರ್ಥಿಸುತ್ತೇನೆ: ಅಲಕ್ಷ್ಮಿಯು (ಬ್ರಹ್ಮವಿದ್ಯೆಯ ಅಭಾವ) ನನ್ನಿಂದ ತೊಲಗಲಿ.

೬. ಆದಿತ್ಯನ ಹಾಗೆ ವರ್ಣವುಳ್ಳವಳೇ, ನಿನ್ನ ಸಂಕಲ್ಪದಿಂದ ಹುಟ್ಟಿದ ವನಸ್ಪತಿಯೂ, ಮಂಗಳಕರವೂ ಆದ ಬಿಲ್ವವು ನಿನಗೆ ಪ್ರಿಯವಾದ ವೃಕ್ಷ; ಅದರ ಫಲಗಳು ನಮ್ಮ ತಪಸ್ಸಿನ ಮೂಲಕ ಅಜ್ಞಾನವನ್ನೂ, ನಿನ್ನ ಆರಾಧನೆಗೆ ಉಂಟಾಗುವ ವಿಘ್ನಗಳನ್ನೂ, ನಿನ್ನ ಸಂಬಂಧಕ್ಕೆ ಬಾಹ್ಯವಾದ ವಿಷಯಗಳನ್ನೂ, ಅಲಕ್ಷ್ಮಿಯನ್ನೂ ನಾಶಮಾಡಲಿ.

೭. ತನ್ನ ಸಹಚರನಾದ ಮಣಿಭದ್ರನೊಂದಿಗೆ ರುದ್ರನ ಸ್ನೇಹಿತನಾದ ಕುಬೇರನೂ, ರುದ್ರನ ಪತ್ನಿಯಾದ ಸತಿಯೂ (ಕೀರ್ತಿ) ಶರಣಾಗತನಾದ ನನ್ನನ್ನು ಹೊಂದಲಿ (ಎಂದರೆ, ಅವರುಗಳ ಅನುಗ್ರಹವು ನನಗೆ ಉಂಟಾಗಲಿ). ಈ ಲೋಕದಲ್ಲಿ ನಾನು ಹುಟ್ಟಿರುತ್ತೇನೆ; ಅವರುಗಳು ನನಗೆ ಸಮೃದ್ಧಿಯನ್ನೂ ಕೀರ್ತಿಯನ್ನೂ ಅನುಗ್ರಹಿಸಲಿ.

೮. ಹಸಿವು ಬಾಯಾರಿಕೆಗಳಿಗೆ ಕಾರಣಳೂ, ಅಪವಿತ್ರಳೂ, ನಿನಗಿಂತ ಮುಂಚೆ (ಸಮುದ್ರಮಥನ ಕಾಲದಲ್ಲಿ) ಹುಟ್ಟಿದವಳೂ, ಆದ ಅಲಕ್ಷ್ಮಿಯನ್ನು (ನಿನ್ನ ಕೃಪೆಯಿಂದ) ನಾಶಮಾಡುತ್ತೇನೆ; ನನ್ನ ಮನೆಯಿಂದ ಅಸಮೃದ್ಧಿಯನ್ನೂ ಮತ್ತು ದಾರಿದ್ರ್ಯವನ್ನೂ ತೊಲಗಿಸು.

೯. ಗಂಧಾದಿಪೂಜಾದ್ರವ್ಯಗಳಿಂದ (ಆರಾಧನೆ ಮಾಡಿದವನಿಗೆ ಅನುಗ್ರಹಿಸಲು) ಕಾರಣಭೂತಳೂ (ಅಥವಾ ಪುಣ್ಯಕರ್ಮಪರಿಪಾಕದಿಂದ ಹುಟ್ಟಿದವನಿಗೆ ಯಶಸ್ಸನ್ನು ಕೊಡುವವಳೂ), ಅವಳನ್ನು ಆಶ್ರಯಿಸದವರಿಗೆ ಅಸಾಧ್ಯಳೂ ನಿತ್ಯಪರಿಪೂರ್ಣಳೂ, ಕೃಷಿಸಾಮಗ್ರಿಗಳಿಂದ ಕೂಡಿದವಳೂ ಮತ್ತು ಸಮಸ್ತಭೂತಗಳ ಈಶ್ವರಿಯೂ ಆದ ಶ್ರೀದೇವಿಯನ್ನು ಆಹ್ವಾನ ಮಾಡುತ್ತೇನೆ.

ಮನಸಃ ಕಾಮಮಾಕೂತಿಂ ವಾಚಸ್ಸತ್ಯಮಶೀಮಹಿ ।
ಪಶೂನಾಂ ರೂಪಮನ್ನಸ್ಯ ಮಯಿ ಶ್ರೀಃ ಶ್ರಯತಾಂ ಯಶಃ ॥ ೧೦ ॥

ಕರ್ದಮೇನ ಪ್ರಜಾಭೂತಾ
ಮಯಿ ಸಂಭವ ಕರ್ದಮ ।
ಶ್ರಿಯಂ ವಾಸಯ ಮೇ ಕುಲೇ
ಮಾತರಂ ಪದ್ಮಮಾಲಿನೀಮ್ ॥ ೧೧ ॥

ಆಪಃ ಸೃಜಂತು ಸ್ನಿಗ್ಧಾನಿ ಚಿಕ್ಲೀತ ವಸ ಮೇ ಗೃಹೇ ।
ನಿ ಚ ದೇವೀಂ ಮಾತರಂ ಶ್ರಿಯಂ ವಾಸಯ ಮೇ ಕುಲೇ ॥ ೧೨ ॥

ಆರ್ದ್ರಾಂ ಪುಷ್ಕರಿಣೀಂ ಯಷ್ಟಿಂ
ಪಿಂಗಲಾಂ ಪದ್ಮಮಾಲಿನೀಮ್ ।
ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ
ಜಾತವೇದೋ ಮಮಾಽವಹ ॥ ೧೩ ॥

ಆರ್ದ್ರಾಂ ಪುಷ್ಕರಿಣೀಂ ಪುಷ್ಟಿಂ
ಸುವರ್ಣಾಂ ಹೇಮಮಾಲಿನೀಮ್ ।
ಸೂರ್ಯಾಂ ಹಿರಣ್ಮಯೀಂ ಲಕ್ಷ್ಮೀಂ
ಜಾತವೇದೋ ಮಮಾಽವಹ ॥ ೧೪ ॥

ತಾಂ ಮ ಆವಹ ಜಾತವೇದೋ ಲಕ್ಷ್ಮೀಮನಪಗಾಮಿನೀಮ್ ।
ಯಸ್ಯಾಂ ಹಿರಣ್ಯಂ ಪ್ರಭೂತಂ ಗಾವೋ ದಾಸ್ಯೋಽಶ್ವಾನ್
ವಿಂದೇಯಂ ಪುರುಷಾನಹಮ್ ॥ ೧೫ ॥

೧೦. ನಮ್ಮ ಮನೋರಥಗಳನ್ನೂ, ಉದ್ದೇಶವನ್ನೂ, ವಾಕ್ಕಿನ ಸತ್ಯತೆಯನ್ನೂ, ಅನ್ನ ಮತ್ತು ದನಗಳ ಸಮೃದ್ಧಿಯನ್ನೂ ಸಾಧಿಸುವೆವೆಂದು ನಾವು ಆಶಿಸುತ್ತೇವೆ; ಶ್ರೀದೇವಿಯು ನಮಗೆ ಯಶಸ್ಸನ್ನು ಹೊಂದಿಸಲಿ.

೧೧. ಹೇ ಕರ್ದಮಪ್ರಜಾಪತಿ, ನಿನ್ನಿಂದ ಮಗಳಾಗಿ ಸ್ವೀಕರಿಸಲ್ಪಟ್ಟ ಶ್ರೀ ದೇವಿಯು ನನ್ನನ್ನು ಅನುಗ್ರಹಿಸುವ ಹಾಗೆ ಮಾಡು; ಲೋಕಮಾತೆ ಯೂ, ಪದ್ಮಮಾಲೆಯನ್ನು ಧರಿಸಿರುವವಳೂ ಆದ ಶ್ರೀದೇವಿಯು ನನ್ನ ಕುಲದಲ್ಲಿ ವಾಸಿಸುವ ಹಾಗೆ ಮಾಡು.

೧೨. ಹೇ ಚಿಕ್ಲೀತ, (ಭಗವಂತನಿಗೆ ವಾಸಸ್ಥಾನವಾದ) ಕ್ಷೀರಸಮುದ್ರವು ನನ್ನ ಗೃಹದಲ್ಲಿ ಸ್ನಿಗ್ಧವಸ್ತುಗಳನ್ನು ಉಂಟುಮಾಡಲಿ; ನೀನು ನನ್ನ ಮನೆಯಲ್ಲಿ ವಾಸಿಸು, ಅಖಿಲಲೋಕಜನನಿಯೂ, (ನನ್ನ ತಾಯಿಯೂ) ಆದ ಶ್ರೀದೇವಿಯು ನನ್ನ ಕುಲದಲ್ಲಿ ವಾಸಿಸುವಹಾಗೆ ಮಾಡು.

೧೩. ಹೇ ಜಾತವೇದ, ದಯಾರ್ದ್ರಹೃದಯಳೂ, ಪುಷ್ಕರಿಣಿಯಲ್ಲಿ ವಾಸಿಸು ವವಳೂ, ಯಜ್ಞಕ್ರಿಯಾಸ್ವರೂಪಳೂ, ದಿವ್ಯವರ್ಣವುಳ್ಳವಳೂ, ಪದ್ಮ ಮಾಲಾಧಾರಿಣಿಯೂ, ಜಗತ್ತಿಗೆಲ್ಲಾ ಆಹ್ಲಾದವನ್ನುಂಟುಮಾಡುವ ವಳೂ, ಹಿರಣ್ಮಯಿಯೂ ಆದ ಲಕ್ಷ್ಮಿಯನ್ನು ನನಗೆ ಕಳುಹಿಸಿಕೊಡು.

೧೪. ಹೇ ಜಾತವೇದ, ದಯಾರ್ದ್ರಹೃದಯಳೂ, ಪುಷ್ಕರಿಣಿಯಲ್ಲಿ ವಾಸಿಸು ವವಳೂ, ಅಖಿಲಸಮೃದ್ಧಿರೂಪಳೂ, ಸುವರ್ಣಕಾಂತಿಯುಳ್ಳವಳೂ, ಹೇಮಮಾಲೆಗಳಿಂದ ಭೂಷಿತಳಾದವಳೂ, ಜಗತ್ತಿನ ನಿಯಂತ್ರಕಳೂ, ಹಿರಣ್ಮಯಿಯೂ ಆದ ಲಕ್ಷ್ಮಿಯನ್ನು ನನಗೆ ಕಳುಹಿಸಿಕೊಡು.

೧೫. ಹೇ ಜಾತವೇದ, ಯಾವಳಲ್ಲಿ ಧನಕನಕಾದಿಗಳು ಸಮೃದ್ಧವಾಗಿ ವೆಯೋ, ಯಾವಳ ಕೃಪೆಯಿಂದ ದನಕರುಗಳನ್ನು, ಕುದುರೆಗಳನ್ನು, ಸೇವಕರನ್ನು ಹೊಂದುವೆವೋ ಅಂತಹ ಲಕ್ಷ್ಮಿಯನ್ನು ನನಗೆ ಕಳುಹಿಸಿ ಕೊಡು ಮತ್ತು ಅವಳು ನನ್ನನ್ನು ಬಿಡದಹಾಗೆ ಮಾಡು.

# ಲಕ್ಷ್ಮೀಸ್ತೋತ್ರಮ್

ನಿತ್ಯೈವೈಷಾ ಜಗನ್ಮಾತಾ ವಿಷ್ಣೋಃ ಶ್ರೀರನಪಾಯಿನೀ ।
ಯಥಾ ಸರ್ವಗತೋ ವಿಷ್ಣುಸ್ತಥೈವೇಯಂ ದ್ವಿಜೋತ್ತಮ ॥ ೧ ॥

ಅರ್ಥೋ ವಿಷ್ಣುರಿಯಂ ವಾಣೀ
ನೀತಿರೇಷಾ ನಯೋ ಹರಿಃ ।
ಬೋಧೋ ವಿಷ್ಣುರಿಯಂ ಬುದ್ಧಿಃ
ಧರ್ಮೋಽಸೌ ಸತ್ಕ್ರಿಯಾ ತ್ವಿಯಮ್ ॥ ೨ ॥

ಸ್ರಷ್ಟಾ ವಿಷ್ಣುರಿಯಂ ಸೃಷ್ಟಿಃ
ಶ್ರೀರ್ಭೂಮಿಃ ಭೂಧರೋ ಹರಿಃ ।
ಸಂತೋಷೋ ಭಗವಾನ್ ಲಕ್ಷ್ಮೀಃ
ತುಷ್ಟಿರ್ಮೈತ್ರೇಯ ಶಾಶ್ವತೀ ॥ ೩ ॥

ಇಚ್ಛಾ ಶ್ರೀರ್ಭಗವಾನ್ ಕಾಮೋ ಯಜ್ಞೋಽಸೌ ದಕ್ಷಿಣಾ ತು ಸಾ ।
ಆಜ್ಯಾಹುತಿರಸೌ ದೇವೀ ಪುರೋಡಾಶೋ ಜನಾರ್ದನಃ ॥ ೪ ॥

ಪತ್ನೀಶಾಲಾ ಮುನೇ ಲಕ್ಷ್ಮೀಃ
ಪ್ರಾಗ್ವಂಶೋ ಮಧುಸೂದನಃ ।
ಚಿತಿರ್ಲಕ್ಷ್ಮೀಃ ಹರಿರ್ಯೂಪಃ
ಇಧ್ಮಾ ಶ್ರೀರ್ಭಗವಾನ್ ಕುಶಃ ॥ ೫ ॥

ಸಾಮಸ್ವರೂಪೀ ಭಗವಾನ್ ಉದ್ಗೀತಿಃ ಕಮಲಾಲಯಾ ।
ಸ್ವಾಹಾ ಲಕ್ಷ್ಮೀ ಜಗನ್ನಾಥೋ ವಾಸುದೇವೋ ಹುತಾಶನಃ ॥ ೬ ॥

ಶಂಕರೋ ಭಗವಾನ್ ವಿಷ್ಣುಃ ಗೌರೀ ಲಕ್ಷ್ಮೀರ್ದ್ವಿಜೋತ್ತಮ ।
ಮೈತ್ರೇಯ ಕೇಶವಃ ಸೂರ್ಯಃ ತತ್ಪ್ರಭಾ ಕಮಲಾಲಯಾ ॥ ೭ ॥

ವಿಷ್ಣುಃ ಪಿತೃಗಣಃ ಪದ್ಮಾ ಸ್ವಧಾ ಶಾಶ್ವತ-ಪುಷ್ಟಿದಾ ।
ದ್ಯೌಃ ಶ್ರೀಃ ಸರ್ವಾತ್ಮಕೋ ವಿಷ್ಣುಃ ಅವಕಾಶೋಽತಿವಿಸ್ತರಃ ॥ ೮ ॥

# ಲಕ್ಷ್ಮೀಸ್ತೋತ್ರ

೧. ವಿಷ್ಣುವಿನಿಂದ ಎಂದಿಗೂ ಬೇರೆಯಾಗಿರದ ಜಗನ್ಮಾತೆಯಾದ ಲಕ್ಷ್ಮೀದೇವಿಯು ನಿತ್ಯಳು; ವಿಷ್ಣುವಿನಂತೆಯೇ ಇವಳೂ ಸರ್ವಗತಳು.

೨. ವಿಷ್ಣುವು ಅರ್ಥಸ್ವರೂಪನು, ಲಕ್ಷ್ಮಿಯು ವಾಣಿಯು; ಹರಿಯು ನ್ಯಾಯಸ್ವರೂಪನು, ಇವಳು ನೀತಿಯು; ವಿಷ್ಣುವು ಜ್ಞಾನಸ್ವರೂಪನು, ಇವಳು ಬುದ್ಧಿಯು; ಅವನು ಧರ್ಮಸ್ವರೂಪನು, ಇವಳು ಸತ್ಕ್ರಿಯೆಯು.

೩. ವಿಷ್ಣುವು ಸೃಷ್ಟಿಕರ್ತನು, ಇವಳು ಸೃಷ್ಟಿಯು; ಹರಿಯು ಭೂಧರನು, ಇವಳು ಭೂಮಿಯು; ಭಗವಂತನು ಸಂತೋಷಸ್ವರೂಪನು, ಲಕ್ಷ್ಮಿಯು ಶಾಶ್ವತವಾದ ತುಷ್ಟಿಯು.

೪. ಭಗವಂತನು ಕಾಮಸ್ವರೂಪನು, ಶ್ರೀದೇವಿಯು ಇಚ್ಛೆಯು; ಅವನು ಯಜ್ಞಸ್ವರೂಪನು, ಇವಳು ದಕ್ಷಿಣೆ; ಜನಾರ್ಧನನು ಪುರೋಡಾಶವೆಂಬ ಹವಿಸ್ಸ್ವರೂಪಳು, ದೇವಿಯು ಆಜ್ಯಾಹುತಿಯು.

೫. ಮಧುಸೂದನನು ಪ್ರಾಗ್ವಂಶಸ್ವರೂಪನು(ಯಜಮಾನಗೃಹ), ಲಕ್ಷ್ಮಿಯು ಪತ್ನೀಶಾಲೆಯು; ಹರಿಯು ಯೂಪಸ್ವರೂಪನು, ಲಕ್ಷ್ಮಿಯು ಚಿತಿಯು; ಭಗವಂತನು ಕುಶಸ್ವರೂಪನು, ಶ್ರೀದೇವಿಯು ಇಧ್ಮರೂಪಳು.

೬. ಭಗವಂತನು ಸಾಮಸ್ವರೂಪನು, ಕಮಲಾದೇವಿಯು ಉದ್ಗೀತಸ್ವರೂಪಳು; ಜಗನ್ನಾಥನಾದ ವಾಸುದೇವನು ಹುತಾಶನನು, ಲಕ್ಷ್ಮಿಯು ಸ್ವಾಹಾಸ್ವರೂಪಳು.

೭. ಭಗವಂತನಾದ ವಿಷ್ಣುವು ಶಂಕರನು, ಲಕ್ಷ್ಮಿಯೇ ಗೌರೀದೇವಿಯು; ಕೇಶವನು ಸೂರ್ಯನು, ಕಮಲಾದೇವಿಯು ಅವನ ಪ್ರಭೆಯು.

೮. ವಿಷ್ಣುವು ಪಿತೃಗಣ–ಸ್ವರೂಪನು, ಪದ್ಮಾದೇವಿಯು ಶಾಶ್ವತಪುಷ್ಟಿಯನ್ನು ಕೊಡುವ ಸ್ವಧಾರೂಪಳು; ಸರ್ವಾತ್ಮಕನಾದ ವಿಷ್ಣುವು ಅತಿ ವಿಸ್ತಾರವಾದ ಆಕಾಶವು, ಶ್ರೀದೇವಿಯು ದ್ಯುಲೋಕರೂಪಳು.

ಶಶಾಂಕಃ ಶ್ರೀಧರಃ ಕಾಂತಿಃ ಶ್ರೀಃ ತಸ್ಯೈವಾನಪಾಯಿನೀ ।
ಧೃತಿರ್ಲಕ್ಷ್ಮೀಃ ಜಗಚ್ಚೇಷ್ಟಾ ವಾಯುಃ ಸರ್ವತ್ರಗೋ ಹರಿಃ ॥ ೯ ॥

ಜಲಧಿರ್ದ್ವಿಜ ಗೋವಿಂದಃ
ತದ್ವೇಲಾ ಶ್ರೀರ್ಮಹಾಮತೇ ।
ಲಕ್ಷ್ಮೀ-ಸ್ವರೂಪಮಿಂದ್ರಾಣೀ
ದೇವೇಂದ್ರೋ ಮಧುಸೂದನಃ ॥ ೧೦ ॥

ಯಮಶ್ಚಕ್ರಧರಃ ಸಾಕ್ಷಾತ್ ಧೂಮೋರ್ಣಾ ಕಮಲಾಲಯಾ ।
ಋದ್ಧಿಃ ಶ್ರೀಃ ಶ್ರೀಧರೋ ದೇವಃ ಸ್ವಯಮೇವ ಧನೇಶ್ವರಃ ॥ ೧೧ ॥

ಗೌರೀ ಲಕ್ಷ್ಮೀಃ ಮಹಾಭಾಗ ಕೇಶವಃ ವರುಣ ಸ್ವಯಮ್ ।
ಶ್ರೀರ್ದೇವಸೇನಾ ತದ್ಭರ್ತಾ ದೇವಸೇನಾಪತಿರ್ಹರಿಃ ॥ ೧೨ ॥

ಅವಷ್ಟಂಭೋ ಗದಾಪಾಣಿಃ
ಶಕ್ತಿಃ ಲಕ್ಷ್ಮೀರ್ದ್ವಿಜೋತ್ತಮ ।
ಕಾಷ್ಠಾ ಲಕ್ಷ್ಮೀರ್ನಿಮೇಷೋಽಸೌ
ಮುಹೂರ್ತೋಽಸೌ ಕಲಾ ತು ಸಾ ॥ ೧೩ ॥

ಜ್ಯೋತ್ಸ್ನಾ ಲಕ್ಷ್ಮೀಃ ಪ್ರದೀಪೋಽಸೌ ಸರ್ವಂ ಸರ್ವೇಶ್ವರೋ ಹರಿಃ ।
ಲತಾಭೂತಾ ಜಗನ್ಮಾತಾ ಶ್ರೀರ್ವಿಷ್ಣುಃ ದ್ರುಮಸಂಸ್ಥಿತಿಃ ॥ ೧೪ ॥

ವಿಭಾವರೀ ಶ್ರೀರ್ದಿವಸೋ ದೇವಶ್ಚಕ್ರಗದಾಧರಃ ।
ವರಪ್ರದೋ ವರೋ ವಿಷ್ಣುಃ ವಧೂಃ ಪದ್ಮವನಾಲಯಾ ॥ ೧೫ ॥

ನದಸ್ವರೂಪೀ ಭಗವಾನ್ ಶ್ರೀರ್ನದೀರೂಪ-ಸಂಸ್ಥಿತಾ ।
ಧ್ವಜಶ್ಚ ಪುಂಡರೀಕಾಕ್ಷಃ ಪತಾಕಾ ಕಮಲಾಲಯಾ ॥ ೧೬ ॥

೯. ಶ್ರೀಧರನು ಚಂದ್ರನು, ಅವನೊಂದಿಗೆ ಯಾವಾಗಲೂ ಸೇರಿರುವ ಶ್ರೀದೇವಿಯು ಚಂದ್ರನ ಕಾಂತಿಯು; ಸರ್ವಗತನಾದ ಹರಿಯು ವಾಯುವು, ಲಕ್ಷ್ಮಿಯು ಜಗತ್ತಿನ ಕ್ರಿಯಾಶಕ್ತಿ ಮತ್ತು ಧೃತಿ.

೧೦. ವಿಷ್ಣುವು ಸಮುದ್ರವು, ಶ್ರೀದೇವಿಯು ಅದರ ತರಂಗಗಳು; ಮಧುಸೂದನನು ದೇವೇಂದ್ರನು, ಲಕ್ಷ್ಮಿಯು ಇಂದ್ರಾಣೀಸ್ವರೂಪಳು.

೧೧. ಚಕ್ರಧರನಾದ ವಿಷ್ಣುವು ಯಮನು, ಲಕ್ಷ್ಮಿಯು ಧೂಮೋರ್ಣಾ ಎಂಬ ಯಮನ ಪತ್ನಿಯು; ಶ್ರೀಧರನೇ ಕುಬೇರನು, ಶ್ರೀದೇವಿಯು ಕುಬೇರನ ಪತ್ನಿಯಾದ ಋದ್ಧಿ ಎಂಬುವಳು.

೧೨. ಕೇಶವನೇ ಸ್ವಯಂ ವರುಣನು, ಲಕ್ಷ್ಮಿಯು ಗೌರೀ ಎಂಬ ಅವನ ಪತ್ನಿಯು; ಹರಿಯು ದೇವಸೇನಾಪತಿಯು, ಶ್ರೀದೇವಿಯು ದೇವಸೇನೆಯು.

೧೩. ಗದಾಪಾಣಿಯಾದ ವಿಷ್ಣುವು ಆಶ್ರಯಸ್ವರೂಪನು, ಲಕ್ಷ್ಮಿಯು ಶಕ್ತಿಸ್ವರೂಪಳು; ವಿಷ್ಣುವು ನಿಮಿಷ-ಮುಹೂರ್ತಗಳೆಂಬ ಕಾಲಸ್ವರೂಪನು, ಲಕ್ಷ್ಮಿಯು ಕಾಲಕಾಷ್ಟಗಳೆಂಬ ಕಾಲಸ್ವರೂಪಳು.

೧೪. ಸರ್ವೇಶ್ವರನಾದ ಹರಿಯು ಪ್ರದೀಪಸ್ವರೂಪನು, ಲಕ್ಷ್ಮಿಯು ಪ್ರಭಾಸ್ವರೂಪಳು; ವಿಷ್ಣುವು ವೃಕ್ಷಸ್ವರೂಪನು, ಜಗನ್ಮಾತೆಯಾದ ಶ್ರೀದೇವಿಯು ಲತಾಸ್ವರೂಪಳು.

೧೫. ಚಕ್ರಗದಾಧರನಾದ ವಿಷ್ಣುವು ದಿವಸಸ್ವರೂಪನು, ಶ್ರೀದೇವಿಯು ರಾತ್ರಿಸ್ವರೂಪಳು; ವರಪ್ರದನಾದ ವಿಷ್ಣುವು ವರನು, ಪದ್ಮವನಾಲಯಳಾದ ಲಕ್ಷ್ಮಿಯು ವಧುವು.

೧೬. ಭಗವಂತನು ನದ–ಸ್ವರೂಪನು, ಶ್ರೀದೇವಿಯು ನದೀರೂಪಳು; ಪುಂಡರೀಕಾಕ್ಷನಾದ ವಿಷ್ಣುವು ಧ್ವಜರೂಪನು; ಕಮಲದಲ್ಲಿರುವ ಲಕ್ಷ್ಮಿಯು ಪತಾಕಾರೂಪಳು.

ತೃಷ್ಣಾ ಲಕ್ಷ್ಮೀಃ ಜಗತ್ಸ್ವಾಮೀ ಲೋಭೋ ನಾರಾಯಣಃ ಪರಃ ।
ರತೀ ರಾಗಶ್ಚ ಧರ್ಮಜ್ಞ ಲಕ್ಷ್ಮೀರ್ಗೋವಿಂದ ಏವ ಚ ॥ ೧೭ ॥

ಕಿಂ ವಾಽತ್ರ ಬಹುನೋಕ್ತೇನ ಸಂಕ್ಷೇಪೇಣೇದಮುಚ್ಯತೇ ॥ ೧೮ ॥

ದೇವ-ತಿರ್ಯಙ್ಮನುಷ್ಯೇಷು
ಪುನ್ನಾಮಾ ಭಗವಾನ್ ಹರಿಃ ।
ಸ್ತ್ರೀನಾಮ್ನೀ ಶ್ರೀಶ್ಚ ವಿಜ್ಞೇಯಾ
ನಾನಯೋರ್ವಿದ್ಯತೇ ಪರಮ್ ॥ ೧೯ ॥

೧೭. ಜಗತ್ಸ್ವಾಮಿಯಾದ ನಾರಾಯಣನು ಲೋಭಸ್ವರೂಪನು, ಲಕ್ಷ್ಮಿಯು ತೃಷ್ಣಾಸ್ವರೂಪಳು; ಗೋವಿಂದನು ರಾಗಸ್ವರೂಪನು, ಲಕ್ಷ್ಮಿಯು ರತಿ ಸ್ವರೂಪಳು.

೧೮–೧೯. ವಿಸ್ತಾರವಾಗಿ ಹೇಳುವುದರಿಂದ ಏನು ಪ್ರಯೋಜನ? ಸಂಕ್ಷೇಪ ವಾಗಿ ಹೇಳುವೆನು: ದೇವತೆಗಳು, ತಿರ್ಯಗ್ಯೋನಿಗಳು, ಮನುಷ್ಯರು– ಇವರಲ್ಲಿ ಪುರುಷವಾಚಕವಾದುದೆಲ್ಲಾ ಭಗವಂತನಾದ ಹರಿಯು, ಸ್ತ್ರೀ ವಾಚಕವಾದುದೆಲ್ಲಾ ಲಕ್ಷ್ಮೀ ಎಂದು ತಿಳಿಯಬೇಕು; ಇವರಿಬ್ಬರಿಗಿಂತ ಬೇರೆ ಯಾವುದೂ ಇಲ್ಲ.

# ಮಹಾಲಕ್ಷ್ಮ್ಯಷ್ಟಕಮ್

ನಮಸ್ತೇಽಸ್ತು ಮಹಾಮಾಯೇ ಶ್ರೀಪೀಠೇ ಸುರಪೂಜಿತೇ ।
ಶಂಖಚಕ್ರಗದಾಹಸ್ತೇ ಮಹಾಲಕ್ಷ್ಮಿ ನಮೋಽಸ್ತು ತೇ ॥ ೧ ॥

ನಮಸ್ತೇ ಗರುಡಾರೂಢೇ ಕೋಲಾಸುರಭಯಂಕರಿ ।
ಸರ್ವಪಾಪಹರೇ ದೇವಿ ಮಹಾಲಕ್ಷ್ಮಿ ನಮೋಽಸ್ತು ತೇ ॥ ೨ ॥

ಸರ್ವಜ್ಞೇ ಸರ್ವವರದೇ ಸರ್ವದುಷ್ಟಭಯಂಕರಿ ।
ಸರ್ವದುಃಖಹರೇ ದೇವಿ ಮಹಾಲಕ್ಷ್ಮಿ ನಮೋಽಸ್ತು ತೇ ॥ ೩ ॥

ಸಿದ್ಧಿಬುದ್ಧಿಪ್ರದೇ ದೇವಿ ಭುಕ್ತಿಮುಕ್ತಿಪ್ರದಾಯಿನಿ ।
ಮನ್ತ್ರಮೂರ್ತೇ ಸದಾ ದೇವಿ ಮಹಾಲಕ್ಷ್ಮಿ ನಮೋಽಸ್ತು ತೇ ॥ ೪ ॥

ಆದ್ಯಂನ್ತರಹಿತೇ ದೇವಿ ಆದ್ಯಾಶಕ್ತೇ ಮಹೇಶ್ವರಿ ।
ಯೋಗಜೇ ಯೋಗಸಂಭೂತೇ ಮಹಾಲಕ್ಷ್ಮಿ ನಮೋಽಸ್ತು ತೇ ॥ ೫ ॥

ಸ್ಥೂಲಸೂಕ್ಷ್ಮಮಹಾರೌದ್ರೇ ಮಹಾಶಕ್ತೇ ಮಹೋದಯೇ ।
ಮಹಾಪಾಪಹರೇ ದೇವಿ ಮಹಾಲಕ್ಷ್ಮಿ ನಮೋಽಸ್ತು ತೇ ॥ ೬ ॥

ಪದ್ಮಾಸನಸ್ಥಿತೇ ದೇವಿ ಪರಬ್ರಹ್ಮಸ್ವರೂಪಿಣಿ ।
ಪರಮೇಶಿ ಜಗನ್ಮಾತರ್ಮಹಾಲಕ್ಷ್ಮಿ ನಮೋಽಸ್ತು ತೇ ॥ ೭ ॥

ಶ್ವೇತಾಂಬರಧರೇ ದೇವಿ ನಾನಾಲಂಕಾರಭೂಷಿತೇ ।
ಜಗತ್ಸ್ಥಿತೇ ಜಗನ್ಮಾತರ್ಮಹಾಲಕ್ಷ್ಮಿ ನಮೋಽಸ್ತು ತೇ ॥ ೮ ॥

# ಮಹಾಲಕ್ಷ್ಮೀ ಅಷ್ಟಕ

೧. ಹೇ ಮಹಾಮಾಯೆ, ಸೌಭಾಗ್ಯನಿಲಯಳೆ, ಸುರಪೂಜಿತಳೆ, ನಿನಗೆ ನಮಸ್ಕಾರ. ಹೇ ಶಂಕಚಕ್ರಗದಾಧಾರಿಣಿ, ಮಹಾಲಕ್ಷ್ಮಿ, ನಿನಗೆ ನಮಸ್ಕಾರ.

೨. ಹೇ ದೇವಿ, ಗರುಡವಾಹನೆ, ಕೋಲಾಸುರನನ್ನು ನಾಶಮಾಡಿದವಳೆ, ನಿನಗೆ ನಮಸ್ಕಾರ; ಸರ್ವಪಾಪಹರಳಾದ ಮಹಾಲಕ್ಷ್ಮಿ, ನಿನಗೆ ನಮಸ್ಕಾರ.

೩. ಹೇ ದೇವಿ, ಸರ್ವಜ್ಞೆ, ಸರ್ವವರದೆ, ದುಷ್ಟರಿಗೆ ಭಯಂಕರಸ್ವರೂಪಳೆ, ಸರ್ವದುಃಖಹರಳಾದ ಮಹಾಲಕ್ಷ್ಮಿ, ನಿನಗೆ ನಮಸ್ಕಾರ.

೪. ಹೇ ದೇವಿ, ಸಿದ್ಧಿ ಮತ್ತು ಬುದ್ಧಿಗಳನ್ನು ನೀಡುವವಳೆ, ಭೋಗ ಮತ್ತು ಮುಕ್ತಿಗಳನ್ನು ನೀಡುವವಳೆ, ಸದಾ ಮಂತ್ರಸ್ವರೂಪವುಳ್ಳವಳೇ, ಮಹಾಲಕ್ಷ್ಮಿ, ನಿನಗೆ ನಮಸ್ಕಾರ.

೫. ಹೇ ದೇವಿ, ಆದ್ಯಂತರಹಿತಳೆ, ಆದ್ಯಾಶಕ್ತಿ, ಮಹೇಶ್ವರಿ, ಯೋಗವನ್ನು ಅನುಗ್ರಹಿಸುವವಳೆ, ಯೋಗಸಂಭೂತಿಸ್ವರೂಪಳೆ, ಮಹಾಲಕ್ಷ್ಮಿ, ನಿನಗೆ ನಮಸ್ಕಾರ.

೬. ಹೇ ದೇವಿ, ಸ್ಥೂಲ–ಸೂಕ್ಷ್ಮರೂಪವುಳ್ಳವಳೆ, ಮಹಾರೌದ್ರೆ, ಮಹಾಶಕ್ತಿಸ್ವರೂಪಳೆ, ಮಹೋದಯೆ, ಮಹಾಪಾಪಹರಳಾದ ಮಹಾಲಕ್ಷ್ಮಿ, ನಿನಗೆ ನಮಸ್ಕಾರ.

೭. ಹೇ ದೇವಿ, ಪದ್ಮದ ಮೇಲೆ ಮಂಡಿಸಿರುವವಳೆ, ಪರಬ್ರಹ್ಮಸ್ವರೂಪಿಣಿ, ಪರಮೇಶ್ವರಿ, ಜಗನ್ಮಾತೆ, ಮಹಾಲಕ್ಷ್ಮಿ, ನಿನಗೆ ನಮಸ್ಕಾರ.

೮. ಹೇ ದೇವಿ, ಶ್ವೇತವಸ್ತ್ರವನ್ನು ಧರಿಸಿದವಳೆ, ನಾನಾ ಅಲಂಕಾರಗಳಿಂದ ಭೂಷಿತಳಾದವಳೆ, ಜಗತ್ತಿಗೆ ಆಧಾರಳಾದವಳೆ, ಜಗನ್ಮಾತೆ, ಮಹಾಲಕ್ಷ್ಮಿ, ನಿನಗೆ ನಮಸ್ಕಾರ.

# ಚತುಃಶ್ಲೋಕೀ

ಕಾನ್ತಸ್ತೇ ಪುರುಷೋತ್ತಮಃ ಫಣಿಪತಿಃ
ಶಯ್ಯಾಸನಂ ವಾಹನಂ
ವೇದಾತ್ಮಾ ವಿಹಗೇಶ್ವರೋ ಯವನಿಕಾ
ಮಾಯಾ ಜಗನ್ಮೋಹಿನೀ ।
ಬ್ರಹ್ಮೇಶಾದಿ-ಸುರವ್ರಜಸ್ಸದಯಿತಃ
ತ್ವದ್ದಾಸ-ದಾಸೀಗಣಃ
ಶ್ರೀರಿತ್ಯೇವ ಚ ನಾಮ ತೇ ಭಗವತಿ
ಬ್ರೂಮಃ ಕಥಂ ತ್ವಾಂ ವಯಮ್ ॥ ೧ ॥

ಯಸ್ಯಾಸ್ತೇ ಮಹಿಮಾನಮಾತ್ಮನ ಇವ
ತ್ವದ್ವಲ್ಲಭೋಽಪಿ ಪ್ರಭುಃ
ನಾಲಂ ಮಾತುಮಿಯತ್ತಯಾ ನಿರವಧಿಂ
ನಿತ್ಯಾನುಕೂಲಂ ಸ್ವತಃ ।
ತಾಂ ತ್ವಾಂ ದಾಸ ಇತಿ ಪ್ರಪನ್ನ ಇತಿ ಚ
ಸ್ತೋಷ್ಯಾಮ್ಯಹಂ ನಿರ್ಭಯೋ
ಲೋಕೈಕೇಶ್ವರಿ ಲೋಕನಾಥ-ದಯಿತೇ
ದಾನ್ತೇ ದಯಾಂ ತೇ ವಿದನ್ ॥ ೨ ॥

ಈಷತ್-ತ್ವತ್ಕರುಣಾ-ನಿರೀಕ್ಷಣ-ಸುಧಾ
ಸಂಧುಕ್ಷಣಾದ್ರಕ್ಷ್ಯತೇ
ನಷ್ಟಂ ಪ್ರಾಕ್ತದಲಾಭತಃ ತ್ರಿಭುವನಂ
ಸಂಪ್ರತ್ಯನಂತೋದಯಮ್ ।
ಶ್ರೇಯೋ ನ ಹ್ಯರವಿಂದ-ಲೋಚನ-ಮನಃ
ಕಾಂತಾ-ಪ್ರಸಾದಾದೃತೇ
ಸಂಸೃತ್ಯಕ್ಷರ-ವೈಷ್ಣವಾಧ್ವಸು ನೃಣಾಂ
ಸಂಭಾವ್ಯತೇ ಕರ್ಹಿಚಿತ್ ॥ ೩ ॥

## ಚತುಃಶ್ಲೋಕೀ

೧. ನಿನಗೆ ಕಾಂತನು ಪುರುಷೋತ್ತಮನು; ಹಾಸಿಗೆ ಮತ್ತು ಆಸನ ನಾಗ ರಾಜನಾದ ಆದಿಶೇಷ; ವಾಹನವೋ ವೇದಗಳಿಗೆ ಆತ್ಮನಾದ, ಪಕ್ಷಿಗಳಿಗೆ ಈಶ್ವರನಾದ ಗರುಡ; ತೆರೆಯೋ (ಯವನಿಕಾ) ಜಗತ್ತನ್ನೇ ಮರುಳು ಮಾಡುವ ಮಾಯೆ; ನಿನ್ನ ಊಳಿಗದವರು ಪತ್ನೀಸಮೇತರಾದ ಬ್ರಹ್ಮ, ಶಿವ ಮೊದಲಾದ ದೇವತೆಗಳ ಸಮೂಹಗಳು; ಇದರ ಮೇಲೆ ನಿನ್ನ ಹೆಸರೇ "ಶ್ರೀ" ಎಂದು; ಇಂತಹ ನಿನ್ನನ್ನು, ಅಮ್ಮ ಭಗವತಿ! ನಾವು ಹೇಗೆ ಸ್ತುತಿಸಬಲ್ಲೆವು?

೨. ಸರ್ವಜ್ಞನಾದ ಪ್ರಭುವು, ನಿನ್ನಿನಿಯನಾಗಿದ್ದರೂ, ತನ್ನ ಮಹಿಮೆಯನ್ನು ಹೇಗೋ ಹಾಗೆ ಎಲ್ಲೆ ಇಲ್ಲದಿರುವ, ಸ್ವತಃ ನಿತ್ಯಾನುಕೂಲವಾದ ನಿನ್ನ ಮಹಿಮೆಯನ್ನು ಇಷ್ಟೇ ಎಂದು ಅಳೆಯಲಾರನು; ಅಂತಹ ನಿನ್ನನ್ನು ಹೇ ಲೋಕೈಕೇಶ್ವರಿ, ಲೋಕದೊಡೆಯನ ಪ್ರಿಯಳೆ, ನಿನಗೆ ಶರಣಾಗತರ ಮೇಲಿರುವ ದಯೆಯನ್ನು ತಿಳಿದವನಾಗಿ, ನಾನು ನಿನ್ನ ದಾಸನೆಂದು, ಪ್ರಪನ್ನನೆಂದು ಭಯವಿಲ್ಲದೆ ಸ್ತೋತ್ರಮಾಡುತ್ತೇನೆ.

೩. ನಿನ್ನ ಕೃಪೆಯ ಕುಡಿನೋಟವೆಂಬ ಅಮೃತವಿಲ್ಲದೆ ಮೊದಲು ನಷ್ಟವಾಗಿದ್ದ ಮೂರು ಲೋಕಗಳು ಈಗ ಅನಂತವಾದ ಐಶ್ವರ್ಯವುಳ್ಳದ್ದಾಗಿ ರಕ್ಷಿಸಲ್ಪಡುತ್ತವೆ; ಏಕೆಂದರೆ ಅರವಿಂದಲೋಚನನ ಕಾಂತೆಯ ಅನುಗ್ರಹವಿಲ್ಲದಿದ್ದರೆ ಸಂಸಾರದಲ್ಲಾಗಲೀ, ಕೈವಲ್ಯದಲ್ಲಾಗಲೀ, ಪರಮಪದದ ಮಾರ್ಗದಲ್ಲಾಗಲೀ ಜನರಿಗೆ ಶ್ರೇಯಸ್ಸು ಎಂದಿಗೂ ಉಂಟಾಗುವುದಿಲ್ಲ.

ಶಾಂತಾನಂತ-ಮಹಾವಿಭೂತಿ ಪರಮಂ
ಯದ್ಬ್ರಹ್ಮರೂಪಂ ಹರೇಃ
ಮೂರ್ತಂ ಬ್ರಹ್ಮ ತತೋಽಪಿ ತತ್ಪ್ರಿಯತರಂ
ರೂಪಂ ಯದತ್ಯದ್ಭುತಮ್ ।
ಯಾನ್ಯನ್ಯಾನಿ ಯಥಾಸುಖಂ ವಿಹರತೋ
ರೂಪಾಣಿ ಸರ್ವಾಣಿ ತಾ-
ನ್ಯಾಹುಃ ಸ್ವೈರನುರೂಪ-ರೂಪ-ವಿಭವೈಃ
ಗಾಢೋಪಗೂಢಾನಿ ತೇ ॥ ೪ ॥

೪. ಶಾಂತವೂ, ಅನಂತವೂ, ಮಹಾವಿಭೂತಿಯುಕ್ತವೂ, ಅತ್ಯುತ್ಕೃಷ್ಟವೂ ಆದ ಹರಿಯ ಪರಬ್ರಹ್ಮಸ್ವರೂಪವೂ, ಅದಕ್ಕಿಂತಲೂ ಅವನಿಗೆ ಪ್ರಿಯತರವಾದ ಅತ್ಯದ್ಭುತವಾದ ಅವನ ಮೂರ್ತಬ್ರಹ್ಮಸ್ವರೂಪವೂ ಮತ್ತು ಯಥಾಸುಖವಾಗಿ ವಿಹರಿಸಲು ಅವನು ವಹಿಸಿದ ಇತರ ಬೇರೆ ಬೇರೆ ಯಾವ ರೂಪಗಳುಂಟೋ ಅವೆಲ್ಲವೂ ಅವನಿಗೆ ಅನುಗುಣವಾದ ನಿನ್ನ ರೂಪಗಳ ವಿಭವಗಳಿಂದ ಗಾಢವಾಗಿ ಸೇರಿವೆಯೆಂದು ಶಾಸ್ತ್ರಗಳು ಸಾರುತ್ತಿವೆ.

# ಶ್ರೀಸ್ತವಃ

ಐಶ್ವರ್ಯಂ ಯದಶೇಷಪುಂಸಿ ವಿದಿತಂ
ಸೌಂದರ್ಯ-ಲಾವಣ್ಯಯೋಃ
ರೂಪಂ ಯಚ್ಚ ಹಿ ಮಂಗಲಂ ಕಿಮಪಿ ಯತ್
ಲೋಕೇ ಸದಿತ್ಯುಚ್ಯತೇ ।
ತತ್ಸರ್ವಂ ತ್ವದಧೀನಮೇವ ಯದತಃ
ಶ್ರೀರಿತ್ಯಭೇದೇನ ವಾ
ಯದ್ವಾ ಶ್ರೀಮದಿತೀದೃಶೇನ ವಚಸಾ
ದೇವಿ ಪ್ರಥಾಮಶ್ನುತೇ ॥ ೧ ॥

ಲೋಕೇ ವನಸ್ಪತಿ-ಬೃಹಸ್ಪತಿ-ತಾರತಮ್ಯಂ
ಯಸ್ಯಾಃ ಪ್ರಸಾದ-ಪರಿಣಾಮಮುದಾಹರನ್ತಿ ।
ಸಾ ಭಾರತೀ ಭಗವತೀ ತು ಯದೀಯದಾಸೀ
ತಾಂ ದೇವದೇವ-ಮಹಿಷೀಂ ಶ್ರಿಯಮಾಶ್ರಯಾಮಃ ॥ ೨ ॥

ಯಸ್ಯಾಃ ಕಟಾಕ್ಷ-ವೀಕ್ಷಾ-ಕ್ಷಣ-ಲಕ್ಷಂ
ಲಕ್ಷಿತಾ ಮಹೇಶಾಃ ಸ್ಯುಃ ।
ಶ್ರೀರಂಗರಾಜ-ಮಹಿಷೀ ಸಾ ಮಾಮಪಿ
ವೀಕ್ಷತಾಂ ಲಕ್ಷ್ಮೀಃ ॥ ೩ ॥

೭, ೯, ೧೧

# ಶ್ರೀಸ್ತವ

೧. ಹೇ ದೇವಿ, ಎಲ್ಲಾ ಮನುಷ್ಯರಲ್ಲಿ ಕಂಡುಬರುವ ಐಶ್ವರ್ಯ, ಸೌಂದರ್ಯ ಮತ್ತು ಲಾವಣ್ಯಗಳ ಮಂಗಳವಾದ ರೂಪ ಮತ್ತು ಲೋಕದಲ್ಲಿ ಯಾವುದು "ಸತ್" (ಇರವು) ಎಂದು ಹೇಳಲ್ಪಡುತ್ತದೆಯೋ ಅದು— ಇವೆಲ್ಲವೂ ನಿನ್ನ ಅಧೀನವಾಗಿಯೇ ಇವೆ; ಆದುದರಿಂದ ಈ ವಸ್ತುಗಳು ನಿನ್ನಿಂದ ಬೇರೆಯಾಗದ "ಶ್ರೀ" ಎಂಬ ಹೆಸರಿನಿಂದಾಗಲೀ ಅಥವಾ "ಶ್ರೀಮತ್" (ಶ್ರೀಯುಕ್ತವಾದದು) ಎಂಬ ಹೆಸರಿನಿಂದಾಗಲೀ ಪ್ರಸಿದ್ಧಿಯನ್ನು ಹೊಂದಿವೆ.

೨. ಲೋಕದಲ್ಲಿ ವನಸ್ಪತಿ (ಜ್ಞಾನವಿಲ್ಲದ ಗಿಡ) ಬೃಹಸ್ಪತಿ (ಸರ್ವಜ್ಞ) ಎಂಬ ತಾರತಮ್ಯವು ಯಾರ ಪ್ರಸನ್ನತೆಯ ಪರಿಣಾಮದಿಂದ ಉಂಟಾಗುವುದೋ ಆ ಭಗವತಿಯಾದ ಸರಸ್ವತಿಯು ಯಾರ ದಾಸಿಯಾಗಿರುವಳೋ ಅಂತಹ ಸುರೇಶ್ವರನಾದ ಮಹಾವಿಷ್ಣುವಿನ ದಿವ್ಯಮಹಿಷಿಯಾದ ಶ್ರೀದೇವಿಯನ್ನು ನಾವು ಆಶ್ರಯಿಸುತ್ತೇವೆ.

೩. ಯಾವ ದೇವಿಯ ಕುಡಿನೋಟಕ್ಕೆ ಒಂದು ಕ್ಷಣವಾದರೂ ವಿಷಯವಾದರೆ ಎಲ್ಲರೂ ಮಹೇಶ್ವರರಾಗುವರೋ, ಅಂತಹ ಶ್ರೀರಂಗನಾಥನ ಮಹಿಷಿಯಾದ ಲಕ್ಷ್ಮಿಯು ತನ್ನ ಕಟಾಕ್ಷದಿಂದ ನನ್ನನ್ನೂ ಅವಲೋಕಿಸಿ ಅನುಗ್ರಹಿಸಲಿ.

# ಶ್ರೀಗುಣರತ್ನಕೋಶಃ

ತವ ಸ್ಪರ್ಶಾದೀಶಂ ಸ್ಪೃಶತಿ ಕಮಲೇ ಮಂಗಳಪದಂ
ತವೇದಂ ನೋಪಾಧೇರುಪನಿಪತಿತಂ ಶ್ರೀರಸಿ ಯತಃ ।
ಪ್ರಸೂನಂ ಪುಷ್ಯನ್ತೀಮಪಿ ಪರಿಮಳರ್ದ್ಧಿಂ ಜಿಗದಿಷುಃ
ನ ಚೈವಂತ್ವಾದೇವಂ ಸ್ವದತ ಇತಿ ಕಶ್ಚಿತ್ ಕವಯತೇ ॥ ೧ ॥

ಯುವತ್ವಾದೌ ತುಲ್ಯೇಽ
ಪ್ಯಪರವಶತಾಶತ್ರುಶಮನ-
ಸ್ಥಿರತ್ವಾದೀನ್ ಕೃತ್ವಾ
ಭಗವತಿ ಗುಣಾನ್ ಪುಂಸ್ತ್ವಸುಲಭಾನ್ ।
ತ್ವಯಿ ಸ್ತ್ರೀತ್ವೈಕಾನ್ತಾನ್
ಮ್ರದಿಮಪತಿಪಾರಾರ್ಥ್ಯಕರುಣಾ-
ಕ್ಷಮಾದೀನ್ ವಾ ಭೋಕ್ತುಂ
ಭವತಿ ಯುವಯೋರಾತ್ಮನಿ ಭಿದಾ ॥ ೨ ॥

ಪ್ರಣಮದನುವಿಧಿತ್ಸಾವಾಸನಾನಮ್ರಮುಗ್ರೇ
ಪ್ರಣಯಿಪರಿಚಿಚೀಷಾ ಕುಂಚಿತಂ ಪಾರ್ಶ್ವಕೇನ ।
ಕನಕನಿಕಷಚಂಚ್ಚಂಪಕಸ್ರಕ್ಸಮಾನ-
ಪ್ರವರಮಿದಮುದಾರಂ ವರ್ಷ್ಮ ವಾಚಾಮಭೂಮಿಃ ॥ ೩ ॥

# ಶ್ರೀಗುಣರತ್ನಕೋಶ

೧. ಹೇ ಕಮಲಾ, ನಿನ್ನ ಸ್ಪರ್ಶದ ದೆಶೆಯಿಂದ ಈಶ್ವರನಾದ ಶ್ರೀಮನ್ನಾರಾಯಣನನ್ನು "ಮಂಗಳ" ಶಬ್ದವು ಸೂಚಿಸುತ್ತದೆ; ಆದರೆ ನಿನಗೆ ಈ ಮಂಗಳಶಬ್ದವು ಯಾವ ಉಪಾಧಿಯಿಂದಲೂ ಪ್ರಾಪ್ತವಾದುದಲ್ಲ (ಎಂದರೆ ಸ್ವತಃ ಸಿದ್ಧವಾದುದು); ಏಕೆಂದರೆ ನೀನೇ "ಶ್ರೀ" (ಮಂಗಳ) ಆಗಿದ್ದೀಯೆ; ಪುಷ್ಪಕ್ಕೆ ಮಹತ್ವಕೊಡುವ ಪರಿಮಳಸಂಪತ್ತಿ ಬೇರೆ ಯಾವುದಾದರೂ ಒಂದು ಗುಣದಿಂದ ಉಂಟಾಗಿದೆ ಎಂದು ಯಾವ ಕವಿಯೂ ಹೇಳುವದಿಲ್ಲ.

೨. ಯೌವನ, ಆಕಾರ ಮುಂತಾದ ಗುಣಗಳು ನಿಮ್ಮಿಬ್ಬರಿಗೂ ಸಮಾನವಾಗಿದ್ದರೂ ನಿಮ್ಮ ಸ್ವರೂಪದಲ್ಲಿ (ಸ್ವಂತ ಇಷ್ಟದಿಂದ ಉಂಟಾದ) ಸ್ವಲ್ಪ ಭೇದವು ಕಂಡುಬರುತ್ತದೆ: ಸ್ವಾತಂತ್ರ್ಯ, ವಿರೋಧಿಪರಿಹಾರ, ಸ್ಥೈರ್ಯ ಮೊದಲಾದ ಪುರುಷಯೋಗ್ಯವಾದ ಗುಣಗಳನ್ನು ಭಗವಂತನಿಗೆ ಕೊಟ್ಟು, ನೀನು ಮೃದುತ್ವ, ಪತಿ–ಪಾರತಂತ್ರ್ಯ, ಕರುಣೆ, ಕ್ಷಮೆ ಮೊದಲಾದ ಸ್ತ್ರೀ ಸಹಜವಾದ ಗುಣಗಳನ್ನು ವಹಿಸಿಕೊಂಡಿರುತ್ತೀಯೆ. (ಈ ಗುಣ ವಿಭಾಗವು ಉಪಾಸಕರ ಅನುಸಂಧಾನಕ್ಕಾಗಿಯೂ, ದೇವಿಯ ಆನಂದಕ್ಕಾಗಿಯೂ ಎಂದು ಭಾವಿಸಬೇಕು.)

೩. ಹೇ ತಾಯಿ, ಪ್ರಣತರಾದವರನ್ನು ಅನುಗ್ರಹಿಸಬೇಕೆಂಬ ಸಂಕಲ್ಪದಿಂದ ಬಗ್ಗಿದ ತಲೆಯುಳ್ಳ ನಿನ್ನ ಉದಾರವಾದ ಶರೀರವು (ರಂಗನಾಯಕಿಯ ದಿವ್ಯ–ಮಂಗಳ–ವಿಗ್ರಹ) ನಿನ್ನ ಇನಿಯನಾದ ನಾರಾಯಣನನ್ನು ಸೇವಿಸಬೇಕೆಂಬ ಇಚ್ಛೆಯಿಂದ ಒಂದು ಕಡೆಯಿಂದ ಸ್ವಲ್ಪ ತಿರುಗಿದೆ; ಸ್ವರ್ಣ ರೇಖೆಯಂತೆ ಪ್ರಕಾಶವುಳ್ಳ ನಿನ್ನ ಶರೀರವು ಚಂಪಕಮಾಲೆಯಂತೆ ದಿವ್ಯ ಪರಿಮಳವನ್ನು ಹೊರಸೂಸುತ್ತಿದೆಯಮ್ಮ.

ಮಾತರ್ಮೈಥಿಲಿ ರಾಕ್ಷಸೀಸ್ತ್ವಯಿ ತದೈ-
ವಾದ್ರಾಪರಾಧಾಸ್ತ್ವಯಾ
ರಕ್ಷಂತ್ಯಾ ಪವನಾತ್ಮಜಾಲ್ಲಘುತರಾ
ರಾಮಸ್ಯ ಗೋಷ್ಠೀ ಕೃತಾ ।
ಕಾಕಂ ತಂ ಚ ವಿಭೀಷಣಂ ಶರಣಮಿ-
ತ್ಯುಕ್ತಿಕ್ಷಮೌ ರಕ್ಷತಃ
ಸಾ ನಃ ಸಾಂದ್ರಮಹಾಗಸಃ ಸುಖಯತು
ಕ್ಷಾಂತಿಸ್ತವಾಕಸ್ಮಿಕೀ ॥ ೪ ॥

ಪಿತೇವ ತ್ವತ್ಪ್ರೇಯಾನ್ ಜನನಿ ಪರಿಪೂರ್ಣಾಗಸಿ ಜನೇ
ಹಿತಸ್ರೋತೋವೃತ್ತ್ಯಾ ಭವತಿ ಚ ಕದಾಚಿತ್ ಕಲುಷಧೀಃ ।
ಕಿಮೇತತ್ ನಿರ್ದೋಷಃ ಕ ಇಹ ಜಗತೀತಿ ತ್ವಮುಚಿತೈಃ
ಉಪಾಯೈರ್ವಿಸ್ಮಾರ್ಯ ಸ್ವಜನಯಸಿ ಮಾತಾ ತದಸಿ ನಃ ॥ ೫ ॥

೨೯, ೩೪, ೩೭, ೫೦, ೫೨

೪. ಅಮ್ಮ ಮೈಥಿಲಿ, ಹೊಸಹೊಸದಾಗಿ ಅಪರಾಧವನ್ನು ಮಾಡುತ್ತಿದ್ದ ರಾಕ್ಷಸಿಯರನ್ನು ಹನುಮಂತನು ಕೊಲ್ಲಬೇಕೆಂದು ಇಚ್ಛಿಸಿದಾಗ, ನೀನು ಅವರನ್ನು ಕಾಪಾಡಿದ್ದು ರಾಮನ ಗೋಷ್ಠಿಯನ್ನೂ (ಸಹವಾಸವನ್ನು) ಕೂಡ ಲಘುವಾಗಿ ಮಾಡಿದೆ; ಏಕೆಂದರೆ, "ನೀನೇ ನನಗೆ ಶರಣು" ಎಂದು ಹೇಳಿದ ಮೇಲೆ ಕಾಕಾಸುರನನ್ನೂ ವಿಭೀಷಣನನ್ನೂ ರಾಮನು ಕಾಪಾಡಿದನು; ನಿನ್ನ ಅಂತಹ ಆಕಸ್ಮಿಕ ಕ್ಷಮೆಯು ಮಹಾಪರಾಧಿಗಳಾದ ನಮ್ಮನ್ನು ಸುಖಿಗಳನ್ನಾಗಿ ಮಾಡಲಿ.

೫. ಹೇ ತಾಯಿ, ನಿನ್ನ ಪ್ರಿಯನಾದ ನಾರಾಯಣನು ಯಾವುದಾದರೂ ಒಂದು ಸಮಯದಲ್ಲಿ (ತಂದೆಯು ಹಾಗೆ ಹಿತವನ್ನು ಮಾಡಬೇಕೆಂಬ ಉದ್ದೇಶದಿಂದ) ಅಪರಾಧಿಯ ವಿಷಯದಲ್ಲಿ ಕೋಪಗೊಳ್ಳುತ್ತಾನೆ; ಆಗ ನೀನು, "ಇದೇನು? ಈ ಜಗತ್ತಿನಲ್ಲಿ ನಿರ್ದೋಷಿಗಳು ಯಾರಿದ್ದಾರೆ?" ಎಂಬ ಉಚಿತವಾದ ಮಾತುಗಳಿಂದಲೂ, ಉಪಾಯಗಳಿಂದಲೂ ನಮ್ಮ ದೋಷಗಳನ್ನು ಅವನು ಮರೆಯುವ ಹಾಗೆ ಮಾಡಿ ನಮ್ಮನ್ನು ನಿನ್ನವಳನ್ನಾಗಿ ಮಾಡಿರುತ್ತೀಯೆ; ಆದುದರಿಂದ ನೀನು ನಮಗೆ (ನಿಜವಾಗಿ) ತಾಯಿಯಾಗಿದ್ದೀಯೆ.

# ಶ್ರೀಸ್ತುತಿಃ

ಜಾತಾಕಾಂಕ್ಷಾ ಜನನಿ ಯುವಯೋರೇಕಸೇವಾಧಿಕಾರೇ
ಮಾಯಾಲೀಢಂ ವಿಭವಮಖಿಲಂ ಮನ್ಯಮಾನಾಸ್ತೃಣಾಯ ।
ಪ್ರೀತ್ಯೈ ವಿಷ್ಣೋಸ್ತವ ಚ ಕೃತಿನಃ ಪ್ರೀತಿಮಂತೋ ಭಜಂತೇ
ವೇಲಾಭಂಗಪ್ರಶಮನಫಲಂ ವೈದಿಕಂ ಧರ್ಮಸೇತುಮ್ ॥ ೧ ॥

ಸೇವೇ ದೇವಿ ತ್ರಿದಶಮಹಿಳಾಮೌಳಿಮಾಲಾರ್ಚಿತಂ ತೇ
ಸಿದ್ಧಿಕ್ಷೇತ್ರಂ ಶಮಿತವಿಪದಾಂ ಸಂಪದಾಂ ಪಾದಪದ್ಮಮ್ ।
ಯಸ್ಮಿನ್ ಈಷನ್ನಮಿತಶಿರಸೋ ಯಾಪಯಿತ್ವಾ ಶರೀರಂ
ವರ್ತಿಷ್ಯಂತೇ ವಿತಮಸಿ ಪದೇ ವಾಸುದೇವಸ್ಯ ಧನ್ಯಾಃ ॥ ೨ ॥

ಸಂಪದ್ಯಂತೇ ಭವಭಯತಮೋ-
ಭಾನವಃ ತ್ವತ್ಪ್ರಸಾದಾತ್
ಭಾವಾಃ ಸರ್ವೇ ಭಗವತಿ ಹರೌ
ಭಕ್ತಿಮುದ್ವೇಲಯಂತಃ ।
ಯಾಚೇ ಕಿಂ ತ್ವಾಮಹಮಿಹ ಯತಃ
ಶೀತಲೋದಾರಶೀಲಾ
ಭೂಯೋ ಭೂಯೋ ದಿಶಸಿ ಮಹತಾಂ
ಮಂಗಳಾನ್ ಪ್ರಬಂಧಾನ್ ॥ ೩ ॥

ಮಾತಾ ದೇವಿ ತ್ವಮಸಿ ಭಗವಾನ್ ವಾಸುದೇವಃ ಪಿತಾ ಮೇ
ಜಾತಃ ಸೋಽಹಂ ಜನನಿ ಯುವಯೋರೇಕಲಕ್ಷ್ಯಂ ದಯಾಯಾಃ ।
ದತ್ತೋ ಯುಷ್ಮತ್ಪರಿಜನತಯಾ ದೇಶಿಕೈರಪ್ಯತಸ್ತ್ವಂ
ಕಿಂ ತೇ ಭೂಯಃ ಪ್ರಿಯಮಿತಿ ಕಿಲ ಸ್ಮೇರವಕ್ತ್ರಾ ವಿಭಾಸಿ ॥ ೪ ॥

ಕಲ್ಯಾಣಾನಾಮವಿಕಲನಿಧಿಃ ಕಾಪಿ ಕಾರುಣ್ಯಸೀಮಾ
ನಿತ್ಯಾಮೋದಾ ನಿಗಮವಚಸಾಂ ಮೌಳಿಮಂದಾರಮಾಲಾ ।
ಸಂಪದ್ ದಿವ್ಯಾ ಮಧುವಿಜಯಿನಃ ಸನ್ನಿಧತ್ತಾಂ ಸದಾ ಮೇ
ಸೈಷಾ ದೇವೀ ಸಕಲಭುವನಪ್ರಾರ್ಥನಾಕಾಮಧೇನುಃ ॥ ೫ ॥

೧೯, ೨೦, ೨೨–೨೪

# ಶ್ರೀಸ್ತುತಿ

೧. ಹೇ ತಾಯಿ, ನಿಮ್ಮಿಬ್ಬರ ಏಕಾಂತಸೇವೆಯಲ್ಲಿ ಇಚ್ಛೆಯುಳ್ಳ ಭಕ್ತರು ಮಾಯಾಮಯವಾದ ಅಖಿಲೈಶ್ವರ್ಯಗಳನ್ನುಹುಲ್ಲಿನಂತೆ ಎಣಿಸುತ್ತಾರೆ; ನಿನ್ನ ಮತ್ತು ವಿಷ್ಣುವಿನ ಪ್ರೀತಿಗೋಸ್ಕರ ಶಾಸ್ತ್ರಮರ್ಯಾದೆಯನ್ನು ಅತಿಕ್ರಮಿಸಿದ ದೋಷವನ್ನು ಹೋಗಲಾಡಿಸುವಂತಹ ವೈದಿಕಧರ್ಮವನ್ನು ಇವರು ಆಚರಿಸುತ್ತಾರೆ.

೨. ಹೇ ದೇವಿ, ದೇವಮಹಿಳೆಯರ ಶಿರಸ್ಸುಗಳೆಂಬ ಮಾಲೆಗಳಿಂದ ಅರ್ಚಿಸಲ್ಪಟ್ಟ, ಯಾವ ವಿಪತ್ತುಗಳೂ ಇಲ್ಲದ ಸಂಪತ್ತಿನ ಸಿದ್ಧಿಕ್ಷೇತ್ರವಾದ ನಿನ್ನ ಪಾದಪದ್ಮವನ್ನು ಸೇವಿಸುತ್ತೇನೆ; ನಿನ್ನ ಚರಣಕಮಲಕ್ಕೆ ಸ್ವಲ್ಪವಾದರೂ ನಮಿಸುವವರು ಧನ್ಯರು! ಏಕೆಂದರೆ ಇವರು ಶರೀರವನ್ನು ಬಿಟ್ಟಮೇಲೆ ತಮಸ್ಸಿಲ್ಲದ (ಶುದ್ಧಸತ್ತ್ವರೂಪವಾದ) ವಿಷ್ಣುವಿನ ಪರಮಪದದಲ್ಲಿ ವಾಸಿಸುತ್ತಾರೆ.

೩. ಸಂಸಾರಭಯವೆಂಬ ಕತ್ತಲೆಗೆ ಸೂರ್ಯನಂತೆ ಇರುವ ನನ್ನ ಸಮಸ್ತ ಭಾವನೆಗಳೂ ನಿನ್ನ ಕೃಪೆಯಿಂದ ಭಗವಂತನಾದ ಹರಿಯಲ್ಲಿ ಭಕ್ತಿಯನ್ನು ಉಕ್ಕಿಸಿ ಪ್ರವಹಿಸುತ್ತಿವೆ; ಶೀತಳೋದಾರ–ಸ್ವಭಾವವುಳ್ಳವಳಾದ ನೀನು ಪುನಃ ಪುನಃ ನನಗೆ ಮಂಗಳಗಳ ರಾಶಿಯನ್ನು ಅನುಗ್ರಹಿಸುತ್ತಿದ್ದೀಯೆ; ಹೀಗಿರುವಾಗ ನಿನ್ನಿಂದ ನಾನು ಏನು ಯಾಚಿಸಲಿ?

೪. ಹೇ ದೇವಿ, ನೀನೇ ನನ್ನ ತಾಯಿ, ಭಗವಂತನಾದ ವಾಸುದೇವನು ನನ್ನ ತಂದೆ; ಅಂತಹ ನಾನು ನಿಮ್ಮಿಬ್ಬರ ದಯೆಗೆ ಏಕಲಕ್ಷ್ಯವಾಗಿ (ಮುಖ್ಯ ಗುರಿಯಾಗಿ) ಇದ್ದೇನಮ್ಮ; ಇಷ್ಟೇ ಅಲ್ಲದೆ ನಿಮ್ಮ ಸೇವೆಗಾಗಿ (ನನ್ನ) ಆಚಾರ್ಯರು ನನ್ನನ್ನು ನಿಮ್ಮ ಪಾದಗಳಲ್ಲಿ ಸಮರ್ಪಿಸಿರುತ್ತಾರೆ. ಆದಾಗ್ಯೂ "ನಿನಗೆ ಪುನಃ ಯಾವುದು ಪ್ರಿಯವು?" ಎಂದು ಕೇಳುವಹಾಗೆ ಕಿರುನಗೆಯಿಂದ ಕೂಡಿದ ಮುಖದಿಂದ ಪ್ರಕಾಶಿಸುತ್ತೀಯೆ.

೫. ಲಕ್ಷ್ಮೀದೇವಿಯು ಸಮಸ್ತಕಲ್ಯಾಣಗಳ ಅಕ್ಷಯವಾದ ನಿಧಿ ಮತ್ತು ಕಾರುಣ್ಯದ ಕೊನೆಯ ಎಲ್ಲೆ; ಅವಳು ನಿತ್ಯಾನಂದ ಸ್ವರೂಪಳು, ಮಂದಾರ ಪುಷ್ಪದ ಮಾಲೆಯಂತೆ ವೇದಗಳ ಶಿರಸ್ಸುಗಳನ್ನು (ಎಂದರೆ ಉಪನಿಷತ್ತುಗಳನ್ನು) ಅಲಂಕರಿಸುವವಳು; ಅವಳು ಮಧುಸೂದನನ ದಿವ್ಯವಾದ ಸಂಪತ್ತು ಮತ್ತು ಸಮಸ್ತಲೋಕದ ಜನರ ಪ್ರಾರ್ಥನೆಗೆ ಕಾಮಧೇನುವಿನಂತೆ ಇರುವವಳು; ಅಂತಹ ದೇವಿಯು ಯಾವಾಗಲೂ ನನ್ನ ಹೃದಯದಲ್ಲಿ ನೆಲಸಲಿ.

# ಸರಸ್ವತೀರಹಸ್ಯೋಪನಿಷತ್

ಯಾ ವೇದಾಂತಾರ್ಥತತ್ತ್ವೈಕಸ್ವರೂಪಾ ಪರಮಾರ್ಥತಃ ।
ನಾಮರೂಪಾತ್ಮನಾ ವ್ಯಕ್ತಾ ಸಾ ಮಾಂ ಪಾತು ಸರಸ್ವತೀ ॥ ೧ ॥

ಯಾ ಸಾಂಗೋಪಾಂಗವೇದೇಷು ಚತುರ್ಷ್ವೇಕೈವ ಗೀಯತೇ ।
ಅದ್ವೈತಾ ಬ್ರಹ್ಮಣಃ ಶಕ್ತಿಃ ಸಾ ಮಾಂ ಪಾತು ಸರಸ್ವತೀ ॥ ೨ ॥

ಯಾ ವರ್ಣಪದವಾಕ್ಯಾರ್ಥಸ್ವರೂಪೇಣೈವ ವರ್ತತೇ ।
ಅನಾದಿನಿಧನಾನಂತಾ ಸಾ ಮಾಂ ಪಾತು ಸರಸ್ವತೀ ॥ ೩ ॥

ಯಾಂ ವಿದಿತ್ವಾಖಿಲಂ ಬಂಧಂ ನಿರ್ಮಥ್ಯಾಖಿಲವರ್ತ್ಮನಾ ।
ಯೋಗೀ ಯಾತಿ ಪರಂ ಸ್ಥಾನಂ ಸಾ ಮಾಂ ಪಾತು ಸರಸ್ವತೀ ॥ ೪ ॥

ನಮಸ್ತೇ ಶಾರದೇ ದೇವಿ ಕಾಶ್ಮೀರಪುರವಾಸಿನಿ ।
ತ್ವಾಮಹಂ ಪ್ರಾರ್ಥಯೇ ನಿತ್ಯಂ ವಿದ್ಯಾದಾನಂ ಚ ದೇಹಿ ಮೇ ॥ ೫ ॥

ಅಕ್ಷಸೂತ್ರಾಂಕುಶಧರಾ ಪಾಶಪುಸ್ತಕಧಾರಿಣೀ ।
ಮುಕ್ತಾಹಾರಸಮಾಯುಕ್ತಾ ವಾಚಿ ತಿಷ್ಠತು ಮೇ ಸದಾ ॥ ೬ ॥

ಯಾ ಶ್ರದ್ಧಾ ಧಾರಣಾ ಮೇಧಾ ವಾಗ್ದೇವೀ ವಿಧಿವಲ್ಲಭಾ ।
ಭಕ್ತಜಿಹ್ವಾಗ್ರಸದನಾ ಶಮಾದಿಗುಣದಾಯಿನೀ ॥ ೭ ॥

# ಸರಸ್ವತೀರಹಸ್ಯೋಪನಿಷತ್

೧. ಯಾರು ನಿಜವಾಗಿ ವೇದಾಂತಾರ್ಥ–ತತ್ತ್ವದ ಏಕಸ್ವರೂಪಳೋ, ಯಾರು ಇಲ್ಲಿ ನಾಮರೂಪಗಳಿಂದ ವ್ಯಕ್ತಳಾಗಿರುವಳೋ ಆ ಸರಸ್ವತೀ ನನ್ನನ್ನು ರಕ್ಷಿಸಲಿ.

೨. ಯಾವ ಒಬ್ಬಳು ಅಂಗ ಮತ್ತು ಉಪಾಂಗಗಳಿಂದ ಕೂಡಿದ ನಾಲ್ಕು ವೇದಗಳಲ್ಲಿ ಸ್ತುತಿಸಲ್ಪಟ್ಟಿರುವಳೋ, ಯಾರು ಅದ್ವಿತೀಯಳೋ ಮತ್ತು ಬ್ರಹ್ಮನ ಶಕ್ತಿಯೋ ಆ ಸರಸ್ವತಿಯು ನನ್ನನ್ನು ರಕ್ಷಿಸಲಿ.

೩. ಯಾರು ವರ್ಣ, ಪದ, ವಾಕ್ಯ ಮತ್ತು ಅರ್ಥ ಇವುಗಳ ರೂಪದಿಂದ ಇರುವಳೋ, ಯಾರಿಗೆ ಆದಿ, ನಾಶ, ಅಂತ್ಯಗಳು ಇಲ್ಲವೋ ಆ ಸರಸ್ವತೀ ನನ್ನನ್ನು ರಕ್ಷಿಸಲಿ.

೪. ಯೋಗಿಯು ಯಾರನ್ನು ಅರಿತು ಬಂಧಗಳನ್ನೆಲ್ಲಾ ನಾಶಮಾಡಿ ಮುಕ್ತಿ ಪಥದ ಮೂಲಕ ಪರಮಪದವನ್ನು ಪಡೆಯುವನೋ ಆ ಸರಸ್ವತೀ ನನ್ನನ್ನು ರಕ್ಷಿಸಲಿ.

೫. ಹೇ ದೇವಿ, ಕಾಶ್ಮೀರಪುರವಾಸಿನಿಯಾದ ಶಾರದೆ, ನಿನಗೆ ನಮಸ್ಕಾರ; ನಾನು ಯಾವಾಗಲೂ ನಿನ್ನನ್ನು ಪ್ರಾರ್ಥಿಸುತ್ತೇನೆ; ನನಗೆ ವಿದ್ಯಾದಾನ ವನ್ನು ಮಾಡು.

೬–೭. ಜಪಮಾಲೆ, ಅಂಕುಶ, ಪಾಶ, ಪುಸ್ತಕ ಇವುಗಳನ್ನು ಹಿಡಿದಿರು ವವಳೂ, ಕೊರಳಿನಲ್ಲಿ ಮುತ್ತಿನ ಹಾರವನ್ನು ಧರಿಸಿರುವವಳೂ, ಶ್ರದ್ಧೆ ಧಾರಣ ಮೇಧಸ್ಸು ಇವುಗಳ ಸ್ವರೂಪಳೂ, ವಾಗ್ದೇವಿಯೂ, ಬ್ರಹ್ಮನ ಪ್ರಿಯಳೂ, ಭಕ್ತರ ನಾಲಗೆಯ ತುದಿಯಲ್ಲಿ ವಾಸಿಸುವವಳೂ, ಶಮ–ದಮಾದಿ ಗುಣಗಳನ್ನು ಅನುಗ್ರಹಿಸುವವಳೂ ಆದ ಸರಸ್ವತೀ ನನ್ನ ವಾಕ್ಕಿನಲ್ಲಿ ನೆಲಸಲಿ.

# ಬ್ರಹ್ಮಕೃತಸರಸ್ವತೀಸ್ತೋತ್ರಮ್

ಐಂ ಐಂ ಐಂ ಇಷ್ಟಮಂತ್ರೇ ಕಮಲಭವ-
ಮುಖಾಂಭೋಜಭೂತಿಸ್ವರೂಪೇ
ರೂಪಾರೂಪಪ್ರಕಾಶೇ ಸಕಲಗುಣ-
ಮಯೇ ನಿರ್ಗುಣೇ ನಿರ್ವಿಕಾರೇ ।
ನ ಸ್ಥೂಲೇ ನೈವ ಸೂಕ್ಷ್ಮೇಽಪ್ಯವಿದಿತ-
ವಿಭವೇ ನಾಪಿ ವಿಜ್ಞಾನತತ್ತ್ವೇ
ವಿಶ್ವೇ ವಿಶ್ವಾಂತರಾತ್ಮೇ ಸುರವರನಮಿತೇ
ನಿಷ್ಕಲೇ ನಿತ್ಯಶುದ್ಧೇ ॥ ೧ ॥

ಹ್ರೀಂ ಹ್ರೀಂ ಹ್ರೀಂ ಜಾಪತುಷ್ಟೇ ಹಿಮರುಚಿ-
ಮುಕುಟೇ ವಲ್ಲಕೀವ್ಯಗ್ರಹಸ್ತೇ
ಮಾತರ್ಮಾತರ್ನಮಸ್ತೇ ದಹ ದಹ
ಜಡತಾಂ ದೇಹಿ ಬುದ್ಧಿಂ ಪ್ರಶಾಂತಾಮ್ ।
ವಿದ್ಯೇ ವೇದಾಂತವೇದ್ಯೇ ಪರಿಣತ-
ಪಠಿತೇ ಮೋಕ್ಷದೇ ಮುಕ್ತಿಮಾರ್ಗೇ
ಮಾರ್ಗಾತೀತಸ್ವರೂಪೇ ಭವ ಮಮ ವರದಾ
ಶಾರದೇ ಶುಭ್ರಹಾರೇ ॥ ೨ ॥

# ಬ್ರಹ್ಮಕೃತಸರಸ್ವತೀಸ್ತೋತ್ರ

೧. ಐಂ ಐಂ ಐಂ ಎಂಬ ಬೀಜಾಕ್ಷರವನ್ನೇ ಇಷ್ಟಮಂತ್ರವಾಗಿ ಉಳ್ಳ ಮತ್ತು ಬ್ರಹ್ಮನ ಮುಖಕಮಲಕ್ಕೆ ಐಶ್ವರ್ಯಸ್ವರೂಪಳಾಗಿರುವ ಹೇ ಮಾತೇ, ನೀನು ಸಾಕಾರಳಾಗಿಯೂ ನಿರಾಕಾರಳಾಗಿಯೂ ಕಾಣಿಸಿಕೊಳ್ಳುವೆ; ನೀನು ಸಕಲಗುಣಪರಿಪೂರ್ಣಳೂ ನಿಜ, ನಿರ್ಗುಣನಿರ್ವಿಕಾರಳೂ ನಿಜ; ನೀನು ಸ್ಥೂಲಳೂ ಅಲ್ಲ; ಸೂಕ್ಷ್ಮಳೂ ಅಲ್ಲ; ನಿನ್ನ ವೈಭವವನ್ನು ಅರಿಯುವುದು ಅಸಾಧ್ಯ; ನೀನು ವಿಜ್ಞಾನತತ್ತ್ವಾತೀತಳು, ಈ ವಿಶ್ವವೆಲ್ಲವೂ ನೀನೇ, ಈ ವಿಶ್ವಕ್ಕೆ ಅಂತರಾತ್ಮಸ್ವರೂಪಳಾದವಳೂ ನೀನೇ, ಸುರೇಶ್ವರನ ನಮಸ್ಕಾರಕ್ಕೆ ಪಾತ್ರಳಾದವಳೂ ನೀನೇ; ನೀನು ಅಖಂಡಳು ಮತ್ತು ನಿತ್ಯಶುದ್ಧಳು.

೨. ಹೇ ಮಾತೆ, ಹ್ರೀಂ ಹ್ರೀಂ ಹ್ರೀಂ ಎಂಬ ಬೀಜಾಕ್ಷರದಿಂದ ನೀನು ಸಂತುಷ್ಟಳಾಗುವೆ; ಹಿಮದಂತೆ ಶುಭ್ರವಾದುದು ನಿನ್ನ ಕಿರೀಟ; ವೀಣೆಯನ್ನು ನುಡಿಸುವುದರಲ್ಲಿ ವ್ಯಗ್ರವಾದ ಕೈಯುಳ್ಳವಳು ನೀನು; ನೀನು ವಿದ್ಯಾಸ್ವರೂಪಳು, ವೇದಾಂತವೇದ್ಯಳು; ಪರಮಜ್ಞಾನಿಗಳು ನಿನ್ನ ಮಾಹಾತ್ಮ್ಯೆಯನ್ನು ಹೊಗಳುತ್ತಾರೆ; ನೀನೇ ಮೋಕ್ಷವನ್ನು ನೀಡುವವಳು ಮತ್ತು ಮೋಕ್ಷಕ್ಕೆ ಮಾರ್ಗಸ್ವರೂಪಳು; ನೀನು ಮುಕ್ತಿಮಾರ್ಗಕ್ಕೂ ಅತೀತವಾದ ಸ್ವರೂಪವುಳ್ಳವಳು; ಶುಭ್ರವಾದ ಹಾರವನ್ನು ಧರಿಸಿರುವ ಹೇ ಶಾರದೇ, ನನಗೆ ವರವನ್ನು ನೀಡುವವಳಾಗು; ಹೇ ತಾಯಿ, ತಾಯಿ, ನಿನಗೆ ನಮಸ್ಕಾರ— ನನ್ನ ಜಡತ್ವವನ್ನು ದಹಿಸಿ ಪ್ರಶಾಂತವಾದ ಬುದ್ಧಿಯನ್ನು ಕರುಣಿಸು.

# ಯಾಜ್ಞವಲ್ಕ್ಯಕೃತಸರಸ್ವತೀಸ್ತೋತ್ರಮ್

ಬ್ರಹ್ಮಸ್ವರೂಪಾ ಪರಮಾ ಜ್ಯೋತಿರೂಪಾ ಸನಾತನೀ ।
ಸರ್ವವಿದ್ಯಾಧಿದೇವೀ ಯಾ ತಸ್ಯೈ ವಾಣ್ಯೈ ನಮೋ ನಮಃ ॥ ೧ ॥

ಯಯಾ ವಿನಾ ಜಗತ್ಸರ್ವಂ ಶಶ್ವಜ್ಜೀವನ್ಮೃತಂ ಭವೇತ್ ।
ಜ್ಞಾನಾಧಿದೇವೀ ಯಾ ತಸ್ಯೈ ಸರಸ್ವತ್ಯೈ ನಮೋ ನಮಃ ॥ ೨ ॥

ಯಯಾ ವಿನಾ ಜಗತ್ಸರ್ವಂ ಮೂಕಮುನ್ಮತ್ತವತ್ಸದಾ ।
ಯಾ ದೇವೀ ವಾಗಧಿಷ್ಠಾತ್ರೀ ತಸ್ಯೈ ವಾಣ್ಯೈ ನಮೋ ನಮಃ ॥ ೩ ॥

# ಯಾಜ್ಞವಲ್ಕ್ಯಕೃತಸರಸ್ವತೀಸ್ತೋತ್ರ

೧. ಯಾವ ದೇವಿಯು ಸಾಕ್ಷಾತ್ ಪರಬ್ರಹ್ಮಸ್ವರೂಪಳೋ, ಪರಮಾತ್ಮ ಸ್ವರೂಪಳೋ, ಸನಾತನಳೋ ಅಂತಹ ಸಮಸ್ತವಿದ್ಯಾಧಿದೇವತೆಯಾದ ಸರಸ್ವತಿಗೆ ನಮಸ್ಕಾರ.

೨. ಯಾರು ಇಲ್ಲದಿದ್ದರೆ ಜಗತ್ತೆಲ್ಲವೂ ಜೀವನ್ಮೃತವಾಗಿ ಹೋಗುತ್ತದೆಯೋ ಅಂತಹ ಜ್ಞಾನಾಧಿದೇವತೆಯಾದ ಸರಸ್ವತಿಗೆ ನಮಸ್ಕಾರ.

೩. ಯಾರು ಇಲ್ಲದಿದ್ದರೆ ಜಗತ್ತೆಲ್ಲವೂ ಮೂಕವಾದಂತೆ, ಉನ್ಮತ್ತವಾದಂತೆ ಕಾಣುವುದೋ ಅಂತಹ ವಾಕ್ಕಿಗೆ ಅಧಿಷ್ಠಾತ್ರಿಯಾದ ಸರಸ್ವತಿಗೆ ನಮಸ್ಕಾರ.

# ಸರಸ್ವತೀಸ್ತೋತ್ರಮ್

೧

ಯಾ ಕುಂದೇಂದುತುಷಾರಹಾರಧವಳಾ ಯಾ ಶುಭ್ರವಸ್ತ್ರಾನ್ವಿತಾ ।
ಯಾ ವೀಣಾವರದಂಡಮಂಡಿತಕರಾ ಯಾ ಶ್ವೇತಪದ್ಮಾಸನಾ ।
ಯಾ ಬ್ರಹ್ಮಾಚ್ಯುತಶಂಕರಪ್ರಭೃತಿಭಿಃ ದೇವೈಃ ಸದಾ ಪೂಜಿತಾ ।
ಸಾ ಮಾಂ ಪಾತು ಸರಸ್ವತೀ ಭಗವತೀ ನಿಃಶೇಷಜಾಡ್ಯಾಪಹಾ ॥ ೧ ॥

ಸಾ ಮೇ ವಸತು ಜಿಹ್ವಾಯಾಂ ವೀಣಾಪುಸ್ತಕಧಾರಿಣೀ ।
ಮುರಾರಿವಲ್ಲಭಾ ದೇವೀ ಸರ್ವಶುಕ್ಲಾ ಸರಸ್ವತೀ ॥ ೨ ॥

ಸರಸ್ವತಿ ಮಹಾಭಾಗೇ ವಿದ್ಯೇ ಕಮಲಲೋಚನೇ ।
ವಿಶ್ವರೂಪೇ ವಿಶಾಲಾಕ್ಷಿ ವಿದ್ಯಾಂ ದೇಹಿ ನಮೋಽಸ್ತು ತೇ ॥ ೩ ॥

# ಸರಸ್ವತೀಸ್ತೋತ್ರ

## ೧

೧. ಯಾವಳು ಕುಂದಪುಷ್ಪ, ಚಂದ್ರ, ಹಿಮ, ಮುತ್ತಿನಮಾಲೆ ಇವುಗಳಂತೆ ಬಿಳುಪಾಗಿರುವಳೋ, ಯಾವಳು ಶುಭ್ರವಾದ ವಸ್ತ್ರವನ್ನು ಧರಿಸಿರುವಳೋ, ಯಾವಳ ಹಸ್ತವು ವೀಣೆಯ ವರದಂಡದಿಂದ ಅಲಂಕೃತವಾಗಿದೆಯೋ, ಯಾವಳು ಶ್ವೇತಪದ್ಮದ ಮೇಲೆ ಕುಳಿತಿರುವಳೋ, ಯಾವಳು ಬ್ರಹ್ಮ, ವಿಷ್ಣು, ಶಿವ ಮೊದಲಾದ ದೇವತೆಗಳಿಂದ ಸದಾ ಪೂಜಿತಳೋ, ಯಾವಳು ಜಡತನವನ್ನು ನಿಃಶೇಷವಾಗಿ ನಾಶಮಾಡುವಳೋ ಅಂತಹ ಭಗವತಿಯಾದ ಸರಸ್ವತಿಯು ನನ್ನನ್ನು ಕಾಪಾಡಲಿ.

೨. ವೀಣೆ ಮತ್ತು ಪುಸ್ತಕಗಳನ್ನು ಹಿಡಿದಿರುವವಳೂ, ನಾರಾಯಣಪ್ರಿಯಳೂ, ಸರ್ವಶುಭ್ರಳೂ ಆದ ಸರಸ್ವತೀದೇವಿ ನನ್ನ ಜಿಹ್ವೆಯಲ್ಲಿ ವಾಸಿಸಲಿ.

೩. ಹೇ ಮಹಾಭಾಗೆ, ವಿದ್ಯಾಸ್ವರೂಪಿಣಿ, ಕಮಲಲೋಚನೆ, ವಿಶ್ವರೂಪೆ, ವಿಶಾಲಾಕ್ಷಿ, ನನಗೆ ವಿದ್ಯೆಯನ್ನು ಅನುಗ್ರಹಿಸು; ನಿನಗೆ ನಮಸ್ಕಾರ.

# ಸರಸ್ವತೀಸ್ತೋತ್ರಮ್

೨

ಶ್ವೇತಪದ್ಮಾಸನಾ ದೇವೀ ಶ್ವೇತಪುಷ್ಪೋಪಶೋಭಿತಾ ।
ಶ್ವೇತಾಂಬರಧರಾ ನಿತ್ಯಾ ಶ್ವೇತಗಂಧಾನುಲೇಪನಾ ॥ ೧ ॥

ಶ್ವೇತಾಕ್ಷಸೂತ್ರಹಸ್ತಾ ಚ ಶ್ವೇತಚಂದನಚರ್ಚಿತಾ ।
ಶ್ವೇತವೀಣಾಧರಾ ಶುಭ್ರಾ ಶ್ವೇತಾಲಂಕಾರಭೂಷಿತಾ ॥ ೨ ॥

ವಂದಿತಾ ಸಿದ್ಧಗಂಧರ್ವೈರರ್ಚಿತಾ ಸುರದಾನವೈಃ ।
ಪೂಜಿತಾ ಮುನಿಭಿಃ ಸರ್ವೈರ್ಋಷಿಭಿಃ ಸ್ತೂಯತೇ ಸದಾ ॥ ೩ ॥

ಸ್ತೋತ್ರೇಣಾನೇನ ತಾಂ ದೇವೀಂ ಜಗದ್ಧಾತ್ರೀಂ ಸರಸ್ವತೀಮ್ ।
ಯೇ ಸ್ಮರಂತಿ ತ್ರಿಸಂಧ್ಯಾಯಾಂ ಸರ್ವಾಂ ವಿದ್ಯಾಂ ಲಭಂತೇ ತೇ ॥ ೪ ॥

# ಸರಸ್ವತೀಸ್ತೋತ್ರ

## ೨

೧. ಶಾಶ್ವತಳಾದ ಸರಸ್ವತೀದೇವಿಯು ಬಿಳಿಯ ಕಮಲದ ಮೇಲೆ ಕುಳಿತು, ಬಿಳಿಯ ಪುಷ್ಪಗಳಿಂದ ಅಲಂಕೃತಳಾಗಿ, ಬಿಳಿಯ ವಸ್ತ್ರವನ್ನು ಧರಿಸಿ, ಬಿಳಿಯ ಸುಗಂಧದ್ರವ್ಯವನ್ನು ಲೇಪಿಸಿಕೊಂಡಿರುವಳು.

೨. ಆಕೆಯ ಕೈಯಲ್ಲಿ ಬಿಳಿದಾದ ಜಪಸರವಿದೆ; ಬಿಳಿಯ ಶ್ರೀಗಂಧವನ್ನು ಲೇಪಿಸಿಕೊಂಡಿದ್ದಾಳೆ; ಬಿಳಿದಾದ ವೀಣೆಯನ್ನು ಹಿಡಿದಿದ್ದಾಳೆ; ಬಿಳುಪಾದ ಆ ದೇವಿ ಬಿಳಿಯ ಅಲಂಕಾರಗಳಿಂದ ಭೂಷಿತಳಾಗಿದ್ದಾಳೆ.

೩. ಸರಸ್ವತಿಯು ಸಿದ್ಧಗಂಧರ್ವರಿಂದ ವಂದಿತಳಾದವಳು, ಸುರದಾನವರಿಂದ ಅರ್ಚಿತಳಾದವಳು; ಮತ್ತು ಸಕಲ ಮುನಿಗಳಿಂದ ಪೂಜಿತಳಾದವಳು; ಆಕೆಯನ್ನು ಋಷಿಗಳು ಸದಾ ಸ್ತುತಿಸುತ್ತಾರೆ.

೪. ಜಗದ್ಧಾತ್ರಿಯಾದ ಸರಸ್ವತೀದೇವಿಯನ್ನು ತ್ರಿಸಂಧ್ಯೆಗಳಲ್ಲಿಯೂ (ಬೆಳಗ್ಗೆ, ಮಧ್ಯಾಹ್ನ, ಸಂಜೆ) ಯಾರು ಸ್ಮರಿಸುವರೋ ಅವರು ಸರ್ವವಿದ್ಯೆಗಳನ್ನೂ ಪಡೆಯುವರು.

# ಶ್ರೀರಾಮಕೃಷ್ಣಸ್ತೋತ್ರಮ್

ಓಂ ಹ್ರೀಂ ಋತಂ ತ್ವಮಚಲೋ ಗುಣಜಿದ್ಗುಣೇಢ್ಯಃ
ನಕ್ತಂ ದಿವಂ ಸಕರುಣಂ ತವ ಪಾದಪದ್ಮಮ್ ।
ಮೋಹಂಕಷಂ ಬಹುಕೃತಂ ನ ಭಜೇ ಯತೋಽಹಂ
ತಸ್ಮಾತ್ ತ್ವಮೇವ ಶರಣಂ ಮಮ ದೀನಬಂಧೋ ॥ ೧ ॥

ಭಕ್ತಿರ್ಭಗಶ್ಚ ಭಜನಂ ಭವಭೇದಕಾರಿ
ಗಚ್ಛಂತ್ಯಲಂ ಸುವಿಪುಲಂ ಗಮನಾಯ ತತ್ತ್ವಮ್ ।
ವಕ್ತ್ರೋದ್ಧೃತಂ ತು ಹೃದಿಮೇ ನ ಚ ಭಾತಿ ಕಿಂಚಿತ್
ತಸ್ಮಾತ್ ತ್ವಮೇವ ಶರಣಂ ಮಮ ದೀನಬಂಧೋ ॥ ೨ ॥

ತೇಜಸ್ತರಂತಿ ತರಸಾ ತ್ವಯಿ ತೃಪ್ತತೃಷ್ಣಾಃ
ರಾಗೇ ಕೃತೇ ಋತಪಥೇ ತ್ವಯಿ ರಾಮಕೃಷ್ಣೇ ।
ಮರ್ತ್ಯಾಮೃತಂ ತವ ಪದಂ ಮರಣೋರ್ಮಿನಾಶಂ
ತಸ್ಮಾತ್ ತ್ವಮೇವ ಶರಣಂ ಮಮ ದೀನಬಂಧೋ ॥ ೩ ॥

ಕೃತ್ಯಂ ಕರೋತಿ ಕಲುಷಂ ಕುಹಕಾಂತಕಾರಿ
ಷ್ಣಾಂತಂ ಶಿವಂ ಸುವಿಮಲಂ ತವ ನಾಮ ನಾಥ ।
ಯಸ್ಮಾದಹಂ ತ್ವಶರಣೋ ಜಗದೇಕಗಮ್ಯ
ತಸ್ಮಾತ್ತ್ವಮೇವ ಶರಣಂ ಮಮ ದೀನಬಂಧೋ ॥ ೪ ॥

ಓಂ ಸ್ಥಾಪಕಾಯ ಚ ಧರ್ಮಸ್ಯ ಸರ್ವಧರ್ಮಸ್ವರೂಪಿಣೇ ।
ಅವತಾರವರಿಷ್ಠಾಯ ರಾಮಕೃಷ್ಣಾಯ ತೇ ನಮಃ ॥

# ಶ್ರೀರಾಮಕೃಷ್ಣಸ್ತೋತ್ರ

೧. ಓಂ ಹ್ರೀಂ ನೀನು ಸತ್ಯಸ್ವರೂಪನು, ಅಚಲನು, ತ್ರಿಗುಣಗಳನ್ನು ಜಯಿಸಿದವನು ಮತ್ತು ಕಲ್ಯಾಣಗುಣಗಳ ದ್ವಾರಾ ಪ್ರಶಂಸನೀಯನು; ಮೋಹನಾಶಕವೂ, ಪೂಜನೀಯವೂ ಆದ ನಿನ್ನ ಅಡಿದಾವರೆಗಳನ್ನು ನಾನು ಹಗಲೂ ರಾತ್ರಿಯೂ ವ್ಯಾಕುಲದಿಂದ ಭಜಿಸಲಿಲ್ಲ; ಆದುದರಿಂದ ಹೇ ದೀನಬಂಧು, ನೀನೇ ನನಗೆ ಶರಣು.

೨. ಸಂಸಾರನಾಶಕವಾದ ಭಕ್ತಿ, ಜ್ಞಾನೈಶ್ವರ್ಯಾದಿಗಳು ಮತ್ತು ಭಜನೆ ಇವು ಮಹಾತತ್ತ್ವವನ್ನು ಹೊಂದಲು ಸಾಕು; ಆದರೆ ಇದು ನನ್ನ ಬರಿಯ ಮಾತಾಗಿ ಹೃದಯದಲ್ಲಿ ಸ್ವಲ್ಪವೂ ಹೊಳೆಯದೆ ಇರುವುದರಿಂದ, ಹೇ ದೀನಬಂಧು, ನೀನೇ ನನಗೆ ಶರಣು.

೩. ಹೇ ರಾಮಕೃಷ್ಣ, ಋತಪಥನಾದ ನಿನ್ನಲ್ಲಿ ಅನುರಾಗವು ಉಂಟಾದರೆ, ಮನುಷ್ಯರು ನಿನ್ನನ್ನು ಹೊಂದಿ, ಪೂರ್ಣಕಾಮರಾಗಿ ಶೀಘ್ರವಾಗಿ ರಜೋಗುಣವನ್ನು ದಾಟುವರು; ಮರಣವೆಂಬ ಅಲೆಗಳನ್ನು ನಾಶಮಾಡುವ ನಿನ್ನ ಚರಣಗಳು ಮರ್ತ್ಯಲೋಕದಲ್ಲಿ ಅಮೃತವಾಗಿರುವುವು. ಆದುದರಿಂದ ಹೇ ದೀನಬಂಧು, ನೀನೇ ನನಗೆ ಶರಣು.

೪. ಹೇ ನಾಥ, ಮಾಯೆಯನ್ನು ನಾಶಮಾಡುವುದೂ, ಮಂಗಳವೂ, ವಿಮಲವೂ, 'ಷ್ಣ' ಎಂಬ ಅಕ್ಷರದಿಂದ ಅಂತ್ಯವಾಗುವ ನಿನ್ನ ಹೆಸರು ಪಾಪವನ್ನು ಕೂಡ ಪುಣ್ಯವನ್ನಾಗಿ ಮಾಡುವುದು. ಜಗತ್ತಿಗೆಲ್ಲ ಏಕಮಾತ್ರ ಗುರಿಯಾದ ದೀನಬಂಧು, ನನಗೆ ಯಾವ ಆಶ್ರಯವೂ ಇಲ್ಲದಿರುವುದರಿಂದ ನೀನೇ ನನಗೆ ಶರಣು.

ಧರ್ಮಸಂಸ್ಥಾಪಕನೂ, ಸರ್ವಧರ್ಮಸ್ವರೂಪಿಯೂ, ಅವತಾರಶ್ರೇಷ್ಠನೂ ಆದ ಶ್ರೀರಾಮಕೃಷ್ಣನಿಗೆ ನಮಸ್ಕಾರಗಳು.

# ಶ್ರೀಸಾರದಾಷ್ಟಕಮ್

ಪ್ರಕೃತಿಂ ಪರಮಾಮಭಯಾಂ ವರದಾಂ
ನರರೂಪಧರಾಂ ಜನತಾಪಹರಾಮ್ ।
ಶರಣಾಗತಸೇವಕತೋಷಕರೀಂ
ಪ್ರಣಮಾಮಿ ಪರಾಂ ಜನನೀಂ ಜಗತಾಮ್ ॥ ೧ ॥

ಗುಣಹೀನಸುತಾನಪರಾಧಯುತಾನ್
ಕೃಪಯಾऽದ್ಯ ಸಮುದ್ಧರ ಮೋಹಗತಾನ್ ।
ತರಣೀಂ ಭವಸಾಗರಪಾರಕರೀಂ
ಪ್ರಣಮಾಮಿ ಪರಾಂ ಜನನೀಂ ಜಗತಾಮ್ ॥ ೨ ॥

ವಿಷಯಂ ಕುಸುಮಂ ಪರಿಹೃತ್ಯ ಸದಾ
ಚರಣಾಂಬುರುಹಾಮೃತಶಾಂತಿಸುಧಾಮ್ ।
ಪಿಬ ಭೃಂಗಮನೋ ಭವರೋಗಹರಾಂ
ಪ್ರಣಮಾಮಿ ಪರಾಂ ಜನನೀಂ ಜಗತಾಮ್ ॥ ೩ ॥

ಕೃಪಾಂ ಕುರು ಮಹಾದೇವಿ ಸುತೇಷು ಪ್ರಣತೇಷು ಚ ।
ಚರಣಾಶ್ರಯದಾನೇನ ಕೃಪಾಮಯಿ ನಮೋಽಸ್ತು ತೇ ॥ ೪ ॥

ಲಜ್ಜಾಪಟಾವೃತೇ ನಿತ್ಯಂ ಸಾರದೇ ಜ್ಞಾನದಾಯಿಕೇ ।
ಪಾಪೇಭ್ಯೋ ನಃ ಸದಾ ರಕ್ಷ ಕೃಪಾಮಯಿ ನಮೋಽಸ್ತು ತೇ ॥ ೫ ॥

ರಾಮಕೃಷ್ಣಗತಪ್ರಾಣಾಂ ತನ್ನಾಮಶ್ರವಣಪ್ರಿಯಾಮ್ ।
ತದ್ಭಾವರಂಜಿತಾಕಾರಾಂ ಪ್ರಣಮಾಮಿ ಮುಹುರ್ಮುಹುಃ ॥ ೬ ॥

ಪವಿತ್ರಂ ಚರಿತಂ ಯಸ್ಯಾಃ ಪವಿತ್ರಂ ಜೀವನಂ ತಥಾ ।
ಪವಿತ್ರತಾಸ್ವರೂಪಿಣ್ಯೈ ತಸ್ಯೈ ಕುರ್ಮೋ ನಮೋ ನಮಃ ॥ ೭ ॥

# ಶ್ರೀಸಾರದಾಷ್ಟಕ

೧. ಪರಮಪ್ರಕೃತಿಸ್ವರೂಪಳೂ, ಅಭಯವನ್ನು ನೀಡುವವಳೂ, ವರಗಳನ್ನು ಕೊಡುವವಳೂ, ನರರೂಪವನ್ನು ಧರಿಸಿರುವವಳೂ, ಜನರ ದುಃಖವನ್ನು ಪರಿಹರಿಸುವವಳೂ, ಶರಣಾಗತರಾದ ಭಕ್ತರನ್ನು ಸಂತೋಷಪಡಿಸುವವಳೂ ಆಗಿರುವ ಜಗಜ್ಜನನಿಯನ್ನು ನಮಿಸುತ್ತೇನೆ.

೨. ಗುಣಹೀನರೂ, ಅಪರಾಧಿಗಳೂ, ಮೋಹವಶರೂ ಆದ (ನಿನ್ನ) ಮಕ್ಕಳನ್ನು, ಇಂದೇ ಕೃಪೆಮಾಡಿ ಉದ್ಧರಿಸು; ಸಂಸಾರಸಾಗರವನ್ನು ದಾಟಿಸುವ ನಾವೆಯಂತಿರುವ ಜಗಜ್ಜನನಿಯನ್ನು ನಮಿಸುತ್ತೇನೆ.

೩. ಎಲೈ ಮನಸ್ಸೆಂಬ ದುಂಬಿಯೇ, ವಿಷಯವೆಂಬ ಹೂವನ್ನು ಸರ್ವದಾ ತ್ಯಜಿಸಿ, ಭವರೋಗವನ್ನು ನಿವಾರಿಸುವ, ಶ್ರೀಮಾತೆಯ ಚರಣಕಮಲಗಳೆಂಬ ಅಮರವಾದ ಶಾಂತಿ–ಸುಧೆಯನ್ನು ಸೇವಿಸು; ಜಗಜ್ಜನನಿಯನ್ನು ನಾನು ನಮಿಸುತ್ತೇನೆ.

೪. ಹೇ ಮಹಾದೇವಿ, ನಿನ್ನನ್ನು ನಮಸ್ಕರಿಸುವ ಮಕ್ಕಳಿಗೆ ನಿನ್ನ ಚರಣಗಳಲ್ಲಿ ಆಶ್ರಯಕೊಟ್ಟು ಕೃಪೆಮಾಡು; ಹೇ ಕೃಪಾಮಯಿ, ನಿನಗೆ ನಮಸ್ಕಾರ.

೫. ಲಜ್ಜಾಸ್ವಭಾವವುಳ್ಳವಳೂ, ಜ್ಞಾನವನ್ನು ಕೊಡುವವಳೂ ಆದ ಶ್ರೀಸಾರದೆ, ನಮ್ಮನ್ನು ಪಾಪಗಳಿಂದ ಯಾವಾಗಲೂ ರಕ್ಷಿಸು; ಹೇ ಕೃಪಾಮಯಿ, ನಿನಗೆ ನಮಸ್ಕಾರ.

೬. ಶ್ರೀರಾಮಕೃಷ್ಣರಲ್ಲಿ ಯಾರ ಪ್ರಾಣವು ಸೇರಿರುವುದೋ, ಶ್ರೀರಾಮಕೃಷ್ಣರ ನಾಮಶ್ರವಣವು ಯಾರಿಗೆ ಪ್ರಿಯವಾದುದೋ, ಶ್ರೀರಾಮಕೃಷ್ಣರ ದಿವ್ಯಭಾವಗಳಿಂದ ಯಾರ ರೂಪವು ರಂಜಿಸುವುದೋ, ಆ ಜಗಜ್ಜನನಿಯನ್ನು ಪುನಃ ಪುನಃ ನಮಸ್ಕರಿಸುತ್ತೇನೆ.

೭. ಯಾರ ಶೀಲವು ಪವಿತ್ರವಾದುದೋ, ಹಾಗೆಯೇ ಯಾರ ಜೀವನವು (ಕೂಡ) ಪವಿತ್ರವಾದುದೋ, ಪವಿತ್ರತೆಯ ಸ್ವರೂಪಿಣಿಯಾದ ಆ (ಶ್ರೀಸಾರದೆಗೆ) ಪುನಃ ಪುನಃ ನಮಸ್ಕರಿಸುತ್ತೇನೆ.

ದೇವೀಂ ಪ್ರಸನ್ನಾಂ ಪ್ರಣತಾರ್ತಿಹಂತ್ರೀಂ
ಯೋಗೀಂದ್ರಪೂಜ್ಯಾಂ ಯುಗಧರ್ಮಪಾತ್ರೀಮ್ ।
ತಾಂ ಸಾರದಾಂ ಭಕ್ತಿವಿಜ್ಞಾನದಾತ್ರೀಂ
ದಯಾಸ್ವರೂಪಾಂ ಪ್ರಣಮಾಮಿ ನಿತ್ಯಮ್ ॥ ೮ ॥

ಸ್ನೇಹೇನ ಬಧ್ನಾಸಿ ಮನೋಽಸ್ಮದೀಯಂ
ದೋಷಾನಶೇಷಾನ್ ಸಗುಣೀಕರೋಷಿ ।
ಅಹೇತುನಾ ನೋ ದಯಸೇ ಸದೋಷಾನ್
ಸ್ವಾಂಕೇ ಗೃಹೀತ್ವಾ ಯದಿದಂ ವಿಚಿತ್ರಮ್ ॥ ೯ ॥

ಪ್ರಸೀದ ಮಾತರ್ವಿನಯೇನ ಯಾಚೇ
ನಿತ್ಯಂ ಭವ ಸ್ನೇಹವತೀ ಸುತೇಷು ।
ಪ್ರೇಮೈಕಬಿಂದುಂ ಚಿರದಗ್ಧಚಿತ್ತೇ
ವಿಷಿಂಚ ಚಿತ್ತಂ ಕುರು ನಃ ಸುಶಾಂತಮ್ ॥ ೧೦ ॥

ಜನನೀಂ ಸಾರದಾಂ ದೇವೀಂ
ರಾಮಕೃಷ್ಣಂ ಜಗದ್ಗುರುಮ್ ।
ಪಾದಪದ್ಮೇ ತಯೋಃ ಶ್ರಿತ್ವಾ
ಪ್ರಣಮಾಮಿ ಮುಹುರ್ಮುಹುಃ ॥ ೧೧ ॥

೮. ಪ್ರಸನ್ನಳೂ, ಶರಣಾಗತರಾದವರ ದುಃಖವನ್ನು ನಾಶಮಾಡುವವಳೂ, ಯೋಗೀಂದ್ರರಿಂದ ಪೂಜಿಸಲ್ಪಡುವವಳೂ, ಯುಗಧರ್ಮವನ್ನು ರಕ್ಷಿಸುವವಳೂ, ಭಕ್ತಿ ಮತ್ತು ವಿಜ್ಞಾನಗಳನ್ನು ಕೊಡುವವಳೂ, ದಯಾಸ್ವರೂಪಳೂ ಆಗಿರುವ ಆ ಶ್ರೀಸಾರದಾದೇವಿಯನ್ನು ನಿತ್ಯವೂ ನಮಿಸುತ್ತೇನೆ.

೯. ನಮ್ಮ ಮನಸ್ಸನ್ನು ಪ್ರೀತಿಯಿಂದ ಬಂಧಿಸಿರುವೆ; ನಮ್ಮ ದೋಷಗಳನ್ನು ನಿಶ್ಶೇಷವಾಗಿ ನಿರ್ಮೂಲಮಾಡಿ ನಮ್ಮನ್ನು ಗುಣವಂತರನ್ನಾಗಿ ಮಾಡಿರುವೆ; ದೋಷವಂತರಾದ ನಮಗೆ ನಿನ್ನ ಮಡಿಲಲ್ಲಿ ಆಶ್ರಯಕೊಟ್ಟು ಅಹೇತುಕದಯೆಯನ್ನು ತೋರಿಸಿದ್ದೀಯೆ. ಇದು ವಿಚಿತ್ರ!

೧೦. ಎಲೈ ತಾಯಿಯೇ, ನಮ್ಮ ಮೇಲೆ ಪ್ರಸನ್ನಳಾಗು ಎಂದು ವಿನಯಪೂರ್ವಕವಾಗಿ ಬೇಡುತ್ತೇನೆ; ಮಕ್ಕಳ ಮೇಲೆ ಯಾವಾಗಲೂ ಸ್ನೇಹವುಳ್ಳವಳಾಗು; ಚಿರಕಾಲದಿಂದ ಬೆಂದು ಬಳಲಿದ ನಮ್ಮ ಚಿತ್ತದಲ್ಲಿ ಒಂದು ಪ್ರೇಮಬಿಂದುವನ್ನು ಚಿಮುಕಿಸಿ, ನಮ್ಮ ಚಿತ್ತವನ್ನು ಶಾಂತಗೊಳಿಸು.

೧೧. ಜನನಿಯಾದ ಶ್ರೀಸಾರದಾದೇವಿ ಮತ್ತು ಜಗದ್ಗುರುವಾದ ಶ್ರೀರಾಮಕೃಷ್ಣ—ಅವರ ಚರಣಕಮಲಗಳನ್ನು ಆಶ್ರಯಿಸಿ, ಪುನಃ ಪುನಃ ನಮಸ್ಕರಿಸುತ್ತೇನೆ.

# ಮೂರ್ತಮಹೇಶ್ವರಸ್ತೋತ್ರಮ್

ಮೂರ್ತಮಹೇಶ್ವರಮುಜ್ಜ್ವಲಭಾಸ್ಕರ-
ಮಿಷ್ಟಮಮರನರವಂದ್ಯಮ್ ।
ವಂದೇ ವೇದತನುಮುಜ್ಝಿತಗರ್ಹಿತ-
ಕಾಂಚನಕಾಮಿನೀಬಂಧವಮ್ ॥ ೧ ॥

ಕೋಟಿಭಾನುಕರದೀಪ್ತಸಿಂಹಮಹೋ
ಕಟಿತಟಕೌಪೀನವಂತಮ್ ।
ಅಭೀರಭೀಹುಂಕಾರನಾದಿತದಿಙ್ಮುಖ-
ಪ್ರಚಂಡತಾಂಡವನೃತ್ಯಮ್ ॥ ೨ ॥

ಭುಕ್ತಿಮುಕ್ತಿಕೃಪಾಕಟಾಕ್ಷಾಪೇಕ್ಷಣ-
ಮಘದಲವಿದಲನದಕ್ಷಮ್ ।
ಬಾಲಚಂದ್ರಧರಮಿಂದುವಂದ್ಯಮಿಹ
ನೌಮಿ ಗುರುವಿವೇಕಾನಂದಮ್ ॥ ೩ ॥

# ಮೂರ್ತಮಹೇಶ್ವರಸ್ತೋತ್ರ

## (ಶ್ರೀವಿವೇಕಾನಂದಸ್ತೋತ್ರ)

೧. ಸೂರ್ಯನಂತೆ ಉಜ್ಜ್ವಲಿಸುತ್ತಿರುವ, ದೇವತೆಗಳಿಂದಲೂ ಮನುಷ್ಯರಿಂದಲೂ ವಂದ್ಯನಾದ, ಕಾಮಕಾಂಚನಗಳ ಕುತ್ಸಿತವಾದ ಬಂಧವನ್ನು ತೊರೆದ, ವೇದಮಯನಾದ, ನರರೂಪದಲ್ಲಿ ಅವತೀರ್ಣನಾದ ನನ್ನ ಇಷ್ಟದೇವತೆ ಮಹಾದೇವನನ್ನು ವಂದಿಸುತ್ತೇನೆ.

೨. ಕೋಟಿಸೂರ್ಯಕಿರಣಗಳಿಂದ ಉಜ್ಜ್ವಲಿಸುತ್ತಿರುವ ಪುರುಷಸಿಂಹನಾದ, ಕಟಿಪ್ರದೇಶದಲ್ಲಿ ಕೌಪೀನವನ್ನು ಧರಿಸಿದ, "ಅಭೀಃ ಅಭೀಃ" (ಹೆದರದಿರಿ, ಹೆದರದಿರಿ!) ಎಂಬ ಹುಂಕಾರದಿಂದ ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನು ಉಂಟುಮಾಡಿ ಪ್ರಚಂಡತಾಂಡವವನ್ನು ಆಡುತ್ತಿರುವ–

೩. ಭುಕ್ತಿ-ಮುಕ್ತಿಗಳನ್ನು ಕೃಪಾಕಟಾಕ್ಷದಿಂದಲೇ ಅನುಗ್ರಹಿಸುವ, ಪಾಪರಾಶಿಯನ್ನು ನಾಶಮಾಡುವ ಸಾಮರ್ಥ್ಯವುಳ್ಳ, ಶಶಿಶೇಖರನಾದ (ಸಾಕ್ಷಾತ್ ಶಿವನೇ ಆದ), ಇಂದುವಿನಿಂದ* ವಂದಿತನಾದ ಗುರು ವಿವೇಕಾನಂದನನ್ನು ನಮಸ್ಕರಿಸುತ್ತೇನೆ.

---

*ಸ್ತೋತ್ರಕರ್ತನ ಸಂಕೇತನಾಮ.

# ಪರಾಪೂಜಾ

ಪೂರ್ಣಸ್ಯಾವಾಹನಂ ಕುತ್ರ ಸರ್ವಾಧಾರಸ್ಯ ಚಾಸನಮ್ ।
ಸ್ವಚ್ಛಸ್ಯ ಪಾದ್ಯಮರ್ಘ್ಯಂ ಚ ಶುದ್ಧಸ್ಯಾಚಮನಂ ಕುತಃ ॥ ೧ ॥

ನಿರ್ಮಲಸ್ಯ ಕುತಃ ಸ್ನಾನಂ ವಸ್ತ್ರಂ ವಿಶ್ವೋದರಸ್ಯ ಚ ।
ನಿರಾಲಂಬಸ್ಯೋಪವೀತಂ ಪುಷ್ಪಂ ನಿರ್ವಾಸನಸ್ಯ ಚ ॥ ೨ ॥

ನಿರ್ಲೇಪಸ್ಯ ಕುತೋ ಗಂಧೋ ರಮ್ಯಸ್ಯಾಭರಣಂ ಕುತಃ ।
ನಿತ್ಯತೃಪ್ತಸ್ಯ ನೈವೇದ್ಯಸ್ತಾಂಬೂಲಂ ಚ ಕುತೋ ವಿಭೋಃ ॥ ೩ ॥

ಪ್ರದಕ್ಷಿಣಾ ಹ್ಯನಂತಸ್ಯ ಹ್ಯದ್ವಯಸ್ಯ ಕುತೋ ನತಿಃ ।
ವೇದವಾಕ್ಯೈರವೇದ್ಯಸ್ಯ ಕುತಃ ಸ್ತೋತ್ರಂ ವಿಧೀಯತೇ ॥ ೪ ॥

ಸ್ವಯಂ ಪ್ರಕಾಶಮಾನಸ್ಯ ಕುತೋ ನೀರಾಜನಂ ವಿಭೋಃ ।
ಅಂತರ್ಬಹಿಶ್ಚ ಪೂರ್ಣಸ್ಯ ಕಥಂ ಉದ್ವಾಸನಂ ಭವೇತ್ ॥ ೫ ॥

ಏವಮೇವ ಪರಾ ಪೂಜಾ ಸರ್ವಾವಸ್ಥಾಸು ಸರ್ವದಾ ।
ಏಕಬುದ್ಧ್ಯಾ ತು ದೇವೇಶೇ ವಿಧೇಯಾ ಬ್ರಹ್ಮವಿತ್ತಮೈಃ ॥ ೬ ॥

# ಪರಾಪೂಜೆ

೧. ಪೂರ್ಣನಾಗಿರುವವನನ್ನು ಆವಾಹನೆಮಾಡುವುದೆಲ್ಲಿ? ಸರ್ವಕ್ಕೂ ಆಧಾರ ಭೂತನಾಗಿರುವವನಿಗೆ ಆಸನವನ್ನು ಹಾಕುವುದೆಲ್ಲಿ? ಸ್ವಚ್ಛನಾಗಿರುವವನಿಗೆ ಪಾದ್ಯವನ್ನು ಮತ್ತು ಅರ್ಘ್ಯವನ್ನು ಕೊಡುವುದೆಂತು? ಶುದ್ಧನಾಗಿರುವವನಿಗೆ ಆಚಮನವನ್ನು ಕೊಡುವುದೆಂತು?

೨. ನಿರ್ಮಲನಾದವನಿಗೆ ಸ್ನಾನವೆಲ್ಲಿಯದು? ವಿಶ್ವವನ್ನೇ ಉದರದಲ್ಲಿ ಧರಿಸಿರುವವನಿಗೆ ವಸ್ತ್ರವೆಲ್ಲಿಯದು? ನಿರಾಲಂಬನಾದವನಿಗೆ ಉಪವೀತದಿಂದೇನು? ನಿರ್ಗಂಧನಾಗಿರುವವನಿಗೆ ಪುಷ್ಪದಿಂದೇನು?

೩. ನಿರ್ಲೇಪನಾಗಿರುವವನಿಗೆ ಗಂಧವನ್ನು ಲೇಪಿಸುವುದೆಂತು? ಯಾರು ಸೌಂದರ್ಯವೇ ಆಗಿರುವನೋ ಅವನಿಗೆ ಆಭರಣದಿಂದೇನು ಪ್ರಯೋಜನ? ನಿತ್ಯತೃಪ್ತನಾದ ವಿಭುವಿಗೆ ನೈವೇದ್ಯ-ತಾಂಬೂಲಗಳನ್ನು ಕೊಡುವುದೆಂತು?

೪. ಅನಂತನಾಗಿರುವವನನ್ನು ಪ್ರದಕ್ಷಿಣೆ ಮಾಡುವುದೆಂತು? ಅದ್ವಯನಿಗೆ ನಮಸ್ಕರಿಸುವುದೆಂತು? ವೇದವಾಕ್ಯಗಳಿಂದಲೂ ಯಾವನು ಅಜ್ಞೇಯನೋ ಅಂತಹವನನ್ನು ಸ್ತುತಿಸುವದೆಂತು?

೫. ಸ್ವಯಂಪ್ರಕಾಶನಾದವನಿಗೆ ಮಂಗಳಾರತಿ ಎತ್ತುವುದೆಂತು? ಒಳಗೆ ಹೊರಗೆ ಪೂರ್ಣನಾಗಿರುವವನನ್ನು ಪೂಜೆಗೆ ಪ್ರಾರಂಭಿಸುವುದು ಹೇಗೆ?

೬. ಈ ಪ್ರಕಾರ ಸರ್ವದಾ ಎಲ್ಲಾ ಅವಸ್ಥೆಗಳಲ್ಲೂ ಶ್ರೇಷ್ಠರಾದ ಬ್ರಹ್ಮಜ್ಞಾನಿಗಳು ಏಕಬುದ್ಧಿಯಿಂದ ದೇವೇಶನಲ್ಲಿ ಪರಾಪೂಜೆಯನ್ನು ಮಾಡಬೇಕು.

# ದಕ್ಷಿಣಾಮೂರ್ತಿಸ್ತೋತ್ರಮ್

ವಿಶ್ವಂ ದರ್ಪಣದೃಶ್ಯಮಾನನಗರೀ-
ತುಲ್ಯಂ ನಿಜಾಂತರ್ಗತಂ
ಪಶ್ಯನ್ನಾತ್ಮನಿ ಮಾಯಯಾ ಬಹಿರಿವೋ-
ದ್ಭೂತಂ ಯಥಾ ನಿದ್ರಯಾ ।
ಯಸ್ಸಾಕ್ಷಾತ್ಕುರುತೇ ಪ್ರಬೋಧಸಮಯೇ
ಸ್ವಾತ್ಮಾನಮೇವಾದ್ವಯಂ
ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ
ಶ್ರೀದಕ್ಷಿಣಾಮೂರ್ತಯೇ ॥ ೧ ॥

ಬೀಜಸ್ಯಾಂತರಿವಾಂಕುರೋ ಜಗದಿದಂ
ಪ್ರಾಙ್ನಿರ್ವಿಕಲ್ಪಂ ಪುನ-
ರ್ಮಾಯಾಕಲ್ಪಿತದೇಶಕಾಲಕಲನಾ-
ವೈಚಿತ್ರ್ಯಚಿತ್ರೀಕೃತಮ್ ।
ಮಾಯಾವೀವ ವಿಜೃಂಭಯತ್ಯಪಿ ಮಹಾ-
ಯೋಗೀವ ಯಃ ಸ್ವೇಚ್ಛಯಾ
ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ
ಶ್ರೀದಕ್ಷಿಣಾಮೂರ್ತಯೇ ॥ ೨ ॥

ಯಸ್ಯೈವ ಸ್ಫುರಣಂ ಸದಾತ್ಮಕಮಸತ್-
ಕಲ್ಪಾರ್ಥಕಂ ಭಾಸತೇ
ಸಾಕ್ಷಾತ್ತತ್ತ್ವಮಸೀತಿ ವೇದವಚಸಾ
ಯೋ ಬೋಧಯತ್ಯಾಶ್ರಿತಾನ್ ।
ಯತ್ಸಾಕ್ಷಾತ್ಕರಣಾದ್ಭವೇನ್ನ ಪುನರಾ-
ವೃತ್ತಿರ್ಭವಾಂಭೋನಿಧೌ
ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ
ಶ್ರೀದಕ್ಷಿಣಾಮೂರ್ತಯೇ ॥ ೩ ॥

# ದಕ್ಷಿಣಾಮೂರ್ತಿಸ್ತೋತ್ರ

೧. ಸ್ವಪ್ನದ ದೆಶೆಯಿಂದ ಆಂತರಿಕ ವಸ್ತುವು ಹೊರಗಡೆ ಕಾಣುವಂತೆ ಮಾಯೆಯ ಮುಖಾಂತರ ಎಲ್ಲವೂ ಹೊರಗಡೆ ವ್ಯಕ್ತವಾದಂತೆ ಕಾಣಲ್ಪಟ್ಟರೂ, ತನ್ನಲ್ಲಿಯೇ ಅಂತರ್ಗತವಾದ ವಿಶ್ವವನ್ನು ಯಾವನು-ಕನ್ನಡಿಯಲ್ಲಿ ಕಾಣುವ ನಗರದಂತೆ-ತನ್ನಲ್ಲಿಯೇ ನೋಡುವನೋ ಮತ್ತು ಪ್ರಬೋಧಕಾಲದಲ್ಲಿ ತನ್ನ ಅದ್ವಯವಾದ ಸ್ವರೂಪವನ್ನು ಯಾವನು ಸಾಕ್ಷಾತ್ತಾಗಿ ತಿಳಿಯುವನೋ ಅಂತಹ ಶ್ರೀಗುರುರೂಪಧಾರಿಯಾದ ಶ್ರೀದಕ್ಷಿಣಾಮೂರ್ತಿಗೆ ನಮಸ್ಕಾರ.

೨. ಬೀಜದಲ್ಲಿ ಮೊಳೆ (ಅವ್ಯಕ್ತವಾಗಿ) ಇರುವಹಾಗೆ (ಸೃಷ್ಟಿಗೆ) ಪೂರ್ವದಲ್ಲಿ (ನಾಮರೂಪಗಳಿಲ್ಲದೆ) ನಿರ್ವಿಕಲ್ಪವಾಗಿದ್ದು ಪುನಃ (ಸೃಷ್ಟಿಕಾಲದಲ್ಲಿ) ಮಾಯೆಯಿಂದ ಕಲ್ಪಿತವಾದ ದೇಶಕಾಲಗಳ ಕಲನೆಯಿಂದ ಚಿತ್ರವಿಚಿತ್ರವಾಗುವ ಈ ಜಗತ್ತನ್ನು ಯಾವನು ಸ್ವೇಚ್ಛೆಯಿಂಡ ಮಾಯಾವಿಯ ಹಾಗೆ ಅಥವಾ ಮಹಾಯೋಗಿಯ ಹಾಗೆ ಕಾಣುವಂತೆ ಮಾಡುವನೋ ಅಂತಹ ಶ್ರೀಗುರುರೂಪಧಾರಿಯಾದ ಶ್ರೀದಕ್ಷಿಣಾಮೂರ್ತಿಗೆ ನಮಸ್ಕಾರ.

೩. ಯಾರ ಪ್ರಕಾಶವು ಸತ್ಸ್ವರೂಪವಾಗಿದ್ದರೂ ಮಿಥ್ಯಾವಸ್ತುಗಳನ್ನು ಬೆಳಗಿಸುತ್ತದೆಯೋ, ಯಾರು "ತತ್ತ್ವಮಸಿ" ಎಂಬ ಉಪನಿಷದ್ವಾಕ್ಯದ ದ್ವಾರಾ ಆಶ್ರಿತರಿಗೆ ಸಾಕ್ಷಾತ್ತಾಗಿ ಬೋಧಿಸುತ್ತಾನೆಯೋ, ಯಾರ ಸಾಕ್ಷಾತ್ಕಾರದಿಂದ ಸಂಸಾರಸಾಗರಕ್ಕೆ ಪುನಃ ಆಗಮನವಿಲ್ಲವೋ ಅಂತಹ ಶ್ರೀಗುರುರೂಪಧಾರಿಯಾದ ಶ್ರೀದಕ್ಷಿಣಾಮೂರ್ತಿಗೆ ನಮಸ್ಕಾರ.

ನಾನಾಛಿದ್ರಘಟೋದರಸ್ಥಿತಮಹಾ-
ದೀಪಪ್ರಭಾಭಾಸ್ವರಂ
ಜ್ಞಾನಂ ಯಸ್ಯ ತು ಚಕ್ಷುರಾದಿಕರಣ-
ದ್ವಾರಾ ಬಹಿಃಸ್ಪಂದತೇ ।
ಜಾನಾಮೀತಿ ತಮೇವ ಭಾಂತಮನುಭಾ-
ತ್ಯೇತತ್ಸಮಸ್ತಂ ಜಗತ್
ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ
ಶ್ರೀದಕ್ಷಿಣಾಮೂರ್ತಯೇ ॥ ೪ ॥

ದೇಹಂ ಪ್ರಾಣಮಪೀಂದ್ರಿಯಾಣ್ಯಪಿ ಚಲಾಂ
ಬುದ್ಧಿಂ ಚ ಶೂನ್ಯಂ ವಿದುಃ
ಸ್ತ್ರೀಬಾಲಾಂಧಜಡೋಪಮಾಸ್ತ್ವಹಮಿತಿ
ಭ್ರಾಂತಾ ಭೃಶಂ ವಾದಿನಃ ।
ಮಾಯಾಶಕ್ತಿವಿಲಾಸಕಲ್ಪಿತಮಹಾ-
ವ್ಯಾಮೋಹಸಂಹಾರಿಣೇ
ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ
ಶ್ರೀದಕ್ಷಿಣಾಮೂರ್ತಯೇ ॥ ೫ ॥

ರಾಹುಗ್ರಸ್ತದಿವಾಕರೇಂದುಸದೃಶೋ
ಮಾಯಾಸಮಾಚ್ಛಾದನಾತ್
ಸನ್ಮಾತ್ರಃ ಕರಣೋಪಸಂಹರಣತೋ
ಯೋಽಭೂತ್ ಸುಷುಪ್ತಃ ಪುಮಾನ್ ।
ಪ್ರಾಗಸ್ವಾಪ್ಸಮಿತಿ ಪ್ರಬೋಧಸಮಯೇ
ಯಃ ಪ್ರತ್ಯಭಿಜ್ಞಾಯತೇ
ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ
ಶ್ರೀದಕ್ಷಿಣಾಮೂರ್ತಯೇ ॥ ೬ ॥

೪. ಅನೇಕ ಕಂಡಿಗಳುಳ್ಳ ಪಾತ್ರೆಯ ಮಧ್ಯದಲ್ಲಿ ಇಟ್ಟಿರುವ ಉಜ್ವಲವಾದ ದೀಪದ ಪ್ರಭೆಯು ಪ್ರಕಾಶಿಸುವ ಹಾಗೆ ಯಾರ ಜ್ಞಾನವು ಕಣ್ಣು ಮೊದಲಾದ ಇಂದ್ರಿಯಗಳ ಮುಖಾಂತರ ಹೊರಗಡೆ ಸ್ಪಂದಿಸುತ್ತದೆಯೋ, ಪ್ರಕಾಶಿಸುತ್ತಿರುವ ಯಾವನನ್ನೇ ಅನುಸರಿಸಿ ಈ ಸಮಸ್ತ ಜಗತ್ತೂ "ನಾನು ತಿಳಿಯುತ್ತೇನೆ" ಎಂಬ ಜ್ಞಾನದಿಂದ ಬೆಳಗುತ್ತದೆಯೋ ಅಂತಹ ಶ್ರೀಗುರುರೂಪಧಾರಿಯಾದ ಶ್ರೀದಕ್ಷಿಣಾಮೂರ್ತಿಗೆ ನಮಸ್ಕಾರ.

೫. "ನಾನೇ ದೇಹ, ನಾನೇ ಪ್ರಾಣ, ನಾನೇ ಇಂದ್ರಿಯಗಳು, ನಾನೇ ಚಂಚಲವಾದ ಮನಸ್ಸು ಅಥವಾ ನಾನೇ ಶೂನ್ಯ" ಎಂದು ಯಾರು ತಿಳಿದುಕೊಂಡಿರುವರೋ ಅವರು ಸ್ತ್ರೀಯರಿಗೆ, ಮಕ್ಕಳಿಗೆ, ಕುರುಡರಿಗೆ, ಜಡರಿಗೆ ಸಮಾನರಾಗಿರುವರು: ಅವರು ಭ್ರಾಂತರೇ ಸರಿ; ಮಾಯಾಶಕ್ತಿಯ ವಿಲಾಸದಿಂದ ಕಲ್ಪಿತವಾದ ಮಹಾ ವ್ಯಾಮೋಹವನ್ನು ನಾಶಮಾಡುವ ಶ್ರೀಗುರುರೂಪಧಾರಿಯಾದ ಶ್ರೀದಕ್ಷಿಣಾಮೂರ್ತಿಗೆ ನಮಸ್ಕಾರ.

೬. ರಾಹುಗ್ರಸ್ತನಾದ ಸೂರ್ಯನಂತೆ ಅಥವಾ ಚಂದ್ರನಂತೆ ಯಾವನು ಮಾಯೆಯಿಂದ ಆಚ್ಛಾದಿತನಾಗಿ ಇಂದ್ರಿಯಸಮೂಹಗಳನ್ನು ಒಳಕ್ಕೆ ಎಳೆದುಕೊಂಡನಂತರ ಗಾಢನಿದ್ರೆಯನ್ನು ಹೊಂದಿ ಸನ್ಮಾತ್ರರೂಪದಲ್ಲಿ ನೆಲಸುವನೋ, ಯಾವನು ಎಚ್ಚರವಾದ ಮೇಲೆ "ನಾನೇ ಹಿಂದೆ ಮಲಗಿದ್ದೆನು" ಎಂದು ಜ್ಞಾಪಿಸಿಕೊಳ್ಳುವನೋ ಅಂತಹ ಶ್ರೀಗುರುರೂಪಧಾರಿಯಾದ ಶ್ರೀದಕ್ಷಿಣಾಮೂರ್ತಿಗೆ ನಮಸ್ಕಾರ.

ಸರ್ವಾತ್ಮತ್ವಮಿತಿ ಸ್ಫುಟೀಕೃತಮಿದಂ
ಯಸ್ಮಾದಮುಷ್ಮಿಂಸ್ತವೇ
ತೇನಾಸ್ಯ ಶ್ರವಣಾತ್ತದರ್ಥಮನನಾ-
ದ್ಧ್ಯಾನಾಚ್ಚ ಸಂಕೀರ್ತನಾತ್ ।
ಸರ್ವಾತ್ಮತ್ವಮಹಾವಿಭೂತಿಸಹಿತಂ
ಸ್ಯಾದೀಶ್ವರತ್ವಂ ಸ್ವತಃ
ಸಿದ್ಧ್ಯೇತ್ತತ್ಪುನರಷ್ಟಧಾ ಪರಿಣತಂ
ಚೈಶ್ವರ್ಯಮವ್ಯಾಹತಮ್ ॥ ೧೦ ॥

ವಟವಿಟಪಿಸಮೀಪೇ ಭೂಮಿಭಾಗೇ ನಿಷಣ್ಣಂ
ಸಕಲಮುನಿಜನಾನಾಂ ಜ್ಞಾನದಾತಾರಮಾರಾತ್ ।
ತ್ರಿಭುವನಗುರುಮೀಶಂ ದಕ್ಷಿಣಾಮೂರ್ತಿದೇವಂ
ಜನನಮರಣದುಃಖಚ್ಛೇದದಕ್ಷಂ ನಮಾಮಿ ॥ ೧೧ ॥

ಚಿತ್ರಂ ವಟತರೋರ್ಮೂಲೇ
ವೃದ್ಧಾಃ ಶಿಷ್ಯಾ ಗುರುರ್ಯುವಾ ।
ಗುರೋಸ್ತು ಮೌನಂ ವ್ಯಾಖ್ಯಾನಂ
ಶಿಷ್ಯಾಸ್ತು ಛಿನ್ನಸಂಶಯಾಃ ॥ ೧೨ ॥

ಓಂ ನಮಃ ಪ್ರಣವಾರ್ಥಾಯ ಶುದ್ಧಜ್ಞಾನೈಕಮೂರ್ತಯೇ ।
ನಿರ್ಮಲಾಯ ಪ್ರಶಾಂತಾಯ ದಕ್ಷಿಣಾಮೂರ್ತಯೇ ನಮಃ ॥ ೧೩ ॥

ನಿಧಯೇ ಸರ್ವವಿದ್ಯಾನಾಂ ಭಿಷಜೇ ಭವರೋಗಿಣಾಮ್ ।
ಗುರವೇ ಸರ್ವಲೋಕಾನಾಂ ದಕ್ಷಿಣಾಮೂರ್ತಯೇ ನಮಃ ॥ ೧೪ ॥

ಮೌನವ್ಯಾಖ್ಯಾಪ್ರಕಟಿತಪರಬ್ರಹ್ಮತತ್ತ್ವಂ ಯುವಾನಂ
ವರ್ಷಿಷ್ಠಾಂತೇವಸದೃಷಿಗಣೈರಾವೃತಂ ಬ್ರಹ್ಮನಿಷ್ಠೈಃ ।
ಆಚಾರ್ಯೇಂದ್ರಂ ಕರಕಲಿತಚಿನ್ಮುದ್ರಮಾನಂದರೂಪಂ
ಸ್ವಾತ್ಮಾರಾಮಂ ಮುದಿತವದನಂ ದಕ್ಷಿಣಾಮೂರ್ತಿಮೀಡೇ ॥ ೧೫ ॥

೧೦. ಈ ಸ್ತವದಲ್ಲಿ ಸರ್ವಾತ್ಮರೂಪವಾದ ವಸ್ತುವನ್ನು ಸ್ಪಷ್ಟೀಕರಿಸಿದ್ದರಿಂದ ಇದರ ಶ್ರವಣ, ಅರ್ಥದ ಮನನ, ಧ್ಯಾನ ಮತ್ತು ಸಂಕೀರ್ತನೆ ಇವುಗಳ ಮೂಲಕ ಸರ್ವಾತ್ಮತ್ವದ ಮಹಾವಿಭೂತಿಯಿಂದ ಕೂಡಿದ ಈಶ್ವರತ್ವವೂ ಮತ್ತು ಅಣಿಮಾದಿ ಅಷ್ಟಸಿದ್ಧಿಗಳೂ ಸ್ವತಃ ಉಂಟಾಗುತ್ತವೆ.

೧೧. ವಟವೃಕ್ಷದ ಸಮೀಪದಲ್ಲಿ ಕುಳಿತು ಸಕಲ ಮುನಿಗಳಿಗೂ ಸಾಕ್ಷಾತ್ತಾಗಿ ಜ್ಞಾನವನ್ನು ದಾನಮಾಡುತ್ತಿರುವವನೂ, ಮೂರು ಲೋಕಗಳಿಗೂ ಗುರುವೂ, ಈಶ್ವರನೂ, ಜನನಮರಣರೂಪವಾದ ದುಃಖವನ್ನು ನಾಶ ಮಾಡುವುದರಲ್ಲಿ ದಕ್ಷನೂ ಆದ ಶ್ರೀದಕ್ಷಿಣಾಮೂರ್ತಿಗೆ ನಮಿಸುತ್ತೇನೆ.

೧೨. ಇದು ಬಹು ಆಶ್ಚರ್ಯ—ವಟವೃಕ್ಷದ ಕೆಳಗಿದ್ದ ಶಿಷ್ಯರೆಲ್ಲರೂ ವೃದ್ಧರು; ಗುರುವು ಯುವಕ! ಮೌನವೇ ಗುರುವಿನ ವ್ಯಾಖ್ಯಾನ; ಅದರಿಂದಲೇ ಶಿಷ್ಯರ ಸಂಶಯಗಳೆಲ್ಲವೂ ನಿವಾರಣೆಯಾದವು.

೧೩. ಪ್ರಣವದ ವಾಚ್ಯನೂ, ಶುದ್ಧಜ್ಞಾನದ ಮೂರ್ತಿಯೂ, ನಿರ್ಮಲನೂ, ಪ್ರಶಾಂತನೂ ಆದ ದಕ್ಷಿಣಾಮೂರ್ತಿಗೆ ನಮಸ್ಕಾರ.

೧೪. ಸಮಸ್ತವಿದ್ಯೆಗಳಿಗೂ ನಿಧಿಯೂ, ಭವರೋಗಕ್ಕೆ ವೈದ್ಯನೂ, ಸಮಸ್ತ ಲೋಕಕ್ಕೂ ಗುರುವೂ ಆದ ದಕ್ಷಿಣಾಮೂರ್ತಿಗೆ ನಮಸ್ಕಾರ.

೧೫. ಬ್ರಹ್ಮಜ್ಞಾನವನ್ನು ಮೌನವಾಗಿ ಬೋಧಿಸುವವನೂ, ಯುವಕನೂ, ಬ್ರಹ್ಮನಿಷ್ಠರಾದ ವೃದ್ಧಮಹರ್ಷಿಗಳಿಂದ ಪರಿವೇಷ್ಟಿತನಾದ ಆಚಾರ್ಯೇಂದ್ರನೂ, ಚಿನ್ಮುದ್ರೆಯಿಂದ ಕೂಡಿದ ಹಸ್ತವುಳ್ಳವನೂ, ಆನಂದ ಸ್ವರೂಪನೂ, ಆತ್ಮಾರಾಮನೂ, ಸಂತೋಷವಾದ ಮುಖವುಳ್ಳವನೂ ಆದ ಶ್ರೀದಕ್ಷಿಣಾಮೂರ್ತಿಯನ್ನು ಸ್ತುತಿಸುತ್ತೇನೆ.

# ಕಾಶೀಪಂಚಕಮ್

ಮನೋನಿವೃತ್ತಿಃ ಪರಮೋಪಶಾಂತಿಃ
ಸಾ ತೀರ್ಥವರ್ಯಾ ಮಣಿಕರ್ಣಿಕಾ ಚ ।
ಜ್ಞಾನಪ್ರವಾಹಾ ವಿಮಲಾದಿಗಂಗಾ
ಸಾ ಕಾಶಿಕಾಹಂ ನಿಜಬೋಧರೂಪಾ ॥ ೧ ॥

ಯಸ್ಯಾಮಿದಂ ಕಲ್ಪಿತಮಿಂದ್ರಜಾಲಂ
ಚರಾಚರಂ ಭಾತಿ ಮನೋವಿಲಾಸಮ್ ।
ಸಚ್ಚಿತ್ಸುಖೈಕಾ ಪರಮಾತ್ಮರೂಪಾ
ಸಾ ಕಾಶಿಕಾಹಂ ನಿಜಬೋಧರೂಪಾ ॥ ೨ ॥

ಕೋಶೇಷು ಪಂಚಸ್ವಧಿರಾಜಮಾನಾ
ಬುದ್ಧಿರ್ಭವಾನೀ ಪ್ರತಿದೇಹಗೇಹಮ್ ।
ಸಾಕ್ಷೀ ಶಿವಃ ಸರ್ವಗತೋಽಂತರಾತ್ಮಾ
ಸಾ ಕಾಶಿಕಾಹಂ ನಿಜಬೋಧರೂಪಾ ॥ ೩ ॥

ಕಾಶ್ಯಾಂ ಹಿ ಕಾಶ್ಯತೇ ಕಾಶೀ ಕಾಶೀ ಸರ್ವಪ್ರಕಾಶಿಕಾ ।
ಸಾ ಕಾಶೀ ವಿದಿತಾ ಯೇನ ತೇನ ಪ್ರಾಪ್ತಾ ಹಿ ಕಾಶಿಕಾ ॥ ೪ ॥

ಕಾಶೀಕ್ಷೇತ್ರಂ ಶರೀರಂ
ತ್ರಿಭುವನಜನನೀ ವ್ಯಾಪಿನೀ ಜ್ಞಾನಗಂಗಾ
ಭಕ್ತಿಃ ಶ್ರದ್ಧಾ ಗಯೇಯಂ
ನಿಜಗುರುಚರಣಧ್ಯಾನಯೋಗಃ ಪ್ರಯಾಗಃ ।
ವಿಶ್ವೇಶೋಽಯಂ ತುರೀಯಂ
ಸಕಲಜನಮನಸ್ಸಾಕ್ಷಿಭೂತೋಽಂತರಾತ್ಮಾ
ದೇಹೇ ಸರ್ವಂ ಮದೀಯೇ
ಯದಿ ವಸತಿ ಪುನಸ್ತೀರ್ಥಮನ್ಯತ್ಕಿಮಸ್ತಿ ॥ ೫ ॥

## ಕಾಶೀಪಂಚಕ

೧. ಚಿತ್ತವೃತ್ತಿಯ ನಿವೃತ್ತಿಯೇ ಪರಮಶಾಂತಿ: ಅದೇ ಮಣಿಕರ್ಣಿಕೆಯೆಂಬ ಶ್ರೇಷ್ಠತೀರ್ಥ; ನನ್ನಲ್ಲಿರುವ ಜ್ಞಾನಪ್ರವಾಹವೇ ವಿಮಲವಾದ ಗಂಗೆ; (ಅಂತಹ) ನಿಜಬೋಧರೂಪವಾಗಿರುವ ಕಾಶೀಕ್ಷೇತ್ರವೇ ನಾನಾಗಿರುವೆ.

೨. ಯಾವುದರಲ್ಲಿ ಈ (ಸೃಷ್ಟಿಯ) ಇಂದ್ರಜಾಲವು ಕಲ್ಪಿತವಾಗಿದೆಯೋ ಮತ್ತು ಚರಾಚರಪ್ರಪಂಚವು ಮನಸ್ಸಿನ ವಿಲಾಸವಾಗಿ ಕಾಣುತ್ತದೆಯೋ, ಆ ಸಚ್ಚಿದಾನಂದವೂ, ಪರಮಾತ್ಮರೂಪವೂ, ನಿಜಬೋಧರೂಪವೂ ಆಗಿರುವ ಕಾಶೀಕ್ಷೇತ್ರವೇ ನಾನಾಗಿರುವೆ.

೩. ಯಾವುದರ ಆಧಿಪತ್ಯ ಪಂಚಕೋಶಗಳಲ್ಲಿ ನಡೆಯುತ್ತಿದೆಯೋ, ಎಲ್ಲಿ ಬುದ್ಧಿಯೇ ಪ್ರತಿಯೊಂದು ದೇಹದಲ್ಲಿರುವ ಭವಾನಿಯೋ, ಎಲ್ಲಿ ಸಾಕ್ಷಿಯಾದ ಮತ್ತು ಸರ್ವವ್ಯಾಪಿಯಾದ ಪ್ರತ್ಯಗಾತ್ಮನು ಶಿವನೋ, ಅಂತಹ ನಿಜಬೋಧರೂಪವಾಗಿರುವ ಕಾಶೀಕ್ಷೇತ್ರವೇ ನಾನಾಗಿರುವೆ.

೪. ಕಾಶಿಯಲ್ಲೇ ನಿಜವಾಗಿ ಪರಂಜ್ಯೋತಿ ಇರುವುದು, ಕಾಶಿಯೇ (ಆತ್ಮವೇ) ಪ್ರಪಂಚದಲ್ಲಿ ಎಲ್ಲವನ್ನೂ ಬೆಳಕಿಗೆ ತರುವುದು; ಯಾರು ಕಾಶಿಯನ್ನು ಅರಿತಿರುವರೋ ಅವರು ಕಾಶಿಯನ್ನು (ಮೋಕ್ಷವನ್ನು) ನಿಜವಾಗಿ ಪಡೆದವರು.

೫. ಶರೀರವೇ ಕಾಶೀಕ್ಷೇತ್ರ; ತ್ರಿಭುವನಜನನಿಯೂ ಸರ್ವವ್ಯಾಪಿಯೂ ಆದ ಜ್ಞಾನಗಂಗೆ (ಇಲ್ಲಿ ಪ್ರವಹಿಸುತ್ತಾಳೆ); ಶ್ರದ್ಧಾಭಕ್ತಿಗಳೇ ಗಯೆ; ನನ್ನ ಗುರುವಿನ ಚರಣಧ್ಯಾನವೇ ಪ್ರಯಾಗ; ಸಕಲಜನರ ಮನಗಳಲ್ಲಿ ಸಾಕ್ಷಿಭೂತವೂ, ಅಂತರಾತ್ಮವೂ ಆದ ತುರೀಯವೇ ವಿಶ್ವೇಶ್ವರ; (ಹೀಗೆ) ಎಲ್ಲವೂ ನನ್ನ ಶರೀರದಲ್ಲೇ ನೆಲಸಿದ್ದರೆ, ಬೇರೆ ಯಾವುದಾದರೂ ತೀರ್ಥವುಂಟೆ?

# ಆತ್ಮಪಂಚಕಮ್

ನಾಹಂ ದೇಹೋ ನೇಂದ್ರಿಯಾಣ್ಯಂತರಂಗಂ
ನಾಹಂಕಾರಃ ಪ್ರಾಣವರ್ಗೋ ನ ಬುದ್ಧಿಃ ।
ದಾರಾಪತ್ಯಕ್ಷೇತ್ರವಿತ್ತಾದಿದೂರಃ
ಸಾಕ್ಷೀ ನಿತ್ಯಃ ಪ್ರತ್ಯಗಾತ್ಮಾ ಶಿವೋಽಹಮ್ ॥ ೧ ॥

ರಜ್ಜ್ವಜ್ಞಾನಾದ್ಭಾತಿ ರಜ್ಜುರ್ಯಥಾಹಿಃ
ಸ್ವಾತ್ಮಾಜ್ಞಾನಾದಾತ್ಮನೋ ಜೀವಭಾವಃ ।
ಆಪ್ತೋಕ್ತ್ಯಾ ಹಿ ಭ್ರಾಂತಿನಾಶೇ ಸ ರಜ್ಜು-
ರ್ಜೀವೋ ನಾಹಂ ದೇಶಿಕೋಕ್ತ್ಯಾ ಶಿವೋಽಹಮ್ ॥ ೨ ॥

ಆಭಾತೀದಂ ವಿಶ್ವಮಾತ್ಮನ್ಯಸತ್ಯಂ
ಸತ್ಯಜ್ಞಾನಾನಂದರೂಪೇ ವಿಮೋಹಾತ್ ।
ನಿದ್ರಾಮೋಹಾತ್ಸ್ವಪ್ನವತ್ತನ್ನ ಸತ್ಯಂ
ಶುದ್ಧಃ ಪೂರ್ಣೋ ನಿತ್ಯ ಏಕಃ ಶಿವೋಽಹಮ್ ॥ ೩ ॥

ಮತ್ತೋ ನಾನ್ಯತ್ಕಿಂಚಿದತ್ರಾಸ್ತಿ ವಿಶ್ವಂ
ಸತ್ಯಂ ಬಾಹ್ಯಂ ವಸ್ತು ಮಾಯೋಪಕ್ಲೃಪ್ತಮ್ ।
ಆದರ್ಶಾಂತರ್ಭಾಸಮಾನಸ್ಯ ತುಲ್ಯಂ
ಮಯ್ಯದ್ವೈತೇ ಭಾತಿ ತಸ್ಮಾಚ್ಛಿವೋಽಹಮ್ ॥ ೪ ॥

ನಾಹಂ ಜಾತೋ ನ ಪ್ರವೃದ್ಧೋ ನ ನಷ್ಟೋ
ದೇಹಸ್ಯೋಕ್ತಾಃ ಪ್ರಾಕೃತಾಃ ಸರ್ವಧರ್ಮಾಃ ।
ಕರ್ತೃತ್ವಾದಿಶ್ಚಿನ್ಮಯಸ್ಯಾಸ್ತಿ ನಾಹಂ-
ಕಾರಸ್ಯೈವ ಹ್ಯಾತ್ಮನೋ ಮೇ ಶಿವೋಽಹಮ್ ॥ ೫ ॥

ನಾಹಂ ಜಾತೋ ಜನ್ಮಮೃತ್ಯೂ ಕುತೋ ಮೇ
ನಾಹಂ ಪ್ರಾಣಃ ಕ್ಷುತ್ಪಿಪಾಸೇ ಕುತೋ ಮೇ ।
ನಾಹಂ ಚಿತ್ತಂ ಶೋಕಮೋಹೌ ಕುತೋ ಮೇ
ನಾಹಂ ಕರ್ತಾ ಬನ್ಧಮೋಕ್ಷೌ ಕುತೋ ಮೇ ॥ ೬ ॥

# ಆತ್ಮಪಂಚಕ

೧. ನಾನು ದೇಹವಲ್ಲ, ಇಂದ್ರಿಯಗಳಲ್ಲ, ಮನಸ್ಸಲ್ಲ, ಅಹಂಕಾರವಲ್ಲ, ಪ್ರಾಣವರ್ಗವಲ್ಲ, ಬುದ್ಧಿಯೂ ಅಲ್ಲ. ಹೆಂಡತಿ ಮಕ್ಕಳು ಜಮೀನು ಐಶ್ವರ್ಯ ಇವುಗಳಿಂದ ದೂರನಾದವನು ನಾನು; ನಿತ್ಯನೂ ಸಾಕ್ಷಿಯೂ ಪ್ರತ್ಯಗಾತ್ಮನೂ ಆದ ಸಾಕ್ಷಾತ್ ಶಿವನೇ ನಾನು.

೨. ಅಜ್ಞಾನದಿಂದ ಹಗ್ಗವು ಹಾವೆಂದು ತೋರುವುದು; ಇದರಂತೆಯೇ ಆತ್ಮ ಜ್ಞಾನದ ಅಭಾವದಿಂದ ಜೀವಭಾವವು ಹುಟ್ಟುವುದು; ಬಲ್ಲವರು ಹೇಳಿದಾಗ ಭ್ರಾಂತಿ ನೀಗಿ ಹಗ್ಗ ಹಗ್ಗವೆಂದು ಗೊತ್ತಾಗುವುದು; ಇದರಂತೆಯೇ ಗುರುವಚನದಿಂದ ನಾನು ಜೀವನಲ್ಲ, ಸಾಕ್ಷಾತ್ ಶಿವನೇ ಎಂದು ತಿಳಿಯುತ್ತೇನೆ.

೩. ಸತ್ಯಜ್ಞಾನಾನಂದರೂಪವಾದ ಆತ್ಮನಲ್ಲಿ ಅಸತ್ಯವಾದ ಈ ಜಗತ್ತು ನಮ್ಮ ಮೋಹಜನಿತವಾದ ಅಜ್ಞಾನದಿಂದ ಸತ್ಯದಂತೆ ತೋರುವುದು. ನಿದ್ರೆಯಲ್ಲಿ ಕಾಣುವ ಕನಸಿನಂತೆ ಕೂಡಾ ಇದು ಸತ್ಯವಲ್ಲ; ಶುದ್ಧನೂ ಪರಿಪೂರ್ಣನೂ ನಿತ್ಯನೂ ಅದ್ವಿತೀಯನೂ ಆದ ಶಿವನೇ ನಾನು.

೪. ನನ್ನ ಸತ್ಯಸ್ವರೂಪವಾದ ಆತ್ಮನ ಹೊರತು ಮತ್ತಾವುದೂ ಇಲ್ಲ; ಕನ್ನಡಿಯಲ್ಲಿ ಹೊಳೆಯುವ ಪ್ರತಿಬಿಂಬದಂತೆ ಅದ್ವಿತೀಯನಾದ ನನ್ನಲ್ಲಿ ಈ ಮಾಯೆಯಿಂದುಂಟಾದ ಹೊರಗಿನ ಜಗತ್ತು ಕಾಣುತ್ತಿದೆ; ಆದುದರಿಂದ ಸಾಕ್ಷಾತ್ ಪರಮ ಶಿವನೇ ನಾನು.

೫. ನಾನು ಹುಟ್ಟುವವನೂ ಅಲ್ಲ, ಬೆಳೆಯುವವನೂ ಅಲ್ಲ, ಸಾಯುವವನೂ ಅಲ್ಲ; ಪ್ರಕೃತಿಜನಿತವಾದ ಗುಣಗಳೆಲ್ಲಾ ದೇಹಕ್ಕೆ ಸೇರಿದ್ದು; ಕರ್ತೃತ್ವಾದಿ ಗುಣಗಳೆಲ್ಲಾ ಅಹಂಕಾರಕ್ಕೆ ಸೇರಿದ್ದೇ ಹೊರತು ಚಿನ್ಮಯನಾದ ಆತ್ಮನಿಗೆ ಸೇರಿದ್ದಲ್ಲ; ಶಿವನೇ ನಾನು.

೬. ಹುಟ್ಟೇ ಇಲ್ಲದ ನನಗೆ ಜನ್ಮಮೃತ್ಯುಗಳು ಪ್ರಾಪ್ತವಾಗುವುದೆಂತು? ನಾನು ಪ್ರಾಣವೇ ಅಲ್ಲದ ಮೇಲೆ ಹಸಿವು ಬಾಯಾರಿಕೆಗಳು ಎಲ್ಲಿಯವು? ನಾನು ಚಿತ್ತವಲ್ಲದ ಮೇಲೆ ಶೋಕಮೋಹಗಳು ಎಲ್ಲಿಯವು? ನಾನು ಕರ್ತೃವೇ ಅಲ್ಲದಿರುವಾಗ ಬಂಧಮೋಕ್ಷಗಳು ಹೇಗೆ ಬರಬೇಕು?

# ನಿರ್ವಾಣಷಟ್ಕಮ್

ಮನೋಬುದ್ಧ್ಯಹಂಕಾರಚಿತ್ತಾನಿ ನಾಹಂ
ನ ಚ ಶ್ರೋತ್ರಜಿಹ್ವೇ ನ ಚ ಘ್ರಾಣನೇತ್ರೇ ।
ನ ಚ ವ್ಯೋಮ ಭೂಮಿರ್ನ ತೇಜೋ ನ ವಾಯು-
ಶ್ಚಿದಾನಂದರೂಪಃ ಶಿವೋಽಹಂ ಶಿವೋಽಹಮ್ ॥ ೧ ॥

ನ ಚ ಪ್ರಾಣಸಂಜ್ಞೋ ನ ವೈ ಪಂಚವಾಯು-
ರ್ನ ವಾ ಸಪ್ತಧಾತುರ್ನ ವಾ ಪಂಚಕೋಶಃ ।
ನ ವಾಕ್ಪಾಣಿಪಾದಂ ನ ಚೋಪಸ್ಥಪಾಯೂ-
ಚಿದಾನಂದರೂಪಃ ಶಿವೋಽಹಂ ಶಿವೋಽಹಮ್ ॥ ೨ ॥

ನ ಮೇ ದ್ವೇಷರಾಗೌ ನ ಮೇ ಲೋಭಮೋಹೌ
ಮದೋ ನೈವ ಮೇ ನೈವ ಮಾತ್ಸರ್ಯಭಾವಃ ।
ನ ಧರ್ಮೋ ನ ಚಾರ್ಥೋ ನ ಕಾಮೋ ನ ಮೋಕ್ಷ-
ಶ್ಚಿದಾನಂದರೂಪಃ ಶಿವೋಽಹಂ ಶಿವೋಽಹಮ್ ॥ ೩ ॥

ನ ಪುಣ್ಯಂ ನ ಪಾಪಂ ನ ಸೌಖ್ಯಂ ನ ದುಃಖಂ
ನ ಮಂತ್ರೋ ನ ತೀರ್ಥಂ ನ ವೇದಾ ನ ಯಜ್ಞಾಃ ।
ಅಹಂ ಭೋಜನಂ ನೈವ ಭೋಜ್ಯಂ ನ ಭೋಕ್ತಾ
ಚಿದಾನಂದರೂಪಃ ಶಿವೋಽಹಂ ಶಿವೋಽಹಮ್ ॥ ೪ ॥

ನ ಮೃತ್ಯುರ್ನ ಶಂಕಾ ನ ಮೇ ಜಾತಿಭೇದಃ
ಪಿತಾ ನೈವ ಮೇ ನೈವ ಮಾತಾ ನ ಜನ್ಮ ।
ನ ಬಂಧುರ್ನ ಮಿತ್ರಂ ಗುರುರ್ನೈವ ಶಿಷ್ಯ-
ಶ್ಚಿದಾನಂದರೂಪಃ ಶಿವೋಽಹಂ ಶಿವೋಹಮ್ ॥ ೫ ॥

ಅಹಂ ನಿರ್ವಿಕಲ್ಪೋ ನಿರಾಕಾರರೂಪೋ
ವಿಭುತ್ವಾಚ್ಚ ಸರ್ವತ್ರ ಸರ್ವೇಂದ್ರಿಯಾಣಾಮ್ ।
ನ ವಾಸಂಗತಂ ನೈವ ಮುಕ್ತಿರ್ನಮೇಯ-
ಶ್ಚಿದಾನಂದರೂಪಃ ಶಿವೋಽಹಂ ಶಿವೋಹಮ್ ॥ ೬ ॥

# ನಿರ್ವಾಣಷಟ್ಕ

೧. ಬುದ್ಧಿ ಮನ ಚಿತ್ತಹಂಕಾರ ನಾನಲ್ಲ;
ಕಣ್ಣು ಕಿವಿ ಮೂಗಲ್ಲ, ನಾಲಗೆಯುಮಲ್ಲ;
ನಭವಲ್ಲ, ಧರೆಯಲ್ಲ, ಶಿಖಿವಾಯುವಲ್ಲ;
ಸಚ್ಚಿದಾನಂದಾತ್ಮ ಶಿವ ನಾನು ನಾನು!

೨. ಪಂಚವಾಯುಗಳಲ್ಲ, ಪ್ರಾಣ ನಾನಲ್ಲ;
ಸಪ್ತಧಾತುಗಳಲ್ಲ, ಶೋಕವೈದಲ್ಲ;
ಕರ್ಮಾಂಗವಿಷಯೇಂದ್ರಿಯಂಗಳಾನಲ್ಲ;
ಸಚ್ಚಿದಾನಂದಾತ್ಮ ಶಿವ ನಾನು ನಾನು!

೩. ದ್ವೇಷರಾಗಗಳಿಲ್ಲ, ಲೋಭಮೆನಗಿಲ್ಲ;
ಮೋಹಮದಮಾತ್ಸರ್ಯಭಾವಮೆನಗಿಲ್ಲ;
ಧರ್ಮಾರ್ಥಕಾಮಾದಿಮೋಕ್ಷ ನಾನಲ್ಲ;
ಸಚ್ಚಿದಾನಂದಾತ್ಮ ಶಿವ ನಾನು ನಾನು!

೪. ಪಾಪಪುಣ್ಯಗಳಲ್ಲ, ಸುಖದುಃಖವಲ್ಲ;
ಮಂತ್ರತೀರ್ಥಗಳಲ್ಲ, ವೇದಮುಖವಲ್ಲ;
ಭೋಜ್ಯಭೋಜನವಲ್ಲ, ಭೋಕ್ತ ನಾನಲ್ಲ;
ಸಚ್ಚಿದಾನಂದಾತ್ಮ ಶಿವ ನಾನು ನಾನು!

೫. ಜಾತಿಭೇದಗಳಿಲ್ಲ, ಮೃತ್ಯುಭಯವಿಲ್ಲ;
ಜನ್ಮಮೃತ್ಯುಗಳಿಲ್ಲ, ತಂದೆತಾಯಿಲ್ಲ;
ಬಂಧುಸಖರಿಲ್ಲ, ಗುರುಶಿಷ್ಯರಾರಿಲ್ಲ;
ಸಚ್ಚಿದಾನಂದಾತ್ಮ ಶಿವ ನಾನು ನಾನು!

೬. ನಿರ್ವಿಕಲ್ಪನು ನಾ ನಿರಾಕಾರ ನಾನು;
ಸರ್ವೇಂದ್ರಿಯಾತೀತ ಸರ್ವತ್ರ ನಾನು;
ಕಾಲದೇಶಾತೀತ ವಿಶ್ವವಿಭು ನಾನು;
ಸಚ್ಚಿದಾನಂದಾತ್ಮ ಶಿವ ನಾನು ನಾನು!

# ವಿಜ್ಞಾನನೌಕಾ

ತಪೋಯಜ್ಞದಾನಾದಿಭಿಃ ಶುದ್ಧಬುದ್ಧಿ-
ರ್ವಿರಕ್ತೋ ನೃಪಾದೌ ಪದೇ ತುಚ್ಛಬುದ್ಧ್ಯಾ ।
ಪರಿತ್ಯಜ್ಯ ಸರ್ವಂ ಯದಾಪ್ನೋತಿ ತತ್ತ್ವಂ
ಪರಂ ಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥ ೧ ॥

ದಯಾಲುಂ ಗುರುಂ ಬ್ರಹ್ಮನಿಷ್ಠಂ ಪ್ರಶಾಂತಂ
ಸಮಾರಾಧ್ಯ ಮತ್ಯಾ ವಿಚಾರ್ಯ ಸ್ವರೂಪಮ್ ।
ಯದಾಪ್ನೋತಿ ತತ್ತ್ವಂ ನಿದಿಧ್ಯಾಸ್ಯ ವಿದ್ವಾನ್
ಪರಂ ಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥ ೨ ॥

ಯದಾನಂದರೂಪಂ ಪ್ರಕಾಶಸ್ವರೂಪಂ
ನಿರಸ್ತಪ್ರಪಂಚಂ ಪರಿಚ್ಛೇದಶೂನ್ಯಮ್ ।
ಅಹಂ ಬ್ರಹ್ಮವೃತ್ತ್ಯೈಕಗಮ್ಯಂ ತುರೀಯಂ
ಪರಂ ಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥ ೩ ॥

ಯದಜ್ಞಾನತೋ ಭಾತಿ ವಿಶ್ವಂ ಸಮಸ್ತಂ
ವಿನಷ್ಟಂ ಚ ಸದ್ಯೋ ಯದಾತ್ಮಪ್ರಬೋಧೇ ।
ಮನೋವಾಗತೀತಂ ವಿಶುದ್ಧಂ ವಿಮುಕ್ತಂ
ಪರಂ ಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥ ೪ ॥

ನಿಷೇಧೇ ಕೃತೇ ನೇತಿ ನೇತೀತಿ ವಾಕ್ಯೈಃ
ಸಮಾಧಿಸ್ಥಿತಾನಾಂ ಯದಾಭಾತಿ ಪೂರ್ಣಮ್ ।
ಅವಸ್ಥಾತ್ರಯಾತೀತಮೇಕಂ ತುರೀಯಂ
ಪರಂ ಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥ ೫ ॥

# ವಿಜ್ಞಾನನೌಕೆ

೧. ತಪಸ್ಸು, ಯಜ್ಞ, ದಾನ ಮೊದಲಾದವುಗಳಿಂದ ಶುದ್ಧಬುದ್ಧಿಯುಳ್ಳವನಾದ ವಿದ್ವಾಂಸನು ರಾಜ್ಯಪದವಿ ಮುಂತಾದವುಗಳನ್ನು ತುಚ್ಛವೆಂದು ಗಣಿಸಿ, ವಿರಕ್ತನಾಗಿ, ಎಲ್ಲವನ್ನೂ ತ್ಯಾಗಮಾಡಿ ಯಾವ ತತ್ತ್ವವನ್ನು ಪಡೆಯುವನೋ ಆ ನಿತ್ಯಪರಬ್ರಹ್ಮವೇ ನಾನಾಗಿರುವೆ.

೨. ವಿದ್ವಾಂಸನು ದಯಾಳುವಾದ ಬ್ರಹ್ಮನಿಷ್ಠನಾದ ಪ್ರಶಾಂತನಾದ ಗುರುವಿನ ಪಾದಕಮಲಗಳನ್ನು ಅರ್ಚಿಸಿ, ತನ್ನ ಸ್ವರೂಪದ ವಿಚಾರ ಮತ್ತು ಧ್ಯಾನಗಳಿಂದ ಯಾವ ತತ್ತ್ವವನ್ನು ಪಡೆಯುತ್ತಾನೆಯೋ, ಆ ನಿತ್ಯಪರಬ್ರಹ್ಮವೇ ನಾನಾಗಿರುವೆ.

೩. ಯಾವುದು ಆನಂದಸ್ವರೂಪವೋ, ಚೇತನಸ್ವರೂಪವೋ, ಪ್ರಪಂಚಕ್ಕೆ ಅತೀತವಾಗಿ ಎಲ್ಲಾ ಪರಿಚ್ಛೇದಗಳಿಂದ ದೂರವಾಗಿ "ನಾನೇ ಬ್ರಹ್ಮ" ಎಂಬ ಏಕಮಾತ್ರ ವೃತ್ತಿಯಿಂದ ಯಾವುದನ್ನು ಹೊಂದಬಹುದೋ, ಯಾವುದು ತುರೀಯವೋ, ಆ ನಿತ್ಯಪರಬ್ರಹ್ಮವೇ ನಾನಾಗಿರುವೆ.

೪. ಯಾವುದರ ಅಜ್ಞಾನದಿಂದ ಈ ವೈವಿಧ್ಯತೆಗಳಿಂದ ಕೂಡಿದ ಜಗತ್ತೆಲ್ಲವೂ ಕಾಣುವುದೋ, ಆದರೆ ಯಾವ ಆತ್ಮಜ್ಞಾನವಾದೊಡನೆ ಎಲ್ಲಾ ಮಾಯವಾಗುವುದೋ, ಯಾವುದು ಮನಸ್ಸು ಮತ್ತು ಮಾತಿಗೆ ಅತೀತವಾಗಿರುವುದೋ ಆ ಶುದ್ಧಮುಕ್ತಸ್ವಭಾವದ ನಿತ್ಯಪರಬ್ರಹ್ಮವೇ ನಾನಾಗಿರುವೆ.

೫. "ನೇತಿ ನೇತಿ" (ಇದಲ್ಲ, ಇದಲ್ಲ) ಎಂಬ ಉಪನಿಷದ್ವಾಕ್ಯಗಳಿಂದ ಎಲ್ಲವನ್ನೂ ಅಲ್ಲಗಳೆದು ಸಮಾಧಿಯಲ್ಲಿರುವವರಿಗೆ ಯಾವುದು ಪೂರ್ಣವಾಗಿ ಪ್ರಕಾಶಿಸುತ್ತದೆಯೋ, ಯಾವುದು ಅದ್ವಿತೀಯವೋ, ತುರೀಯವೋ ಮತ್ತು ಜಾಗ್ರತ್ಸ್ವಪ್ನಸುಷುಪ್ತಿಗಳೆಂಬ ಅವಸ್ಥೆಗಳಿಗೆ ಅತೀತವಾಗಿರುವುದೋ ಆ ನಿತ್ಯಪರಬ್ರಹ್ಮವೇ ನಾನಾಗಿರುವೆ.

ಯದಾನಂದಲೇಶೈಃ ಸಮಾನಂದಿ ವಿಶ್ವಂ
ಯದಾಭಾತಿ ಸತ್ತ್ವೇ ತದಾಭಾತಿ ಸರ್ವಮ್ ।
ಯದಾಲೋಚನೇ ರೂಪಮನ್ಯತ್ಸಮಸ್ತಂ
ಪರಂ ಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥ ೬ ॥

ಅನಂತಂ ವಿಭುಂ ಸರ್ವಯೋನಿಂ ನಿರೀಹಂ
ಶಿವಂ ಸಂಗಹೀನಂ ಯದೋಂಕಾರಗಮ್ಯಮ್ ।
ನಿರಾಕಾರಮತ್ಯುಜ್ಜ್ವಲಂ ಮೃತ್ಯುಹೀನಂ
ಪರಂ ಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥ ೭ ॥

ಯದಾನಂದಸಿಂಧೌ ನಿಮಗ್ನಃ ಪುಮಾನ್ಸ್ಯಾ-
ದವಿದ್ಯಾವಿಲಾಸಃ ಸಮಸ್ತಪ್ರಪಂಚಃ ।
ಯದಾ ನ ಸ್ಫುರತ್ಯದ್ಭುತಂ ಯನ್ನಿಮಿತ್ತಂ
ಪರಂ ಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥ ೮ ॥

ವಿಜ್ಞಾನನಾವಂ ಪರಿಗೃಹ್ಯ ಕಶ್ಚಿತ್ತರೇದ್
ಯದಜ್ಞಾನಮಯಂ ಭವಾಬ್ಧಿಮ್ ।
ಜ್ಞಾನಾಸಿನಾ ಯೋ ಹಿ ವಿಚ್ಛಿದ್ಯ ತೃಷ್ಣಾಂ
ವಿಷ್ಣೋಃ ಪದಂ ಯಾತಿ ಸ ಏವ ಧನ್ಯಃ ॥ ೯ ॥

೬. ಯಾವುದರ ಆನಂದದ ಲೇಶಮಾತ್ರದಿಂದ ಪ್ರಪಂಚವೆಲ್ಲಾ ಆನಂದದಿಂದ ತುಂಬಿದೆಯೋ, ಯಾವುದು ಬೆಳಗುವುದರಿಂದ ಪ್ರಪಂಚದಲ್ಲಿ ಎಲ್ಲವೂ ಬೆಳಗುವುದೋ, ಯಾವುದರ ದೃಷ್ಟಿಯಿಂದ ಉಳಿದವೆಲ್ಲವೂ ಕಾಣು ವುದೋ ಆ ನಿತ್ಯಪರಬ್ರಹ್ಮವೇ ನಾನಾಗಿರುವೆ.

೭. ಯಾವುದು ಅನಂತವಾಗಿರುವದೋ, ವಿಭುವಾಗಿರುವದೋ, ಎಲ್ಲಕ್ಕೂ ಮೂಲವಾಗಿರುವದೋ, ಇಚ್ಛಾಶೂನ್ಯವೋ, ಮಂಗಳಸ್ವರೂಪವಾಗಿರು ವದೋ, ಸಂಗಹೀನವಾಗಿರುವದೋ, ಓಂಕಾರಗಮ್ಯವಾಗಿರುವದೋ, ಯಾವುದು ನಿರಾಕಾರವೂ, ಉಜ್ವಲವೂ, ಅಮೃತಸ್ವರೂಪವೂ ಆಗಿರು ವುದೋ ಆ ನಿತ್ಯಪರಬ್ರಹ್ಮವೇ ನಾನಾಗಿರುವೆ.

೮. ಯಾವ ಆನಂದಸಾಗರದಲ್ಲಿ ಒಮ್ಮೆ ಮುಳುಗಿದರೆ ಈ ಅವಿದ್ಯೆಯ ವಿಲಾಸ ವಾದ ಪ್ರಪಂಚವು ಪುನಃ ಕಾಣುವುದಿಲ್ಲವೋ, ಆದುದರಿಂದ ಯಾವುದು ಅದ್ಭುತವಾಗಿರುವುದೋ ಆ ನಿತ್ಯಪರಬ್ರಹ್ಮವೇ ನಾನಾಗಿರುವೆ.

೯. ಯಾವನು ಜ್ಞಾನವೆಂಬ ಖಡ್ಗದಿಂದ ಆಶಾಪಾಶಗಳನ್ನು ಕತ್ತರಿಸಿ, ವಿಜ್ಞಾನ ವೆಂಬ ನೌಕೆಯನ್ನು ಹತ್ತಿ ಅಜ್ಞಾನಮಯವಾದ ಭವಾಬ್ಧಿಯನ್ನು ದಾಟು ತ್ತಾನೆಯೋ ಅವನೇ ವಿಷ್ಣುವಿನ ಪದವನ್ನು ಸೇರುತ್ತಾನೆ, ಅವನೇ ಧನ್ಯನು.

# ನಿರ್ವಾಣದಶಕಮ್

ನ ಭೂಮಿರ್ನ ತೋಯಂ ನ ತೇಜೋ ನ ವಾಯುಃ
ನ ಖಂ ನೇಂದ್ರಿಯಂ ವಾ ನ ತೇಷಾಂ ಸಮೂಹಃ ।
ಅನೈಕಾಂತಿಕತ್ವಾತ್ ಸುಷುಪ್ತ್ಯೈಕಸಿದ್ಧಃ
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೧ ॥

ನ ವರ್ಣಾ ನ ವರ್ಣಾಶ್ರಮಾಚಾರಧರ್ಮಾಃ
ನ ಮೇ ಧಾರಣಾಧ್ಯಾನಯೋಗಾದಯೋಽಪಿ ।
ಅನಾತ್ಮಾಶ್ರಯೋಽಹಂಮಮಾಧ್ಯಾಸಹಾನಾತ್
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೨ ॥

ನ ಮಾತಾ ನ ಪಿತಾ ವಾ ನ ದೇವಾ ನ ಲೋಕಾಃ
ನ ವೇದಾ ನ ಯಜ್ಞಾ ನ ತೀರ್ಥಂ ಬ್ರುವಂತಿ ।
ಸುಷುಪ್ತೌ ನಿರಸ್ತಾತಿಶೂನ್ಯಾತ್ಮಕತ್ವಾತ್
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೩ ॥

ನ ಸಾಂಖ್ಯಂ ನ ಶೈವಂ ನ ತತ್ಪಾಂಚರಾತ್ರಂ
ನ ಜೈನಂ ನ ಮೀಮಾಂಸಕಾದೇರ್ಮತಂ ವಾ ।
ವಿಶಿಷ್ಟಾನುಭೂತ್ಯಾ ವಿಶುದ್ಧಾತ್ಮಕತ್ವಾತ್
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೪ ॥

ನ ಚೋರ್ಧ್ವಂ ನ ಚಾಧೋ ನ ಚಾಂತರ್ನ ಬಾಹ್ಯಂ
ನ ಮಧ್ಯಂ ನ ತಿರ್ಯಕ್ ನ ಪೂರ್ವಾ ಪರಾ ದಿಕ್ ।
ವಿಯದ್ವ್ಯಾಪಕತ್ವಾದಖಂಡ್ಯೈಕರೂಪಃ
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೫ ॥

# ನಿರ್ವಾಣದಶಕ

೧. ನಾನು ಭೂಮಿಯೂ ಅಲ್ಲ; ನೀರೂ ಅಲ್ಲ; ತೇಜಸ್ಸು ವಾಯು ಆಕಾಶ ಗಳೂ ಅಲ್ಲ; ಅಥವಾ ಇವುಗಳ ಸಮೂಹವೂ ಅಲ್ಲ. ಏಕೆಂದರೆ ಇವೆಲ್ಲ ಅನಿತ್ಯಗಳು; ಸುಷುಪ್ತಿಕಾಲದಲ್ಲಿ ಸಿದ್ಧನೂ, ಅವಶೇಷನೂ (ಇತರ ವಸ್ತುಜ್ಞಾನವಿಲ್ಲದೆ ಏಕಜ್ಞಾನರೂಪದಲ್ಲಿ ಉಳಿದವನೂ) ಆದ ಕೇವಲ ಶಿವನೇ ನಾನು.

೨. ನನಗೆ ಬ್ರಹ್ಮಕ್ಷತ್ರಾದಿ ವರ್ಣಗಳಿಲ್ಲ; ವರ್ಣಾಶ್ರಮಗಳಿಗೆ ವಿಧಿಸಿದ ಆಚಾರಗಳೂ ಮತ್ತು ಧರ್ಮಗಳೂ ನನಗಿಲ್ಲ; ಯೋಗಿಗಳಿಗೆ ಉಚಿತ ವಾದ ಧಾರಣ, ಧ್ಯಾನ ಮುಂತಾದ ಅಷ್ಟಾಂಗಯುಕ್ತ-ಯೋಗವೂ ನನಗಿಲ್ಲ; ದೇಹದಲ್ಲಿ "ನಾನು" ಎಂಬ ಅಧ್ಯಾಸ, ಪ್ರಾಪಂಚಿಕ ವಸ್ತು ಗಳಲ್ಲಿ "ನನ್ನದು" ಎಂಬ ಬುದ್ಧಿ—ಇವು ತೊಲಗಿರುವುದರಿಂದ ಆತ್ಮಾ ಶ್ರಯವಿಲ್ಲದವನೂ, ಅವಶೇಷನೂ ಆದ ಕೇವಲ ಶಿವನೇ ನಾನು.

೩. ತಾಯಿ, ತಂದೆ, ದೇವತೆಗಳು, ಲೋಕಗಳು, ವೇದಗಳು, ಯಜ್ಞಗಳು, ತೀರ್ಥಗಳು—ಇವು ಯಾವುವೂ ನನಗೆ ಇಲ್ಲವೆಂದು ಜ್ಞಾನಿಗಳು ಹೇಳು ತ್ತಾರೆ; ಸುಷುಪ್ತಿಕಾಲದಲ್ಲಿ ಇತರ ವಸ್ತುಜ್ಞಾನವಿಲ್ಲದೆ ಅತ್ಯಂತ ಶೂನ್ಯ ವಾದ ಸ್ವರೂಪವುಳ್ಳವನಾದ್ದರಿಂದ ಅವಶೇಷನಾದ ಕೇವಲ ಶಿವನೇ ನಾನು.

೪. ನನಗೆ ಸಾಂಖ್ಯ, ಶೈವ, ಪಾಂಚರಾತ್ರ ಜೈನ, ಮೀಮಾಂಸಕರ ಮತ ಮೊದಲಾದ ಯಾವ ಮತವೂ ಇಲ್ಲ; ಶ್ರೇಷ್ಠವಾದ ಅನುಭವದಿಂದ ವಿಶುದ್ಧಾತ್ಮಕನಾದುದರಿಂದ ಅವಶೇಷನಾದ ಕೇವಲ ಶಿವನೇ ನಾನು.

೫. ಮೇಲೆ, ಕೆಳಗೆ, ಒಳಗೆ, ಹೊರಗೆ, ಮಧ್ಯ, ಅಡ್ಡ, ಮುಂದೆ, ಹಿಂದೆ ಎಂಬ ಎಂಟು ವಿಧವಾದ ದಿಕ್ಪರಿಚ್ಛೇದ ನನಗಿಲ್ಲ; ಆಕಾಶದಂತೆ ವ್ಯಾಪಕನಾದುದ ರಿಂದ ಅಖಂಡೈಕರೂಪನೂ, ಅವಶೇಷನೂ ಆದ ಕೇವಲ ಶಿವನೇ ನಾನು.

ನ ಶುಕ್ಲಂ ನ ಕೃಷ್ಣಂ ನ ರಕ್ತಂ ನ ಪೀತಂ
ನ ಕುಬ್ಜಂ ನ ಪೀನಂ ನ ಹ್ರಸ್ವಂ ನ ದೀರ್ಘಮ್ ।
ಅರೂಪಂ ತಥಾ ಜ್ಯೋತಿರಾಕಾರಕತ್ವಾತ್
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೬ ॥

ನ ಶಾಸ್ತಾ ನ ಶಾಸ್ತ್ರಂ ನ ಶಿಷ್ಯೋ ನ ಶಿಕ್ಷಾ
ನ ಚ ತ್ವಂ ನ ಚಾಹಂ ನ ಚಾಯಂ ಪ್ರಪಂಚಃ ।
ಸ್ವರೂಪಾವಬೋಧಾದ್ವಿಕಲ್ಪಾಸಹಿಷ್ಣುಃ
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೭ ॥

ನ ಜಾಗ್ರನ್ನ ಮೇ ಸ್ವಪ್ನಕೋ ವಾ ಸುಷುಪ್ತಿಃ
ನ ವಿಶ್ವೋ ನ ವಾ ತೈಜಸಃ ಪ್ರಾಜ್ಞಕೋ ವಾ ।
ಅವಿದ್ಯಾತ್ಮಕತ್ವಾತ್ ತ್ರಯಾಣಾಂ ತುರೀಯಃ
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೮ ॥

ಅಪಿ ವ್ಯಾಪಕತ್ವಾದಿತತ್ತ್ವಪ್ರಯೋಗಾತ್
ಸ್ವತಃ ಸಿದ್ಧಭಾವಾದನನ್ಯಾಶ್ರಯತ್ವಾತ್ ।
ಜಗತ್ತುಚ್ಛಮೇತತ್ಸಮಸ್ತಂ ತದನ್ಯತ್
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೯ ॥

ನ ಚೈಕಂ ತದನ್ಯದ್ದ್ವಿತೀಯಂ ಕುತಃ ಸ್ಯಾತ್
ನ ವಾ ಕೇವಲತ್ವಂ ನ ಚಾಕೇವಲತ್ವಮ್ ।
ನ ಶೂನ್ಯಂ ನ ಚಾಶೂನ್ಯಮದ್ವೈತಕತ್ವಾತ್
ಕಥಂ ಸರ್ವವೇದಾಂತಸಿದ್ಧಂ ಬ್ರವೀಮಿ ॥ ೧೦ ॥

೬. ನಾನು ಬಿಳುಪೂ ಅಲ್ಲ, ಕಪ್ಪೂ ಅಲ್ಲ, ಕೆಂಪು ಬಣ್ಣದವನೂ ಅಲ್ಲ, ಹಳದಿ ಬಣ್ಣದವನೂ ಅಲ್ಲ; ನಾನು ಕುಬ್ಜನೂ ಅಲ್ಲ, ಸ್ಥೂಲನೂ ಅಲ್ಲ, ಗಿಡ್ಡನೂ ಅಲ್ಲ, ಉದ್ದವಾದವನೂ ಅಲ್ಲ; ಶುದ್ಧಚೈತನ್ಯವೇ ನನ್ನ ಆಕಾರವಾಗಿರುವುದರಿಂದ ನಾನು ರೂಪವಿಲ್ಲದವನು ಮತ್ತು ಅವಶೇಷನಾದ ಕೇವಲ ಶಿವನೇ ನಾನು.

೭. ನನಗೆ ಕಲಿಸುವವನೂ ಇಲ್ಲ, ಶಾಸ್ತ್ರವೂ ಇಲ್ಲ, ಶಿಷ್ಯನೂ ಇಲ್ಲ, ಶಿಕ್ಷಕನೂ ಇಲ್ಲ; ನನಗೆ "ನೀನು" ಎಂಬುದೂ "ನಾನು" ಎಂಬುದೂ ಸಹ ಇಲ್ಲ; (ಮಾಯಾರೂಪವಾದ) ಈ ಪ್ರಪಂಚವು ನನಗೆ ಇರುವುದಿಲ್ಲ. ನನ್ನ ಸ್ವರೂಪಜ್ಞಾನದಿಂದ ನಾಮರೂಪಾದಿ ವಿಕಲ್ಪಗಳನ್ನು ನಾನು ಸಹಿಸುವುದಿಲ್ಲ; ಅವಶೇಷನಾದ ಶಿವನೇ ನಾನಾಗಿರುವೆನು.

೮. ನನಗೆ ಜಾಗ್ರತ್–ಸ್ವಪ್ನ–ಸುಷುಪ್ತಿಗಳಾವುವೂ ಇಲ್ಲ; ವಿಶ್ವ, ತೈಜಸ, ಪ್ರಾಜ್ಞ ಎಂಬ ಹೆಸರುಗಳಿಂದ (ಅವಸ್ಥಾತ್ರಯದಲ್ಲಿ) ಅಂಕಿತನಾದ ಆತ್ಮನು ಅವಿದ್ಯಾತ್ಮಕನಾದುದರಿಂದ ಅವನೂ ನಾನಲ್ಲ; ನಾನು ಈ ಮೂರನ್ನೂ ಮೀರಿದ ತುರೀಯನು (ನಾಲ್ಕನೆಯವನು); ಆದುದರಿಂದ ಅವಶೇಷನಾದ ಶಿವನೇ ನಾನಾಗಿರುವೆನು.

೯. (ಪರಬ್ರಹ್ಮದಲ್ಲಿರುವ) ವ್ಯಾಪಕತ್ವವೇ ಮುಂತಾದ ಧರ್ಮಗಳ ಸಂಬಂಧವು ಜಗತ್ತಿನಲ್ಲಿ ಇಲ್ಲದಿರುವುದರಿಂದಲೂ, ಪರಬ್ರಹ್ಮವು ಸ್ವತಃಸಿದ್ಧವಾದುದರಿಂದಲೂ ಮತ್ತು ಅನನ್ಯಾಶ್ರಯವಾದುದರಿಂದಲೂ (ಈಶ್ವರ ಕರ್ತೃಕವಾದ ಮತ್ತು ಅನ್ಯಾಶ್ರಯವಾದ) ಈ ಇಡೀ ಪ್ರಪಂಚವು ತುಚ್ಛವಾದುದು; ಆದುದರಿಂದ ಅವಶೇಷನಾದ ಶಿವನೇ ನಾನಾಗಿರುವೆನು.

೧೦. ಪರತತ್ತ್ವವನ್ನು "ಒಂದು" ಎಂದು ಹೇಳಲಾಗುವುದಿಲ್ಲ; ಏಕೆಂದರೆ ಇದಲ್ಲದ ಎರಡನೆಯದೇ ಇಲ್ಲ; ಇದಕ್ಕೆ ಕೇವಲತ್ವವೂ ಇಲ್ಲ, ಅಕೇವಲತ್ವವೂ ಇಲ್ಲ; ಇದು ಶೂನ್ಯವೂ ಇಲ್ಲ, ಅಶೂನ್ಯವೂ ಅಲ್ಲ, ಅದ್ವೈತವಾದುದು; ಹೀಗಿರುವಾಗ ಸರ್ವವೇದಾಂತಗಳಿಂದ ಪ್ರತಿಪಾದ್ಯನಾದ ಬ್ರಹ್ಮವನ್ನು ಹೇಗೆ ತಾನೇ ನಾನು ವರ್ಣಿಸಲಿ?

# ಅಭಿಲಾಷಾಷ್ಟಕಮ್

ಏಕಂ ಬ್ರಹ್ಮೈವಾದ್ವಿತೀಯಂ ಸಮಸ್ತಂ
ಸತ್ಯಂ ಸತ್ಯಂ ನೇಹ ನಾನಾಸ್ತಿ ಕಿಂಚಿತ್ ।
ಏಕೋ ರುದ್ರೋ ನ ದ್ವಿತೀಯೋಽವತಸ್ಥೇ
ತಸ್ಮಾದೇಕಂ ತ್ವಾಂ ಪ್ರಪದ್ಯೇ ಮಹೇಶಮ್ ॥ ೧ ॥

ಏಕಃ ಕರ್ತಾ ತ್ವಂ ಹಿ ಸರ್ವಸ್ಯ ಶಂಭೋ
ನಾನಾರೂಪೇಷ್ವೇಕರೂಪೋಽಸ್ಯರೂಪಃ ।
ಯದ್ವತ್ಪ್ರತ್ಯಜ್ಞ್ವರ್ಕ ಏಕೋಽಪ್ಯನೇಕ-
ಸ್ತಸ್ಮಾನ್ನಾನ್ಯಂ ತ್ವಾಂ ವಿನೇಶಂ ಪ್ರಪದ್ಯೇ ॥ ೨ ॥

ರಜ್ಜೌ ಸರ್ಪಃ ಶುಕ್ತಿಕಾಯಾಂ ಚ ರೂಪ್ಯಂ
ನೀರಂ ಪುರಸ್ತಾನ್ಮೃಗಾಖ್ಯೇ ಮರೀಚೌ ।
ಯದ್ವತ್ತದ್ವದ್ವಿಷ್ವಗೇಷ ಪ್ರಪಂಚೋ
ಯಸ್ಮಿನ್ಜ್ಞಾತೇ ತಂ ಪ್ರಪದ್ಯೇ ಮಹೇಶಮ್ ॥ ೩ ॥

ತೋಯೇ ಶೈತ್ಯಂ ದಾಹಕತ್ವಂ ಚ ವಹ್ನೌ
ತಾಪೋ ಭಾನೌ ಶೀತಭಾನೌ ಪ್ರಸಾದಃ ।
ಪುಷ್ಪೇ ಗಂಧೋ ದುಗ್ಧಮಧ್ಯೇ ಚ ಸರ್ಪಿ-
ರ್ಯತ್ತಚ್ಛಂಭೋ ತ್ವಂ ತತಸ್ತ್ವಾಂ ಪ್ರಪದ್ಯೇ ॥ ೪ ॥

ಶಬ್ದಂ ಗೃಹ್ಣಾಸ್ಯಶ್ರುತಿಸ್ತ್ವಂ ಹಿ ಜಿಘ್ರೇ-
ರಘ್ರಾಣಸ್ತ್ವಂ ವ್ಯಂಘ್ರಿರಾಯಾಸಿ ದೂರಾತ್ ।
ವ್ಯಕ್ಷಃ ಪಶ್ಯೇಸ್ತ್ವಂ ರಸಜ್ಞೋಽಪ್ಯಜಿಹ್ವಃ
ಕಸ್ತ್ವಾಂ ಸಮ್ಯಗ್ವೇತ್ತ್ಯತಸ್ತ್ವಾಂ ಪ್ರಪದ್ಯೇ ॥ ೫ ॥

# ಅಭಿಲಾಷಾಷ್ಟಕ

೧. ಸಮಸ್ತವೂ ಏಕವಾದ ಅದ್ವಿತೀಯವಾಗಿರುವ ಬ್ರಹ್ಮ; ಸತ್ಯವಾಗಿ ಪ್ರಪಂಚದಲ್ಲಿ ಮತ್ತಾವುದೂ ಇಲ್ಲ; ರುದ್ರನೊಬ್ಬನೇ ಇರುವನು, ಎರಡನೆಯದು ಯಾವುದೂ ಇಲ್ಲ; ಆದಕಾರಣ ಮಹೇಶನಾದ ನಿನ್ನಲ್ಲಿ ನಾನು ಶರಣಾಗತನಾಗುತ್ತೇನೆ.

೨. ಹೇ ಶಂಭು, ನಿಜವಾಗಿಯೂ ನೀನೊಬ್ಬನೇ ಕರ್ತೃ; ಸೂರ್ಯ ಒಬ್ಬನೇ ಆದರೂ ಹಲವು ಪಾತ್ರಗಳಲ್ಲಿ ಪ್ರತಿಬಿಂಬಿಸುವಾಗ ಅನೇಕ ಸೂರ್ಯರಂತೆ ಕಾಣುವಂತೆ ನೀನು ಅರೂಪನಾದರೂ ನಾನಾರೂಪಗಳಲ್ಲಿ ಏಕರೂಪನಾಗಿದ್ದೀಯೆ; ಆದಕಾರಣ ನಿನ್ನ ವಿನಾ ಇನ್ನು ಯಾರಲ್ಲಿಯೂ ನಾನು ಶರಣಾಗತನಾಗುವದಿಲ್ಲ.

೩. ಹಗ್ಗವು ಹಾವಿನಂತೆ ಕಾಣುವ ದೃಶ್ಯ, ಕಪ್ಪೆಚಿಪ್ಪು ಬೆಳ್ಳಿಯಂತೆ ತೋರುವ ದೃಶ್ಯ ಮತ್ತು ಬಿಸಿಲ್ಗುದುರೆಯಲ್ಲಿ ಕಾಣುವ ನೀರು—ಇವು ಹೇಗೆ ಹುಸಿಯೋ ಹಾಗೆ ಯಾವನನ್ನು ಅರಿತರೆ ಪ್ರಪಂಚವು ಮಿಥ್ಯೆಯಾಗಿ ತೋರುವುದೋ ಅಂತಹ ಮಹೇಶನಲ್ಲಿ ಶರಣಾಗತನಾಗುವೆನು.

೪. ಹೇ ಶಂಭು, ನೀನು ನೀರಿನಲ್ಲಿರುವ ಶೈತ್ಯ, ಬೆಂಕಿಯಲ್ಲಿರುವ ಉರಿಯುವ ಗುಣ, ಸೂರ್ಯನಲ್ಲಿರುವ ಉಷ್ಣ, ಚಂದ್ರನಲ್ಲಿರುವ ಆಹ್ಲಾದ, ಹೂವಿನಲ್ಲಿರುವ ಗಂಧ, ಹಾಲಿನಲ್ಲಿರುವ ಬೆಣ್ಣೆ; ಆದಕಾರಣ ನಾನು ನಿನ್ನಲ್ಲಿ ಶರಣಾಗತನಾಗುವೆನು.

೫. ಶ್ರವಣೇಂದ್ರಿಯವಿಲ್ಲದೆ ನೀನು ಶಬ್ದವನ್ನು ಕೇಳಬಲ್ಲೆ, ಘ್ರಾಣೇಂದ್ರಿಯವಿಲ್ಲದೆ ನೀನು ಆಘ್ರಾಣಿಸಬಲ್ಲೆ, ಕಾಲುಗಳಿಲ್ಲದೆಯೂ ನೀನು ದೂರ ಸಂಚಾರಮಾಡಬಲ್ಲೆ, ಕಣ್ಣುಗಳಿಲ್ಲದೆಯೂ ನೀನು ನೋಡಬಲ್ಲೆ, ನಾಲಿಗೆಯಿಲ್ಲದೆ ನೀನು ರುಚಿ ನೋಡುವೆ; ನಿನ್ನನ್ನು ಪೂರ್ಣವಾಗಿ ಯಾರು ಅರಿಯಬಲ್ಲರು? ಆದಕಾರಣ ನಿನ್ನಲ್ಲಿ ನಾನು ಶರಣಾಗತನಾಗುವೆನು.

ನೋ ವೇದಸ್ತ್ವಾಮೀಶ ಸಾಕ್ಷಾದ್ಧಿ ವೇದ
ನೋ ವಾ ವಿಷ್ಣುರ್ನೋ ವಿಧಾತಾಖಿಲಸ್ಯ ।
ನೋ ಯೋಗೀಂದ್ರಾ ನೇಂದ್ರಮುಖ್ಯಾಶ್ಚ ದೇವಾ
ಭಕ್ತೋ ವೇದ ತ್ವಾಮತಸ್ತ್ವಾಂ ಪ್ರಪದ್ಯೇ ॥ ೬ ॥

ನೋ ತೇ ಗೋತ್ರಂ ನಾಪಿ ಜನ್ಮಾಪಿ ನಾಖ್ಯಾ
ನೋ ವಾ ರೂಪಂ ನೈವ ಶೀಲಂ ನ ದೇಶಃ ।
ಇತ್ಥಂಭೂತೋಽಪೀಶ್ವರಸ್ತ್ವಂ ತ್ರಿಲೋಕ್ಯಾಃ
ಸರ್ವಾನ್ಕಾಮಾನ್ಪೂರಯೇಸ್ತದ್ಭಜೇ ತ್ವಾಮ್ ॥ ೭ ॥

ತ್ವತ್ತಃ ಸರ್ವಂ ತ್ವಂ ಹಿ ಸರ್ವಂ ಸ್ಮರಾರೇ
ತ್ವಂ ಗೌರೀಶ ಸ್ತ್ವಂಚ ನಗ್ನೋಽತಿಶಾಂತಃ ।
ತ್ವಂ ವೈ ವೃದ್ಧಸ್ತ್ವಂ ಯುವಾ ತ್ವಂ ಚ ಬಾಲ-
ಸ್ತತ್ತ್ವಂ ಯತ್ಕಿಂ ನಾಸ್ಯತಸ್ತ್ವಾನ್ನತೋಽಸ್ಮಿ ॥ ೮ ॥

೬. ವೇದಗಳು ಕೂಡ ನಿನ್ನನ್ನು ಸಾಕ್ಷಾತ್ತಾಗಿ ಅರಿಯಲಾರವು; ವಿಷ್ಣು ವಾಗಲೀ, ಬ್ರಹ್ಮನಾಗಲೀ, ಪರಮಯೋಗಿಗಳಾಗಲೀ, ಇಂದ್ರನಿಂದ ಒಡಗೂಡಿದ ದೇವತೆಗಳಾಗಲೀ ನಿನ್ನನ್ನು ಅರಿಯಲಾರರು; ಆದರೆ ಭಕ್ತನು ನಿನ್ನನ್ನು ಅರಿಯುವನು; ಆದಕಾರಣ ನಾನು ನಿನ್ನಲ್ಲಿ ಶರಣಾ ಗತನಾಗುವೆನು.

೭. ನಿನಗೆ ಗೋತ್ರವಿಲ್ಲ, ಜನ್ಮವಿಲ್ಲ, ನಾಮವಿಲ್ಲ; ನಿನಗೆ ರೂಪವಿಲ್ಲ, ಶೀಲ ವಿಲ್ಲ, ದೇಶವಿಲ್ಲ; ನೀನು ಹೀಗಿದ್ದರೂ ತ್ರಿಲೋಕಗಳಿಗೆ ಒಡೆಯನು, ಎಲ್ಲರ ಇಚ್ಛೆಯನ್ನೂ ಈಡೇರಿಸುವೆ; ಆದಕಾರಣ ನಾನು ನಿನ್ನನ್ನು ಭಜಿಸುತ್ತೇನೆ.

೮. ಹೇ ಸ್ಮರಾರಿ, ನಿನ್ನಿಂದಲೇ ಎಲ್ಲವೂ ಜನಿಸಿದೆ; ನೀನೇ ಎಲ್ಲವೂ ಆಗಿ ರುವೆ; ನೀನೇ ಗೌರೀಪತಿ, ಉಪಾಧಿಗಳಿಲ್ಲದ ನಗ್ನನು ಮತ್ತು ಶಾಂತ ಸ್ವರೂಪನು; ನೀನೇ ವೃದ್ಧ, ಯುವಕ ಮತ್ತು ಬಾಲಕ; ನೀನಲ್ಲದಿರು ವುದು ಪ್ರಪಂಚದಲ್ಲಿ ಏನಿರುವುದು? ಆದಕಾರಣ ನಾನು ನಿನಗೆ ನಮಿಸುವೆನು.

# ಬ್ರಹ್ಮಸ್ತೋತ್ರಮ್

ಓಂ ನಮಸ್ತೇ ಸತೇ ಸರ್ವಲೋಕಾಶ್ರಯಾಯ
ನಮಸ್ತೇ ಚಿತೇ ವಿಶ್ವರೂಪಾತ್ಮಕಾಯ ।
ನಮೋಽದ್ವೈತತತ್ತ್ವಾಯ ಮುಕ್ತಿಪ್ರದಾಯ
ನಮೋ ಬ್ರಹ್ಮಣೇ ವ್ಯಾಪಿನೇ ನಿರ್ಗುಣಾಯ ॥ ೧ ॥

ತ್ವಮೇಕಂ ಶರಣ್ಯಂ ತ್ವಮೇಕಂ ವರೇಣ್ಯಂ
ತ್ವಮೇಕಂ ಜಗತ್ಕಾರಣಂ ವಿಶ್ವರೂಪಮ್ ।
ತ್ವಮೇಕಂ ಜಗತ್ಕರ್ತೃಪಾತೃಪ್ರಹರ್ತೃ
ತ್ವಮೇಕಂ ಪರಂ ನಿಷ್ಕಲಂ ನಿರ್ವಿಕಲ್ಪಮ್ ॥ ೨ ॥

ಭಯಾನಾಂ ಭಯಂ ಭೀಷಣಂ ಭೀಷಣಾನಾಂ
ಗತಿಃ ಪ್ರಾಣಿನಾಂ ಪಾವನಂ ಪಾವನಾನಾಮ್ ।
ಮಹೋಚ್ಚೈಃಪದಾನಾಂ ನಿಯಂತೃ ತ್ವಮೇಕಂ
ಪರೇಷಾಂ ಪರಂ ರಕ್ಷಕಂ ರಕ್ಷಕಾಣಾಮ್ ॥ ೩ ॥

ಪರೇಶ ಪ್ರಭೋ ಸರ್ವರೂಪಾವಿನಾಶಿನ್
ಅನಿರ್ದೇಶ್ಯ ಸರ್ವೇಂದ್ರಿಯಾಗಮ್ಯ ಸತ್ಯ ।
ಅಚಿಂತ್ಯಾಕ್ಷರ ವ್ಯಾಪಕವ್ಯಕ್ತತತ್ತ್ವ
ಜಗದ್ಭಾಸಕಾಧೀಶ ಪಾಯಾದಪಾಯಾತ್ ॥ ೪ ॥

ತದೇಕಂ ಸ್ಮರಾಮಸ್ತದೇಕಂ ಭಜಾಮ-
ಸ್ತದೇಕಂ ಜಗತ್ಸಾಕ್ಷಿರೂಪಂ ನಮಾಮಃ ।
ಸದೇಕಂ ನಿಧಾನಂ ನಿರಾಲಂಬಮೀಶಂ
ಭವಾಂಭೋಧಿಪೋತಂ ಶರಣ್ಯಂ ವ್ರಜಾಮಃ ॥ ೫ ॥

# ಬ್ರಹ್ಮಸ್ತೋತ್ರ

೧. ಓಂ, ಸರ್ವಲೋಕಗಳಿಗೆ ಆಶ್ರಯವಾದ ಸದ್ವಸ್ತುವಿಗೆ ನಮಸ್ಕಾರ; ವಿಶ್ವರೂಪಾತ್ಮಕವಾದ ಚಿದ್ವಸ್ತುವಿಗೆ ನಮಸ್ಕಾರ; ಮುಕ್ತಿಪ್ರದವಾದ ಅದ್ವೈತತತ್ತ್ವಕ್ಕೆ ನಮಸ್ಕಾರ; ಸರ್ವವ್ಯಾಪಿಯಾದ ನಿರ್ಗುಣಬ್ರಹ್ಮಕ್ಕೆ ನಮಸ್ಕಾರ.

೨. ನೀನೊಂದೇ (ಭಕ್ತರಿಗೆ) ಆಶ್ರಯಸ್ಥಾನ, ನೀನೇ ಅಪೇಕ್ಷಣೀಯವಾದ ವಸ್ತು; ನೀನೇ ಜಗತ್ತಿಗೆ ಕಾರಣ ಮತ್ತು ವಿಶ್ವರೂಪವು; ನಿನ್ನಿಂದಲೇ ಜಗತ್ತಿನ ಸೃಷ್ಟಿ, ಪಾಲನೆ ಮತ್ತು ಲಯ ಉಂಟಾಗುತ್ತವೆ; ನೀನೇ ಶ್ರೇಷ್ಠವು, ನಿಷ್ಕಲವು ಮತ್ತು ನಿರ್ವಿಕಲ್ಪವು.

೩. ಭಯಸಮೂಹಕ್ಕೆ ನೀನು ಭಯಸ್ವರೂಪವಾಗಿರುವೆ, ಭೀಷಣವಸ್ತುಗಳ ಮಧ್ಯದಲ್ಲಿ ಭೀಷಣತಮವಾಗಿರುವೆ; ಪ್ರಾಣಿಗಳ ಗತಿ ನೀನೇ, ಪವಿತ್ರ ಮಾಡುವ ವಸ್ತುಗಳನ್ನು ಪವಿತ್ರಮಾಡುವುದು ನೀನೇ, ಉಚ್ಚಸ್ಥಾನ ದಲ್ಲಿರುವವರನ್ನು ಆಳುವುದು ನೀನೇ; ಉತ್ತಮೋತ್ತಮವು ನೀನು, ರಕ್ಷಕರನ್ನು ರಕ್ಷಿಸುವುದು ನೀನು.

೪. ಹೇ ಪರೇಶ, ಪ್ರಭು, ವಿಶ್ವರೂಪ, ಅವಿನಾಶಿ, ಅನಿರ್ದೇಶ್ಯನೇ, ಇಂದ್ರಿಯ ಗಳ ದ್ವಾರಾ ಅಗಮ್ಯನೇ, ಸತ್ಯಸ್ವರೂಪ, ಅಚಿಂತ್ಯನೇ, ಅಕ್ಷರನೇ, ವ್ಯಾಪಕನೇ, ವ್ಯಕ್ತನೇ, ತತ್ತ್ವಸ್ವರೂಪನೇ, ಜಗತ್ಪ್ರಕಾಶಕ, ಅಧೀಶ್ವರ— ನಮ್ಮನ್ನು ಅಪಾಯದಿಂದ ರಕ್ಷಿಸು.

೫. ಆ ಅದ್ವಿತೀಯವನ್ನೇ ಸ್ಮರಿಸುತ್ತೇವೆ, ಅದನ್ನೇ ಭಜಿಸುತ್ತೇವೆ, ಆ ಅದ್ವಿ ತೀಯವಾದ ಜಗತ್ಸಾಕ್ಷಿರೂಪವನ್ನೇ ನಮಿಸುತ್ತೇವೆ; ಸತ್ಸ್ವರೂಪವೂ, ಅದ್ವಿತೀಯವೂ, ನಿಧಾನವೂ, ನಿರಾಲಂಬವೂ, ಸಂಸಾರಸಾಗರವನ್ನು ದಾಟಲು ನಾವೆಯಂತಿರುವುದೂ, ಶರಣ್ಯವೂ ಆದ ಬ್ರಹ್ಮವಸ್ತುವಿನಲ್ಲಿ ಶರಣಾಗತರಾಗುತ್ತೇವೆ.

# ಅಷ್ಟಾವಕ್ರಗೀತಾ

ಅಹೋ ನಿರಞ್ಜನಃ ಶಾನ್ತೋ ಬೋಧೋಽಹಂ ಪ್ರಕೃತೇ ಪರಃ
ಏತಾವನ್ತಮಹಂ ಕಾಲಂ ಮೋಹೇನೈವ ವಿಡಮ್ಬಿತಃ ॥ ೧ ॥

ಯಥಾ ಪ್ರಕಾಶಯಾಮ್ಯೇಕೋ ದೇಹಮೇನಂ ತಥಾ ಜಗತ್ ।
ಅತೋ ಮಮ ಜಗತ್ಸರ್ವಮಥವಾ ನ ಚ ಕಿಞ್ಚನ ॥ ೨ ॥

ಸಶರೀರಮಹೋ ವಿಶ್ವಂ ಪರಿತ್ಯಜ್ಯ ಮಯಾಽಧುನಾ ।
ಕುತಶ್ಚಿತ್ ಕೌಶಲಾದೇವ ಪರಮಾತ್ಮಾ ವಿಲೋಕ್ಯತೇ ॥ ೩ ॥

ಯಥಾ ನ ತೋಯತೋ ಭಿನ್ನಾಸ್ತರಙ್ಗಾಃ ಫೇನಬುದ್ಬುದಾಃ ।
ಆತ್ಮನೋ ನ ತಥಾ ಭಿನ್ನಂ ವಿಶ್ವಮಾತ್ಮವಿನಿರ್ಗತಮ್ ॥ ೪ ॥

ತನ್ತುಮಾತ್ರೋ ಭವೇದೇವ ಪಟೋ ಯದ್ವದ್ವಿಚಾರಿತಃ ।
ಆತ್ಮತನ್ಮಾತ್ರಮೇವೇದಂ ತದ್ವದ್ವಿಶ್ವಂ ವಿಚಾರಿತಮ್ ॥ ೫ ॥

ಯಥೈವೇಕ್ಷುರಸೇ ಕ್ಲೃಪ್ತಾ
ತೇನ ವ್ಯಾಪ್ತೈವ ಶರ್ಕರಾ ।
ತಥಾವಿಶ್ವಂ ಮಯಿ ಕ್ಲೃಪ್ತಂ
ಮಯಾ ವ್ಯಾಪ್ತಂ ನಿರನ್ತರಮ್ ॥ ೬ ॥

ಆತ್ಮಜ್ಞಾನಾಜ್ಜಗದ್ಭಾತಿ ಆತ್ಮಜ್ಞಾನಾನ್ನ ಭಾಸತೇ ।
ರಜ್ಜ್ವಜ್ಞಾನಾದಹಿರ್ಭಾತಿ ತಜ್ಜ್ಞಾನಾದ್ಭಾಸತೇ ನ ಹಿ ॥ ೭ ॥

ಪ್ರಕಾಶೋ ಮೇ ನಿಜಂ ರೂಪಂ ನಾತಿರಿಕ್ತೋಽಸ್ಮ್ಯಹಂ ತತಃ ।
ಯದಾ ಪ್ರಕಾಶತೇ ವಿಶ್ವಂ ತದಾಹಮ್ಭಾಸ ಏವ ಹಿ ॥ ೮ ॥

ಅಹೋ ವಿಕಲ್ಪಿತಂ ವಿಶ್ವಮಜ್ಞಾನಾನ್ಮಯಿ ಭಾಸತೇ ।
ರೂಪ್ಯಂ ಶುಕ್ತೌ ಫಣೀ ರಜ್ಜೌ ವಾರಿ ಸೂರ್ಯಕರೇ ಯಥಾ ॥ ೯ ॥

# ಅಷ್ಟಾವಕ್ರಗೀತೆ

೧. ಓ! ನಾನು ನಿರಞ್ಜನ, ಶಾಂತ, ಜ್ಞಾನಸ್ವರೂಪ ಮತ್ತು ಪ್ರಕೃತಿಗೆ ಅತೀತ; ಇದುವರೆಗೆ ನಾನು ಮೋಹದಿಂದ ವಂಚಿಸಲ್ಪಟ್ಟೆನು.

೨. ನಾನು ಈ ದೇಹವನ್ನು ವ್ಯಕ್ತಮಾಡುವಂತೆಯೇ ಪ್ರಪಂಚವನ್ನು ವ್ಯಕ್ತ ಪಡಿಸುತ್ತೇನೆ; ಆದಕಾರಣ ಈ ಪ್ರಪಂಚವೆಲ್ಲ ನನ್ನದು ಅಥವಾ ಯಾವುದೂ ನನ್ನದಲ್ಲ.

೩. ಓ! ಈಗ ದೇಹದೊಂದಿಗೆ ಪ್ರಪಂಚವನ್ನು ತ್ಯಜಿಸಿದ ಮೇಲೆ ನಾನು ಜ್ಞಾನದಿಂದ ಪರಮಾತ್ಮನನ್ನು ವೀಕ್ಷಿಸುತ್ತಿರುವೆ.

೪. ಅಲೆನೊರೆಗುಳ್ಳೆಗಳು ಹೇಗೆ ನೀರಿಗಿಂತ ಬೇರೆಯಲ್ಲವೊ, ಹಾಗೆಯೇ ಆತ್ಮನಿಂದ ಉದ್ಗಮವಾದ ಈ ವಿಶ್ವ ಆತ್ಮನಿಗಿಂತ ಬೇರೆಯಲ್ಲ.

೫. ಬಟ್ಟೆಯನ್ನು ವಿಭಜನೆ ಮಾಡಿದರೆ ಅದು ದಾರವಲ್ಲದೆ ಬೇರಲ್ಲ ಎಂದು ತೋರುವಂತೆ ಪ್ರಪಂಚ ಕೂಡ ವಿಚಾರಮಾಡಿದ ಮೇಲೆ ಆತ್ಮವಲ್ಲದೆ ಬೇರೆ ಅಲ್ಲ

೬. ಕಬ್ಬಿನ ರಸದಿಂದ ಆದ ಸಕ್ಕರೆಯಲ್ಲಿ ಹೇಗೆ ರಸದ ವ್ಯಾಪಕತ್ವ ಉಂಟೋ ಹಾಗೆಯೇ ನನ್ನಿಂದ ಆದ ಪ್ರಪಂಚದಲ್ಲಿ ನಾನು ಯಾವ ಅಂತರವೂ ಇಲ್ಲದೆ ವ್ಯಾಪಿಸಿರುವೆನು.

೭. ಆತ್ಮದ ಅಜ್ಞಾನದಿಂದ ಈ ಪ್ರಪಂಚ ಗೋಚರಿಸುವುದು, ಆತ್ಮಜ್ಞಾನ ದಿಂದ ಪ್ರಪಂಚ ಮಾಯವಾಗುವುದು; ಹಗ್ಗ ಕಾಣದಿದ್ದಾಗ ಹಾವು ಕಂಡಂತೆ, ಹಗ್ಗದ ಜ್ಞಾನದಿಂದ ಹಾವು ಮಾಯವಾದಂತೆ.

೮. ಪ್ರಕಾಶ ನನ್ನ ನಿಜವಾದ ಸ್ವರೂಪ, ಅದಕ್ಕಿಂತ ನಾನು ಭಿನ್ನನಲ್ಲ; ವಿಶ್ವ ಗೋಚರಿಸಿದಾಗ ಅಲ್ಲಿ ಪ್ರಕಾಶಮಾನನಾಗಿರುವವನು ನಾನೇ.

೯. ಓ! ಕಪ್ಪೆಚಿಪ್ಪಿನಲ್ಲಿ ಬೆಳ್ಳಿ, ಹಗ್ಗದಲ್ಲಿ ಹಾವು, ಮರೀಚಿಕೆಯಲ್ಲಿ ಜಲ ಕಾಣುವಂತೆ, ವಿಶ್ವವು ಅಜ್ಞಾನದಿಂದ ನನ್ನಲ್ಲಿ ಕಲ್ಪಿತವಾಗಿದೆ.

ಮತ್ತೋ ವಿನಿರ್ಗತಂ ವಿಶ್ವಂ ಮಯ್ಯೇವ ಲಯಮೇಷ್ಯತಿ ।
ಮೃದಿ ಕುಮ್ಭೋ ಜಲೇ ವೀಚಿಃ ಕನಕೇ ಕಟಕಂ ಯಥಾ ॥ ೧೦ ॥

ಅಹೋ ಅಹಂ ನಮೋ ಮಹ್ಯಂ ವಿನಾಶೋ ಯಸ್ಯ ನಾಸ್ತಿ ಮೇ ।
ಬ್ರಹ್ಮಾದಿಸ್ತಮ್ಬಪರ್ಯನ್ತಂ ಜಗನ್ನಾಶೇಽಪಿ ತಿಷ್ಠತಃ ॥ ೧೧ ॥

ಅಹೋ ಅಹಂ ನಮೋ ಮಹ್ಯಮೇಕೋಽಹಂ ದೇಹವಾನಪಿ ।
ಕ್ವಚಿನ್ನ ಗನ್ತಾ ನಾಗನ್ತಾ ವ್ಯಾಪ್ಯ ವಿಶ್ವಮವಸ್ಥಿತಃ ॥ ೧೨ ॥

ಅಹೋ ಅಹಂ ನಮೋ ಮಹ್ಯಂ ದಕ್ಷೋ ನಾಸ್ತೀಹ ಮತ್ಸಮಃ ।
ಅಸಂಸ್ಪೃಶ್ಯ ಶರೀರೇಣ ಯೇನ ವಿಶ್ವಂ ಚಿರಂ ಧೃತಮ್ ॥ ೧೩ ॥

ಅಹೋ ಅಹಂ ನಮೋ ಮಹ್ಯಂ ಯಸ್ಯಮೇ ನಾಸ್ತಿ ಕಿಞ್ಚನ ।
ಅಥವಾ ಯಸ್ಯ ಮೇ ಸರ್ವಂ ಯದ್ವಾಙ್ಮನಸಗೋಚರಮ್ ॥ ೧೪ ॥

ಜ್ಞಾನಂ ಜ್ಞೇಯಂ ತಥಾ ಜ್ಞಾತಾ ತ್ರಿತಯಂ ನಾಸ್ತಿ ವಾಸ್ತವಮ್ ।
ಅಜ್ಞಾನಾದ್ಭಾತಿ ಯತ್ರೇದಂ ಸೋಽಹಮಸ್ಮಿ ನಿರಞ್ಜನಃ ॥ ೧೫ ॥

ದ್ವೈತಮೂಲಮಹೋ ದುಃಖಂ
ನಾನ್ಯತ್ತಸ್ಯಾಸ್ತಿ ಭೇಷಜಮ್ ।
ದೃಶ್ಯಮೇತನ್ಮೃಷಾ ಸರ್ವಂ
ಏಕೋಽಹಂ ಚಿದ್ರಸೋ ಅಮಲಃ ॥ ೧೬ ॥

ಬೋಧಮಾತ್ರೋಽಹಮಜ್ಞಾನಾದುಪಾಧಿಃ ಕಲ್ಪಿತೋ ಮಯಾ ।
ಏವಂ ವಿಮೃಶತೋ ನಿತ್ಯಂ ನಿರ್ವಿಕಲ್ಪೇ ಸ್ಥಿತಿರ್ಮಮ ॥ ೧೭ ॥

ನ ಮೇ ಬನ್ಧೋಽಸ್ತಿ ಮೋಕ್ಷೋ ವಾ
ಭ್ರಾನ್ತಿಃ ಶಾನ್ತಾ ನಿರಾಶ್ರಯಾ ।
ಅಹೋ ಮಯಿ ಸ್ಥಿತಂ ವಿಶ್ವಂ
ವಸ್ತುತೋ ನ ಮಯಿ ಸ್ಥಿತಮ್ ॥ ೧೮ ॥

೧೦. ಮಡಿಕೆ ಮಣ್ಣಿನಲ್ಲಿ, ಅಲೆ ನೀರಿನಲ್ಲಿ, ಚಿನ್ನದಬಳೆ ಚಿನ್ನದಲ್ಲಿ ಸೇರಿ ಹೋಗುವಂತೆ ನನ್ನಿಂದ ಉದ್ಗಮವಾದ ವಿಶ್ವ ನನ್ನಲ್ಲಿ ಲಯವಾಗುವುದು.

೧೧. ಓ! ನನಗೇ ನಮಸ್ಕಾರ; ಬ್ರಹ್ಮನಿಂದ ಹಿಡಿದು ಹುಲ್ಲಿನವರೆಗೆ ಇಡೀ ಜಗತ್ತು ನಾಶವಾದರೂ ನಾನು ಇರುವೆ.

೧೨. ಓ! ನನಗೇ ನಮಸ್ಕಾರ; ದೇಹವಿದ್ದರೂ ನಾನು ಏಕವಾಗಿರುವೆನು, ನಾನು ಎಲ್ಲಿಂದಲೂ ಬರುವುದಿಲ್ಲ, ಎಲ್ಲಿಗೂ ಹೋಗುವುದಿಲ್ಲ, ವಿಶ್ವ ವನ್ನೆಲ್ಲಾ ವ್ಯಾಪಿಸಿ ಅವಸ್ಥಿತನಾಗಿರುವೆನು.

೧೩. ಓ! ನನಗೇ ನಮಸ್ಕಾರ; ನನ್ನಷ್ಟು ದಕ್ಷ ಯಾರೂ ಇಲ್ಲ, ದೇಹದಿಂದ ಮುಟ್ಟದೇ ಈ ಪ್ರಪಂಚವನ್ನು ಚಿರಕಾಲ ಧರಿಸಿರುವೆ.

೧೪. ಓ! ನನಗೇ ನಮಸ್ಕಾರ; ನನ್ನಲ್ಲಿ (ಒಂದು ದೃಷ್ಟಿಯಿಂದ) ಏನೂ ಇಲ್ಲ; ಅಥವಾ ವಾಕ್ಕಿಗೆ ಮತ್ತು ಮನಸ್ಸಿಗೆ ಗೋಚರಿಸುವುದೆಲ್ಲಾ ನನಗೆ ಇದೆ.

೧೫. ವಾಸ್ತವವಾಗಿ ಜ್ಞಾನ, ಜ್ಞೇಯ, ಜ್ಞಾತೃ—ಇವು ನನ್ನಲ್ಲಿ ಇಲ್ಲ; ಅಜ್ಞಾನ ದಿಂದ ಈ ತ್ರಿತಯ ಉಂಟಾಗಿದೆ; ನಾನು ನಿರಂಜನ.

೧೬. ದ್ವೈತವೇ ಎಲ್ಲಾ ದುಃಖಕ್ಕೂ ಕಾರಣ; "ಸಮಸ್ತ ದೃಶ್ಯವಸ್ತುಗಳು ಮಿಥ್ಯೆ, ನಾನು ಅದ್ವಿತೀಯ, ಅಮಲ, ಚಿದಾನಂದ" ಎಂಬುದನ್ನು ಬಿಟ್ಟರೆ ಬೇರೆ ಚಿಕಿತ್ಸೆಯಿಲ್ಲ.

೧೭. ನಾನು ಕೇವಲ ಜ್ಞಾನಸ್ವರೂಪ; ಅಜ್ಞಾನದಿಂದ ನಾನು ಉಪಾಧಿಗಳನ್ನು ಕಲ್ಪಿಸಿಕೊಂಡಿರುತ್ತೇನೆ: ಹೀಗೆ ನಿತ್ಯವೂ ವಿಮರ್ಶೆಮಾಡುತ್ತಾ ನಾನು ನಿರ್ವಿಕಲ್ಪಸ್ಥಿತಿಯಲ್ಲಿ ನೆಲೆಸಿರುವೆನು.

೧೮. ನನಗೆ ಬಂಧನವೂ ಇಲ್ಲ, ಮೋಕ್ಷವೂ ಇಲ್ಲ; ಆಶ್ರಯವಿಲ್ಲದೆ ಭ್ರಾಂತಿ ಮಾಯವಾಗಿದೆ; ಓ! ಪ್ರಪಂಚ ನನ್ನಲ್ಲಿ ಇರುವಂತೆ ಕಂಡರೂ ಅದು ನಿಜವಾಗಿ ನನ್ನಲ್ಲಿಲ್ಲ.

ಸಶರೀರಮಿದಂ ವಿಶ್ವಂ ನ ಕಿಂಚಿದಿತಿ ನಿಶ್ಚಿತಮ್ ।
ಶುದ್ಧಚಿನ್ಮಾತ್ರ ಆತ್ಮಾ ಚ ತತ್ಕಸ್ಮಿನ್ ಕಲ್ಪನಾಽಧುನಾ ॥ ೧೯ ॥

ಶರೀರಂ ಸ್ವರ್ಗನರಕೌ
ಬನ್ಧಮೋಕ್ಷೌ ಭಯಂ ತಥಾ ।
ಕಲ್ಪನಾಮಾತ್ರಮೇವೈತತ್
ಕಿಂ ಮೇ ಕಾರ್ಯಂ ಚಿದಾತ್ಮನಃ ॥ ೨೦ ॥

ಅಹೋ ಜನಸಮೂಹೇಽಪಿ ನ ದ್ವೈತಂ ಪಶ್ಯತೋ ಮಮ ।
ಅರಣ್ಯಮಿವ ಸಂವೃತ್ತಂ ಕ್ವ ರತಿಂ ಕರವಾಣ್ಯಹಮ್ ॥ ೨೧ ॥

ನಾಹಂ ದೇಹೋ ನ ಮೇ ದೇಹೋ ಜೀವೋ ನಾಹಮಹಂ ಹಿ ಚಿತ್ ।
ಅಯಮೇವ ಹಿ ಮೇ ಬನ್ಧ ಆಸೀತ್ ಯಾ ಜೀವಿತೇ ಸ್ಪೃಹಾ ॥ ೨೨ ॥

ಅಹೋ ಭುವನಕಲ್ಲೋಲೈರ್ವಿಚಿತ್ರೈರ್ದ್ರಾಕ್ ಸಮುತ್ಥಿತಮ್ ।
ಮಯ್ಯನನ್ತಮಹಾಮ್ಭೋಧೌ ಚಿತ್ತವಾತೇ ಸಮುದ್ಯತೇ ॥ ೨೩ ॥

ಮಯ್ಯನನ್ತಮಹಾಮ್ಭೋಧೌ ಚಿತ್ತವಾತೇ ಪ್ರಶಾಮ್ಯತಿ ।
ಅಭಾಗ್ಯಾಜ್ಜೀವವಣಿಜೋ ಜಗತ್ಪೋತೋ ವಿನಶ್ವರಃ ॥ ೨೪ ॥

ಮಯ್ಯನನ್ತಮಹಾಮ್ಭೋಧಾವಾಶ್ಚರ್ಯಂ ಜೀವವೀಚಯಃ ।
ಉದ್ಯನ್ತಿ ಘ್ನನ್ತಿ ಖೇಲನ್ತಿ ಪ್ರವಿಶನ್ತಿ ಸ್ವಭಾವತಃ ॥ ೨೫ ॥

೧೯. ಈ ಶರೀರ ಮತ್ತು ವಿಶ್ವ ಯಾವುದೂ ನಿಜವಲ್ಲ; ಆತ್ಮವು ಶುದ್ಧಚಿನ್ಮಾತ್ರ ಎಂದು ನನಗೆ ನಿಶ್ಚಯವಾಗಿ ತಿಳಿದಿದೆ; ಆದಕಾರಣ ಯಾವುದರ ಮೇಲೆ ಕಲ್ಪನೆ (ಅಧ್ಯಾಸ) ಸಾಧ್ಯ?

೨೦. ಶರೀರ, ಸ್ವರ್ಗ, ನರಕ, ಬಂಧ, ಮೋಕ್ಷ, ಭಯ ಇವೆಲ್ಲಾ ಕೇವಲ ಮನಸ್ಸಿನ ಕಲ್ಪನೆ; ಇವುಗಳನ್ನು ಕಟ್ಟಿಕೊಂಡು ಚಿದಾತ್ಮನಾದ ನಾನು ಮಾಡುವುದೇನು?

೨೧. ಓ! ದ್ವೈತವನ್ನು ನೋಡದ ನನಗೆ ಜನಸಮೂಹವೂ ಕಾಡಿನಂತೆ ಕಾಣುವುದು; ನನಗೆ ಎಲ್ಲಿ ಆಸಕ್ತಿ ಉಂಟಾಗಬೇಕು?

೨೨. ನಾನು ಈ ದೇಹವೂ ಅಲ್ಲ, ಈ ದೇಹ ನನ್ನದೂ ಅಲ್ಲ; ನಾನು ಜೀವ ವಲ್ಲ, ಚಿತ್; ನನಗೆ ಜೀವನಾಸಕ್ತಿ ಇದ್ದುದೇ ಬಂಧನಕ್ಕೆ ಕಾರಣ.

೨೩. ನನ್ನ ಅನಂತಸಾಗರದಲ್ಲಿ ಚಿತ್ತವೆಂಬ ಗಾಳಿ ಬೀಸಿದ ಕೂಡಲೇ ಈ ಭುವನಗಳೆಂಬ ಅಲೆಗಳು ಹುಟ್ಟಿವೆ.

೨೪. ನನ್ನ ಅನಂತಸಾಗರದಲ್ಲಿ ಚಿತ್ತವಾತ ನಿಂತವೊಡನೆ ಜೀವ–ವ್ಯಾಪಾರಿಯ ಜಗತ್ತೆಂಬ ದೋಣಿಯು ಭಾಗ್ಯವಿಲ್ಲದೆ ನಾಶವಾಗುವುದು.

೨೫. ಎಂತಹ ಆಶ್ಚರ್ಯ! ನನ್ನ ಅನಂತಸಾಗರದಲ್ಲಿ ಜೀವಾತ್ಮಗಳೆಂಬ ತರಂಗಗಳು ತಮ್ಮ ಸ್ವಭಾವಕ್ಕನುಸಾರವಾಗಿ ಎದ್ದು, ಒಂದಕ್ಕೊಂದು ಹೊಡೆದಾಡಿ, ಆಟವಾಡಿ (ಕೊನೆಗೆ) ಲಯವನ್ನು ಹೊಂದುತ್ತವೆ.

# ಅವಧೂತಗೀತಾ

ಈಶ್ವರಾನುಗ್ರಹಾದೇವ ಪುಂಸಾಮದ್ವೈತವಾಸನಾ
ಮಹದ್ಭಯಪರಿತ್ರಾಣಾ ದ್ವಿತ್ರಾಣಾಮೇವ ಜಾಯತೇ ॥ ೧ ॥

ಯೇನೇದಂ ಪೂರಿತಂ ಸರ್ವಮಾತ್ಮನೈವಾತ್ಮನಾತ್ಮನಿ
ನಿರಾಕಾರಂ ಕಥಂ ವಂದೇ ಹ್ಯಭಿನ್ನಂ ಶಿವಮವ್ಯಯಂ ॥ ೨ ॥

ಪಂಚಭೂತಾತ್ಮಕಂ ವಿಶ್ವಂ ಮರೀಚಿಜಲಸನ್ನಿಭಮ್ ।
ಕಸ್ಯಾಪ್ಯಹೋ ನಮಸ್ಕುರ್ಯಾಮಹಮೇಕೋ ನಿರಂಜನಃ ॥ ೩ ॥

ಆತ್ಮೈವ ಕೇವಲಂ ಸರ್ವಂ ಭೇದಾಭೇದೋ ನ ವಿದ್ಯತೇ ।
ಅಸ್ತಿ ನಾಸ್ತಿ ಕಥಂ ಬ್ರೂಯಾಂ ವಿಸ್ಮಯಃ ಪ್ರತಿಭಾತಿ ಮೇ ॥ ೪ ॥

ವೇದಾಂತಸಾರಸರ್ವಸ್ವಂ ಜ್ಞಾನಂ ವಿಜ್ಞಾನಮೇವ ಚ ।
ಅಹಮಾತ್ಮಾ ನಿರಾಕಾರಃ ಸರ್ವವ್ಯಾಪೀ ಸ್ವಭಾವತಃ ॥ ೫ ॥

ಯೋ ವೈ ಸರ್ವಾತ್ಮಕೋ ದೇವೋ ನಿಷ್ಕಲೋ ಗಗನೋಪಮಃ ।
ಸ್ವಭಾವನಿರ್ಮಲಃ ಶುದ್ಧಃ ಸ ಏವಾಹಂ ನ ಸಂಶಯಃ ॥ ೬ ॥

ಅಹಮೇವಾವ್ಯಯೋಽನಂತಃ ಶುದ್ಧವಿಜ್ಞಾನವಿಗ್ರಹಃ ।
ಸುಖಂ ದುಃಖಂ ನ ಜಾನಾಮಿ ಕಥಂ ಕಸ್ಯಾಪಿ ವರ್ತತೇ ॥ ೭ ॥

ನ ಮಾನಸಂ ಕರ್ಮ ಶುಭಾಶುಭಂ ಮೇ
ನ ಕಾಯಿಕಂ ಕರ್ಮ ಶುಭಾಶುಭಂ ಮೇ ।
ನ ವಾಚಿಕಂ ಕರ್ಮ ಶುಭಾಶುಭಂ ಮೇ
ಜ್ಞಾನಾಮೃತಂ ಶುದ್ಧಮತೀಂದ್ರಿಯೋಽಹಮ್ ॥ ೮ ॥

# ಅವಧೂತಗೀತೆ

೧. ಈಶ್ವರಾನುಗ್ರಹದಿಂದ ಮಾತ್ರ ಮಾನವನಿಗೆ ಅದ್ವೈತವಾಸನೆ ಪ್ರಾಪ್ತ ವಾಗುವುದು; ಸಂಸಾರಭಯದಿಂದ ಪಾರಾಗಬೇಕೆಂಬ ಆಶೆ ಎಲ್ಲೋ ಕೆಲವರಲ್ಲಿ ಮಾತ್ರ ಉದಯಿಸುವುದು.

೨. ಯಾವನು ಈ ಸಕಲ ಪ್ರಪಂಚವನ್ನು ಸಂಪೂರ್ಣವಾಗಿ ತನ್ನ ಆತ್ಮದಿಂದ ವ್ಯಾಪಿಸಿದ್ದಾನೆಯೋ, ಅಂತಹ ನಿರಾಕಾರನೂ, ಅಭಿನ್ನನೂ, ಅವ್ಯಯನೂ ಆದ ಶಿವನನ್ನು ನಾನು ಹೇಗೆ ವಂದಿಸಲಿ?

೩. ಪಂಚಭೂತಗಳಿಂದ ಉಂಟಾದ ಪ್ರಪಂಚ ಮರೀಚಿಜಲದಂತೆ ಇದೆ; ಏಕನೂ, ನಿರಂಜನನೂ ಆದ ನಾನು ನಮಿಸುವುದು ಯಾರಿಗೆ?

೪. ಸರ್ವವೂ ಆತ್ಮಮಯ; ಭೇದವೂ ಇಲ್ಲ, ಅಭೇದವೂ ಇಲ್ಲ. ಇದನ್ನು ಅಸ್ತಿ ಅಥವಾ ನಾಸ್ತಿ ಎಂದು ಹೇಳುವುದು ಹೇಗೆ? ನನಗೆ ವಿಸ್ಮಯ ವುಂಟಾಗಿದೆ.

೫. ವೇದಾಂತಸಾರಸರ್ವಸ್ವ, ಜ್ಞಾನ, ವಿಜ್ಞಾನಗಳೆಲ್ಲಾ ಹೇಳುವುದೇ ಇದು. ನಾನು ಸ್ವಭಾವತಃ ನಿರಾಕಾರನೂ, ಸರ್ವವ್ಯಾಪಿಯೂ ಆದ ಆತ್ಮ.

೬. ನಾನೇ ಸರ್ವಾತ್ಮಕನಾದ ದೇವ, ಗಗನದಂತೆ ನಿಷ್ಕಲನಾಗಿರುವೆನು, ನಾನು ಸ್ವಭಾವತಃ ನಿರ್ಮಲನು ಮತ್ತು ಶುದ್ಧನು; ಇದರಲ್ಲಿ ಸಂಶಯ ವಿಲ್ಲ.

೭. ನಾನೇ ಅವ್ಯಯ, ಅನಂತ, ಶುದ್ಧವಿಜ್ಞಾನದ ವಿಗ್ರಹ; ಸುಖದುಃಖಗಳು ಯಾರಿಗೆ ಹೇಗೆ ಉಂಟಾಗುವುದೆಂದು ನನಗೆ ತಿಳಿಯದು.

೮. ಶುಭಾಶುಭಗಳನ್ನು ಕೊಡುವ ಮಾನಸಿಕ ಕರ್ಮವಾಗಲೀ, ಕಾಯಿಕ ಕರ್ಮವಾಗಲೀ, ವಾಚಿಕಕರ್ಮವಾಗಲೀ, ನನಗೆ ಇಲ್ಲ; ಶುದ್ಧವೂ ಅತೀಂದ್ರಿಯವೂ ಆದ ಜ್ಞಾನಾಮೃತವೇ ನಾನು.

ಮನೋ ವೈ ಗಗನಾಕಾರಂ ಮನೋ ವೈ ಸರ್ವತೋಮುಖಮ್ ।
ಮನೋಽತೀತಂ ಮನಃ ಸರ್ವಂ ನ ಮನಃ ಪರಮಾರ್ಥತಃ ॥ ೯ ॥

ಅಹಮೇಕಮಿದಂ ಸರ್ವಂ ವ್ಯೋಮಾತೀತಂ ನಿರಂತರಮ್ ।
ಪಶ್ಯಾಮಿ ಕಥಮಾತ್ಮಾನಂ ಪ್ರತ್ಯಕ್ಷಂ ವಾ ತಿರೋಹಿತಮ್ ॥ ೧೦ ॥

ತ್ವಮೇವಮೇಕಂ ಹಿ ಕಥಂ ನ ಬುದ್ಧ್ಯಸೇ
ಸಮಂ ಹಿ ಸರ್ವೇಷು ವಿಮೃಶ್ಯಮವ್ಯಯಮ್ ।
ಸದೋದಿತೋಽಸಿ ತ್ವಮಖಂಡಿತ ಪ್ರಭೋ
ದಿವಾ ಚ ನಕ್ತಂ ಚ ಕಥಂ ಹಿ ಮನ್ಯಸೇ ॥ ೧೧ ॥

ಆತ್ಮಾನಂ ಸತತಂ ವಿದ್ಧಿ
ಸರ್ವತ್ರೈಕಂ ನಿರಂತರಮ್ ।
ಅಹಂ ಧ್ಯಾತಾ ಪರಂ ಧ್ಯೇಯಂ
ಹ್ಯಖಂಡಂ ಖಂಡ್ಯತೇ ಕಥಮ್ ॥ ೧೨ ॥

ನ ಜಾತೋ ನ ಮೃತೋಽಸಿ ತ್ವಂ ನ ತೇ ದೇಹಃ ಕದಾಚನ ।
ಸರ್ವಂ ಬ್ರಹ್ಮೇತಿ ವಿಖ್ಯಾತಂ ಬ್ರವೀತಿ ಬಹುಧಾ ಶ್ರುತಿಃ ॥ ೧೩ ॥

ಸಬಾಹ್ಯಾಭ್ಯಂತರೋಽಸಿ ತ್ವಂ ಶಿವಃ ಸರ್ವತ್ರ ಸರ್ವದಾ ।
ಇತಸ್ತತಃ ಕಥಂ ಭ್ರಾಂತಃ ಪ್ರಧಾವಸಿ ಪಿಶಾಚವತ್ ॥ ೧೪ ॥

ಸಂಯೋಗಶ್ಚ ವಿಯೋಗಶ್ಚ ವರ್ತತೇ ನ ಚ ತೇ ನ ಮೇ ।
ನ ತ್ವಂ ನಾಹಂ ಜಗನ್ನೇದಂ ಸರ್ವಮಾತ್ಮೈವ ಕೇವಲಂ ॥ ೧೫ ॥

ಶಬ್ದಾದಿಪಂಚಕಸ್ಯಾಸ್ಯ ನೈವಾಸಿ ತ್ವಂ ನ ತೇ ಪುನಃ ।
ತ್ವಮೇವ ಪರಮಂ ತತ್ತ್ವಮತಃ ಕಿಂ ಪರಿತಪ್ಯಸೇ ॥ ೧೬ ॥

೯. ಮನಸ್ಸು ಗಗನದಂತೆ ಇದೆ, ಮನಸ್ಸೇ ಸರ್ವತೋಮುಖವಾಗಿದೆ, ಅತೀತವಾಗುವುದು ಮನಸ್ಸೇ, ಮನಸ್ಸೇ ಸರ್ವವೂ ಆಗಿದೆ; ಪಾರಮಾರ್ಥಿಕದೃಷ್ಟಿಯಿಂದ ನೋಡಿದರೆ ಮನಸ್ಸೇ ಇಲ್ಲ.

೧೦. ವ್ಯೋಮಾತೀತವಾದ, ನಿರಂತರವಾದ, ಸರ್ವವನ್ನೂ ಒಳಗೊಂಡಿರುವ ಆತ್ಮವೇ ನಾನು; ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ನಾನು ನನ್ನ ಆತ್ಮವನ್ನು ಹೇಗೆ ನೋಡಬಲ್ಲೆ?

೧೧. ನೀನು ಏಕನು. ಎಲ್ಲದರಲ್ಲಿಯೂ ಅವ್ಯಯನಾದ ನೀನೇ ಸಮನಾಗಿ ಇರುವೆಯೆಂದು ನಿನಗೆ ಹೇಗೆ ಗೊತ್ತಾಗುವುದಿಲ್ಲ? ಯಾವಾಗಲೂ ಪ್ರಕಾಶಿಸುತ್ತಿರುವ ಮತ್ತು ಅಸ್ತಮಯವಿಲ್ಲದ ನೀನು ಹಗಲುರಾತ್ರಿಗಳನ್ನು ಕುರಿತು ಹೇಗೆ ಚಿಂತಿಸುವೆ?

೧೨. ಆತ್ಮನು ಎಲ್ಲಾ ಕಡೆಯಲ್ಲಿಯೂ ಏಕವೆಂದೂ, ನಿರಂತರವೆಂದೂ ತಿಳಿದುಕೊ; ನಾನೇ ಧ್ಯಾನಿಸುವವನು ಮತ್ತು ಧ್ಯಾನಿಸಲ್ಪಡುವ ಪರವಸ್ತು; ಅಖಂಡವು ಹೇಗೆ ಖಂಡವಾಗುವುದು?

೧೩. ನೀನು ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ; ನಿನಗೆ ಎಂದೂ ದೇಹವೇ ಇರಲಿಲ್ಲ. ಶ್ರುತಿ ಬಹುವಿಧದಲ್ಲಿ "ಎಲ್ಲವೂ ಬ್ರಹ್ಮ" ಎಂಬ ಪ್ರಖ್ಯಾತವಾದ ಉಪದೇಶವನ್ನು ಸಾರಿದೆ.

೧೪. ನೀನು ಒಳಗೂ ಹೊರಗೂ ಇರುವೆ; ಯಾವಾಗಲೂ ಎಲ್ಲೆಲ್ಲಿಯೂ ಇರುವ ಶಿವನೇ ನೀನು; ಹೀಗಿದ್ದರೂ ಭ್ರಾಂತನಾಗಿ ಪಿಶಾಚಿಯಂತೆ ಏಕೆ ಅಲ್ಲಿ ಇಲ್ಲಿ ಧಾವಿಸುತ್ತಿರುವೆ?

೧೫. ನಿನಗೂ ನನಗೂ ಸಂಯೋಗವಿಲ್ಲ, ವಿಯೋಗವೂ ಇಲ್ಲ; ನಿಜವಾಗಿ ನಾನೂ ಇಲ್ಲ, ನೀನೂ ಇಲ್ಲ, ಪ್ರಪಂಚವೂ ಇಲ್ಲ; ಕೇವಲ ಆತ್ಮವೇ ಎಲ್ಲವೂ ಆಗಿರುವುದು.

೧೬. ನೀನು ಶಬ್ದಾದಿವಿಷಯಗಳಿಗೆ ಸೇರಿಲ್ಲ, ಅವೂ ನಿನಗೆ ಸೇರಿಲ್ಲ; ನೀನು ಪರಮ ತತ್ತ್ವ; ಆದರೂ ನೀನು ಏತಕ್ಕೆ ಪರಿತಪಿಸುವುದು?

ಜನ್ಮಮೃತ್ಯುರ್ನ ತೇ ಚಿತ್ತಂ ಬಂಧಮೋಕ್ಷೌ ಶುಭಾಶುಭೌ ।
ಕಥಂ ರೋದಿಷಿ ರೇ ವತ್ಸ ನಾಮರೂಪಂ ನ ತೇ ನ ಮೇ ॥ ೧೭ ॥

ಅಹೋ ಚಿತ್ತ ಕಥಂ ಭ್ರಾಂತಃ ಪ್ರಧಾವಸಿ ಪಿಶಾಚವತ್
ಅಭಿನ್ನಂ ಪಶ್ಯ ಚಾತ್ಮಾನಂ ರಾಗತ್ಯಾಗಾತ್ಸುಖೀಭವ ॥ ೧೮ ॥

ತ್ವಮೇವ ತತ್ತ್ವಂ ಹಿ ವಿಕಾರವರ್ಜಿತಂ
ನಿಷ್ಕಂಪಮೇಕಂ ಹಿ ವಿಮೋಕ್ಷವಿಗ್ರಹಮ್ ।
ನ ತೇ ಚ ರಾಗೋ ಹ್ಯಥವಾ ವಿರಾಗಃ
ಕಥಂ ಹಿ ಸಂತಪ್ಯಸಿ ಕಾಮಕಾಮತಃ ॥ ೧೯ ॥

ವದಂತಿ ಶ್ರುತಯಃ ಸರ್ವಾ ನಿರ್ಗುಣಂ ಶುದ್ಧಮವ್ಯಯಮ್ ।
ಅಶರೀರಂ ಸಮಂ ತತ್ತ್ವಂ ತನ್ಮಾಂ ವಿದ್ಧಿ ನ ಸಂಶಯಃ ॥ ೨೦ ॥

(ಅಧ್ಯಾಯ ೧. ೧-೨೦)

೧೭. ಜನ್ಮ, ಮೃತ್ಯು, ಚಿತ್ತ, ಬಂಧ, ಮೋಕ್ಷ, ಶುಭ, ಅಶುಭ, ನಾಮ, ರೂಪ–ಇವು ನನಗೂ ಇಲ್ಲ ಮತ್ತು ನಿನಗೂ ಇಲ್ಲ; ಹೀಗಿರುವಾಗ ವತ್ಸ, ನೀನು ಏತಕ್ಕೆ ರೋದಿಸುವೆ?

೧೮. ಎಲೈ ಮನಸ್ಸೇ, ಭ್ರಾಂತಿಯಿಂದ ಪಿಶಾಚಿಯಂತೆ ಏತಕ್ಕೆ ಅಲೆದಾಡುವೆ? ಆತ್ಮವು ಅಭಿನ್ನವೆಂದು ತಿಳಿದುಕೊ; ರಾಗವನ್ನು ತ್ಯಜಿಸಿ ಸುಖಿಯಾಗು.

೧೯. ವಿಕಾರವಿಲ್ಲದ, ಅಚಲವೂ, ಏಕವೂ, ಮೋಕ್ಷವಿಗ್ರಹವೂ ಆದ ತತ್ತ್ವವು ನೀನು; ನಿನಗೆ ಆಸಕ್ತಿಯೂ ಇಲ್ಲ, ಅನಾಸಕ್ತಿಯೂ ಇಲ್ಲ; ಹೀಗಿರುವಾಗ ಕಾಮವನ್ನು ಕಾಮಿಸಿ ಏಕೆ ನರಳುತ್ತೀಯೆ?

೨೦. ನಿರ್ಗುಣವೂ, ಶುದ್ಧವೂ, ಅವ್ಯಯವೂ, ಅಶರೀರವೂ, ಸಮವೂ ಆದ ತತ್ತ್ವವನ್ನು ಎಲ್ಲಾ ಶ್ರುತಿಗಳು ಹೇಳುತ್ತವೆ; ಅದೇ ನಾನೆಂದು ತಿಳಿದುಕೊ; ಇದರಲ್ಲಿ ಸಂಶಯವಿಲ್ಲ.

# ಪ್ರಜ್ಞಾಪಾರಮಿತಾಸೂತ್ರಮ್

ಓಂ ನಿರ್ವಿಕಲ್ಪೇ ನಮಸ್ತುಭ್ಯಂ ಪ್ರಜ್ಞಾಪಾರಮಿತೇಽಮಿತೇ ।
ಯಾ ತ್ವಂ ಸರ್ವಾನವದ್ಯಾಂಗಿ ನಿರವದ್ಯೈರ್ನಿರೀಕ್ಷ್ಯಸೇ ॥ ೧ ॥

ಆಕಾಶಮಿವ ನಿರ್ಲೇಪಾಂ ನಿಷ್ಪ್ರಪಂಚಾಂ ನಿರಕ್ಷರಾಮ್ ।
ಯಸ್ತ್ವಾಂ ಪಶ್ಯತಿ ಭಾವೇನ ಸ ಪಶ್ಯತಿ ತಥಾಗತಮ್ ॥ ೨ ॥

ತವ ಚಾರ್ಯಗುಣಾಢ್ಯಾಯಾ ಬುದ್ಧಸ್ಯ ಚ ಜಗದ್ಗುರೋಃ ।
ನ ಪಶ್ಯಂತ್ಯಂತರಂ ಸಂತಶ್ಚಂದ್ರಚಂದ್ರಿಕಯೋರಿವ ॥ ೩ ॥

ಕೃಪಾತ್ಮಕಾಃ ಪ್ರಪದ್ಯ ತ್ವಾಂ ಬುದ್ಧಧರ್ಮಪುರಃಸರೀಮ್ ।
ಸುಖೇನಾಯಾಂತಿ ಮಾಹಾತ್ಮ್ಯಮತುಲಂ ಭಕ್ತವತ್ಸಲೇ ॥ ೪ ॥

ಸಕೃದಪ್ಯಾಶಯೇ ಶುದ್ಧೇ ಯಸ್ತ್ವಾಂ ವಿಧಿವದೀಕ್ಷತೇ ।
ತೇನಾಪಿ ನಿಯತಂ ಸಿದ್ಧಿಃ ಪ್ರಾಪ್ಯತೇಽಮೋಘದರ್ಶನೇ ॥ ೫ ॥

ಸರ್ವೇಷಾಮಪಿ ವೀರಾಣಾಂ ಪರಾರ್ಥನಿಯತಾತ್ಮನಾಮ್ ।
ಯಾಽಧಿಕಾ ಜನಯಿತ್ರೀ ಚ ಮಾತಾ ತ್ವಮಸಿ ವತ್ಸಲಾ ॥ ೬ ॥

ಯದ್ಬುದ್ಧಾ ಲೋಕಗುರವಃ ಪುತ್ರಾಸ್ತವ ಕೃಪಾಲವಃ ।
ತೇನ ತ್ವಮಪಿ ಕಲ್ಯಾಣಿ ಸರ್ವಸತ್ವಪಿತಾಮಹೀ ॥ ೭ ॥

ಸರ್ವಪಾರಮಿತಾಭಿಸ್ತ್ವಂ ನಿರ್ಮಲಾಭಿರನಿಂದತೇ ।
ಚಂದ್ರಲೇಖೇವ ತಾರಾಭಿರನುಯಾತಾಸಿ ಸರ್ವದಾ ॥ ೮ ॥

# ಪ್ರಜ್ಞಾಪಾರಮಿತಾಸೂತ್ರ

೧. ಓಂ. ನಿರ್ವಿಕಲ್ಪಳೂ ಅನಿಂತಳೂ ಆದ ಎಲೈ ಪ್ರಜ್ಞಾಪಾರಮಿತಳೆ, ನಿನಗೆ ನಮಸ್ಕಾರ; ನೀನು ದೋಷವಿಲ್ಲದ ರೂಪವುಳ್ಳವಳಾದ್ದರಿಂದ ನಿರ್ದೋಷಿಗಳು ಮಾತ್ರ ನಿನ್ನನ್ನು ನೋಡಬಲ್ಲರು.

೨. ಆಕಾಶದಂತೆ ಕಳಂಕವಿಲ್ಲದ ಭೇದಗಳಿಲ್ಲದ ಅಕ್ಷರಾತೀತಳಾದ ನಿನ್ನನ್ನು ಭಾವದಿಂದ ಯಾರು ನೋಡುತ್ತಾರೆಯೋ ಅವರೇ ತಥಾಗತನನ್ನು ನೋಡುವರು.

೩. ಚಂದ್ರನಿಗೂ ಚಂದ್ರಿಕೆಗೂ ಭೇದವಿಲ್ಲದಿರುವ ಹಾಗೆ ಆರ್ಯಗುಣಗಳಿಗೆ ಕಾರಣಳಾದ ನಿನ್ನಲ್ಲೂ ಜಗದ್ಗುರುವಾದ ಬುದ್ಧನಲ್ಲೂ ಯಾವ ವ್ಯತ್ಯಾಸ ವನ್ನೂ ಸಂತರು ನೋಡುವದಿಲ್ಲ.

೪. ಎಲೈ ಭಕ್ತವತ್ಸಲೆ, ಕೃಪಾಳುಗಳು ಬುದ್ಧಧರ್ಮದ ಪ್ರಚೋದಕಳಾದ ನಿನ್ನನ್ನು ಆಶ್ರಯಿಸಿ ಅತುಲವಾದ ಮಾಹಾತ್ಮ್ಯೆಯನ್ನು ಸುಖದಿಂದ ಪಡೆಯುತ್ತಾರೆ.

೫. ಎಲೈ ಅಮೋಘದರ್ಶನಳೆ, ಯಾವನು ತನ್ನ ಶುದ್ಧಹೃದಯದಲ್ಲಿ ನಿನ್ನನ್ನು ಒಂದು ಸಲವಾದರೂ ವಿಧಿವತ್ತಾಗಿ ತಿಳಿದುಕೊಳ್ಳುವನೋ ಅವನು ಖಂಡಿತವಾಗಿ ಸಿದ್ಧಿಯನ್ನು ಪಡೆಯುತ್ತಾನೆ.

೬. ಪರಹಿತಕ್ಕಾಗಿ ದುಡಿಯುವ ವೀರರಿಗೆಲ್ಲಾ ನೀನು ವತ್ಸಲೆಯಾದ ತಾಯಿ ಮತ್ತು ವಿಶಿಷ್ಟಳಾದ ಸೃಷ್ಟಿಕರ್ತೆ.

೭. ಯಾರು ಬುದ್ಧರಾಗಿ ಲೋಕಗುರುಗಳಾಗಿ ಕೃಪಾಳುಗಳಾಗಿರುತ್ತಾರೆಯೋ ಅವರೆಲ್ಲಾ ನಿನ್ನ ಮಕ್ಕಳೇ; ಆದಕಾರಣ ಎಲೈ ಕಲ್ಯಾಣಿ, ನೀನು ಸರ್ವ ಭೂತಗಳ ಪಿತಾಮಹಿಯು.

೮. ಎಲೈ ಕಳಂಕರಹಿತಳೆ, ಚಂದ್ರನನ್ನು ನಕ್ಷತ್ರಗಳು ಅನುಸರಿಸುವಂತೆ ನಿರ್ಮಲವಾದ ಸರ್ವಪಾರಮಿತಗಳೂ ನಿನ್ನನ್ನು ಸರ್ವದಾ ಅನುಸರಿ ಸುತ್ತವೆ.

ವಿನೇಯಂ ಜನಮಾಸಾದ್ಯ ತತ್ರ ತತ್ರ ತಥಾಗತೈಃ ।
ಬಹುರೂಪಾ ತ್ವಮೇವೈಕಾ ನಾನಾನಾಮಭಿರೀಡ್ಯಸೇ ॥ ೯ ॥

ಪ್ರಭಾಂ ಪ್ರಾಪ್ಯೇವ ದೀಪ್ತಾಂಶೋ-
ರವಶ್ಯಾಯೋದಬಿಂದವಃ ।
ತ್ವಾಂ ಪ್ರಾಪ್ಯ ಪ್ರಲಯಂ ಯಾಂತಿ
ದೋಷಾವಾದಾಶ್ಚ ವಾದಿನಾಮ್ ॥ ೧೦ ॥

ತ್ವಮೇವ ತ್ರಾಸಜನನೀ ಬಾಲಾನಾಂ ಭೀಮದರ್ಶನಾ ।
ಆಶ್ವಾಸಜನನೀ ಚಾಸಿ ವಿದುಷಾಂ ಸೌಮ್ಯದರ್ಶನಾ ॥ ೧೧ ॥

ಯಸ್ಯ ತ್ವಯ್ಯಪ್ಯಭಿಷ್ವಂಗಸ್ತ್ವನ್ನಾಥಸ್ಯ ನ ವಿದ್ಯತೇ ।
ತಸ್ಯಾಂಬ ಕಥಮನ್ಯತ್ರ ರಾಗದ್ವೇಷೌ ಭವಿಷ್ಯತಃ ॥ ೧೨ ॥

ನಾಗಚ್ಛಸಿ ಕುತಶ್ಚಿತ್ತ್ವಂ ನ ಚ ಕ್ವಚನ ಗಚ್ಛಸಿ ।
ಸ್ಥಾನೇಷ್ವಪಿ ಚ ಸರ್ವೇಷು ವಿದ್ವದ್ಭಿರ್ನೋಪಲಭ್ಯಸೇ ॥ ೧೩ ॥

ಯೇ ತ್ವಾಮೇವಂ ನ ಪಶ್ಯಂತಿ ಪ್ರಪದ್ಯಂತೇ ಚ ಭಾವತಃ ।
ಪ್ರಪದ್ಯ ಚ ವಿಮುಚ್ಯಂತೇ ತದಿದಂ ಮಹದದ್ಭುತಮ್ ॥ ೧೪ ॥

ತ್ವಾಮೇವ ಬಧ್ಯತೇ ಪಶ್ಯನ್ನಪಶ್ಯನ್ನಪಿ ಬಧ್ಯತೇ ।
ತ್ವಾಮೇವ ಮುಚ್ಯತೇ ಪಶ್ಯನ್ನಪಶ್ಯನ್ನಪಿ ಮುಚ್ಯತೇ ॥ ೧೫ ॥

ಅಹೋ ವಿಸ್ಮಯನೀಯಾಸಿ ಗಂಭೀರಾಸಿ ಯಶಸ್ವಿನಿ ।
ಸುದುರ್ಬೋಧಾಸಿ ಮಾಯೇವ ದೃಶ್ಯಸೇ ನ ಚ ದೃಶ್ಯಸೇ ॥ ೧೬ ॥

೯. ನೀನು ಅದ್ವಿತೀಯಳಾಗಿದ್ದರೂ ಶಿಷ್ಯರ ಮನೋವೃತ್ತಿಗಳಿಗೆ ಅನುಸಾರವಾಗಿ ಬಹುರೂಪಳಾಗಿರುವೆ; ಆದುದರಿಂದ ತಥಾಗತರು ನಿನ್ನನ್ನು ಹಲವೆಡೆಗಳಲ್ಲಿ ನಾನಾ ನಾಮಗಳ ಮೂಲಕ ಸ್ತುತಿಸುತ್ತಾರೆ.

೧೦. ಸೂರ್ಯನ ಪ್ರಭೆಯ ಮುಂದೆ ಇಬ್ಬನಿ ಕರಗಿ ಮಾಯವಾಗುವಂತೆ, ವಾದಿಗಳ ದೋಷವಾದಗಳು ನಿನ್ನನ್ನು ಸಾಕ್ಷಾತ್ಕರಿಸಿದ ಮೇಲೆ ನಾಶವಾಗುವುವು.

೧೧. ಅಜ್ಞರಿಗೆ ನೀನು ಭಯಂಕರಳಾಗಿ ತೋರುವೆ ಮತ್ತು ತ್ರಾಸವನ್ನುಂಟು ಮಾಡುವೆ; ಜ್ಞಾನಿಗಳಿಗೆ ಸೌಮ್ಯಳಾಗಿರುವೆ ಮತ್ತು ಆಶ್ವಾಸನೆಯನ್ನು ನೀಡುವೆ.

೧೨. ನಿನ್ನನ್ನು ಪಡೆದವನಿಗೆ ನಿನ್ನ ಮೇಲೆ ಕೂಡ ಆಸಕ್ತಿಯಿರುವದಿಲ್ಲ; ಹೀಗಿರುವಾಗ ಎಲೈ ತಾಯಿ, ಅವನಿಗೆ (ಪ್ರಾಪಂಚಿಕ ವಸ್ತುಗಳ ಮೇಲೆ) ರಾಗದ್ವೇಷಗಳು ಹೇಗೆ ಉಂಟಾಗುವುವು?

೧೩. ನೀನು ಎಲ್ಲಿಂದಲೂ ಬರುವದಿಲ್ಲ, ಎಲ್ಲಿಗೂ ಹೋಗುವದಿಲ್ಲ; ಜ್ಞಾನಿಗಳು ನಿನ್ನನ್ನು ಯಾವ ಸ್ಥಾನದಲ್ಲೂ ಸಾಕ್ಷಾತ್ಕರಿಸಲಿಲ್ಲ.

೧೪. ಯಾರು ನಿನ್ನನ್ನು ಹೀಗೆ ನೋಡುವದಿಲ್ಲವೋ, ಆದರೂ ನಿನ್ನಲ್ಲಿ ಭಾವದಿಂದ ಶರಣಾಗತರಾಗುವರೋ, ಅವರೂ ಕೂಡ ಸಂಸಾರದಿಂದ ಮೋಕ್ಷವನ್ನು ಹೊಂದುವರು; ಇದು ಆಶ್ಚರ್ಯ!

೧೫. ನಿನ್ನನ್ನು ನೋಡಿದವನೂ ಬಂಧನದಲ್ಲಿರುವನು (ಅಹಂಕಾರ ಆಸಕ್ತಿಗಳಿದ್ದರೆ ನೋಡಿದರೂ ಪ್ರಯೋಜನವಿಲ್ಲ), ನಿನ್ನನ್ನು ನೋಡದವನೂ ಬಂಧನದಲ್ಲಿರುವನು; ನಿನ್ನನ್ನು ನೋಡಿದವನು ಬಂಧನದಿಂದ ಪಾರಾಗುತ್ತಾನೆ, ನಿನ್ನನ್ನು ನೋಡದವನೂ ಬಂಧನದಿಂದ ಪಾರಾಗುತ್ತಾನೆ; (ಕೊನೆಯವನು ನೋಡಿದರೂ ನೋಡದಿದ್ದ ಹಾಗೆ! ಪ್ರಜ್ಞಾಪಾರಮಿತದಲ್ಲೂ ಆಸಕ್ತಿ ಇರಕೂಡದು ಎಂದರ್ಥ.)

೧೬. ನೀನು ವಿಸ್ಮಯವನ್ನುಂಟುಮಾಡುವವಳು, ಗಂಭೀರಸ್ವರೂಪಳು, ಯಶಸ್ಸುಳ್ಳವಳು; ನಿನ್ನನ್ನು ಅರಿತುಕೊಳ್ಳುವುದು ಕಷ್ಟ; ಮಾಯೆಯಂತೆ ನೀನು ಕಾಣುವೆ ಮತ್ತು ಕಾಣದಿರುವೆ.

ಬುದ್ಧೈಃ ಪ್ರತ್ಯೇಕಬುದ್ಧೈಶ್ಚ ಶ್ರಾವಕೈಶ್ಚ ನಿಷೇವಿತಾ ।
ಮಾರ್ಗಸ್ತ್ವಮೇಕಾ ಮೋಕ್ಷಸ್ಯ ನಾಸ್ತ್ಯನ್ಯ ಇತಿ ನಿಶ್ಚಯಃ ॥ ೧೭ ॥

ವ್ಯವಹಾರಂ ಪುರಸ್ಕೃತ್ಯ ಪ್ರಜ್ಞಪ್ತ್ಯರ್ಥಂ ಶರೀರಿಣಾಮ್ ।
ಕೃಪಯಾ ಲೋಕನಾಥೈಸ್ತ್ವಮುಚ್ಯಸೇ ನ ಚ ಚೋಚ್ಯಸೇ ॥ ೧೮ ॥

ಶಕ್ತಃ ಕಸ್ತ್ವಾಮಿಹ ಸ್ತೋತುಂ ನಿರ್ನಿಮಿತ್ತಾಂ ನಿರಂಜನಾಮ್ ।
ಸರ್ವವಾಗ್ವಿಷಯಾತೀತಾಂ ಯಾ ತ್ವಂ ಕ್ವಚಿದನಿಶ್ರಿತಾ ॥ ೧೯ ॥

ಸತ್ಯೇವಮಪಿ ಸಂವೃತ್ಯಾ ವಾಕ್ಪಥೈರ್ವಯಮೀದೃಶೈಃ ।
ತ್ವಾಮಸ್ತುತ್ಯಾಮಪಿ ಸತೀಂ ತುಷ್ಟುವಂತಃ ಸುನಿರ್ವೃತಾಃ ॥ ೨೦ ॥

ಪ್ರಜ್ಞಾಪಾರಮಿತಾಂ ಸ್ತುತ್ವಾ ಯನ್ಮಯೋಪಚಿತಂ ಶುಭಮ್ ।
ತೇನಾಸ್ತ್ವಾಶು ಜಗತ್ಕೃತ್ಸ್ನಂ ಪ್ರಜ್ಞಾಪಾರಪರಾಯಣಮ್ ॥ ೨೧ ॥

೧೭. ಬುದ್ಧರು, ಪ್ರತ್ಯೇಕಬುದ್ಧರು ಶ್ರಾವಕರು ನಿನ್ನನ್ನು ಪೂಜಿಸುವರು; ನೀನೊಬ್ಬಳೇ ಮೋಕ್ಷಕ್ಕೆ ಮಾರ್ಗ, ಬೇರೆ ಯಾವ ದಾರಿಯೂ ಇಲ್ಲ ವೆನ್ನುವುದು ನಿಶ್ಚಯ.

೧೮. ಲೋಕನಾಥರಾದವರು ವ್ಯವಹಾರವನ್ನು ಮುಂದಿಟ್ಟುಕೊಂಡು ಸಂಸಾರಿಗಳ ಬೋಧಿಗೋಸ್ಕರ ಅವರ ಮೇಲಿರುವ ಕೃಪೆಯಿಂದ ನಿನ್ನನ್ನು ಕುರಿತು ಹೇಳುವರು; (ನಿಜವಾಗಿ ನೋಡಿದರೆ) ನಿನ್ನನ್ನು ಕುರಿತು ಏನೂ ಹೇಳಲಾಗುವದಿಲ್ಲ.

೧೯. ನಿರ್ನಿಮಿತ್ತಳಾದ, ನಿರಂಜನಳಾದ, ಎಲ್ಲಾ ವಾಗ್ವಿಷಯಗಳಿಗೆ ಅತೀತ ಳಾದ, ಆಶ್ರಯರಹಿತಳಾದ ನಿನ್ನನ್ನು ಸ್ತುತಿಸಲು ಯಾವನು ತಾನೇ ಶಕ್ತನು.

೨೦. ನಿನ್ನನ್ನು ಸ್ತೋತ್ರಮಾಡಲು ಆಗದಿದ್ದರೂ ಇಂತಹ ಸ್ತವಗಳಿಂದ ನಿನ್ನನ್ನು ಮುಚ್ಚಿ, ಸ್ತುತಿಮಾಡಲು ಇಚ್ಛಿಸುವ ನಾವು ಸಂತೋಷವನ್ನು ಹೊಂದಿರುತ್ತೇವೆ.

೨೧. ಪ್ರಜ್ಞಾಪಾರಮಿತದ ಸ್ತೋತ್ರದಿಂದ ನನಗೇನಾದರೂ ಪುಣ್ಯವುಂಟಾ ಗಿದ್ದರೆ ಅದು ಇಡೀ ಜಗತ್ತಿಗೆ ಶೀಘ್ರವಾಗಿ ಬೋಧಿಯನ್ನುಂಟು ಮಾಡಲಿ.